॥ ಶ್ರೀ ॥

# ವೀರಶೈವ ಕರದರ್ಪಣ




ಸಂಪಾದಕರು- { ಟಿ. ಯಸ್. ಚನ್ನಪ್ಪ, ಮಾಡಲ್ ಮುದ್ರಾಕ್ಷರಶಾಲಾ;
ಬಿ. ಪುಟ್ಟಸ್ವಾಮಯ್ಯ, ಬೆಂಗಳೂರು ಸಿಟಿ.

ಪ್ರಕಾಶಕರು-

ದಿ ಟ್ರೇಡ್ಸ್ ಪಬ್ಲಿಸಿಟಿ ಕಾರ್ಪೊರೇಷನ್ ಲಿಮಿಟೆಡ್, ಬೆಂಗಳೂರು ಸಿಟಿ.

1927

Telegrams : "GEMS."
Telephone No. 111.

ESTABLISHED IN 1869.

By Appointment to
His Highness the Maharaja of Mysore,
G. C. S. I.

# C. Krishniah Chetty & Sons,

## JEWELLERS AND SILVERSMITHS.

## *152-53, Commercial Street, Bangalore.*

Direct Importers of Diamonds and other Precious Stones.

**"DIAMONDS" Finest Quality.**

Available at all times in wholesale and retail with small profits.



**Manufacturers of Silver Cups, Shields, Medals etc., for Races, Sports, Tournaments, Presentation articles a speciality.**

## *PRICES MODERATE.*

**All kinds of up-to-date Jewels in Gold, and Gem set made to order within short notice.**

## *A TRIAL ORDER WILL CONVINCE:*

# ವೀರಶೈವ ಕರದರ್ಪಣ

ಸಂಪಾದಕರು

ಮುಖ್ಯ ಸಂಪಾದಕ:—ಟಿ. ರ್ಯ. ಚನ್ನಪ್ಪ, ಮಾಡಲ್ ಮುದ್ರಾಕ್ಷರ ಶಾಲಾ.

ಸಹಾಯ ಸಂಪಾದಕ:—ಬಿ. ಪುಟ್ಟಸ್ವಾಮಯ್ಯ, ಬೆಂಗಳೂರು ಸಿಟಿ.

ಪ್ರಕಾಶಕರು

ದಿ ಟ್ರೇಡ್ಸ್ ಪಬ್ಲಿಸಿಟಿ ಕಾರ್ಪೊರೇಷನ್ ಲಿಮಿಟೆಡ್,

ಬೆಂಗಳೂರು ಸಿಟಿ.

# ಸಂಪಾದಕೀಯ ಬಿನ್ನಹ.

ಇಂದು, ಬೆಂಗಳೂರಿನಲ್ಲಿ ನಡೆಯುತ್ತಿರುವ ಮಹಾಸಭಾ ಕಾಲಕ್ಕೆ ದಯಮಾಡಿಸುವ ಮತಬಾಂಧವರಿಗೆ ಸಾಹಿತ್ಯ ರೂಪದ ಕಾಣಿಕೆಯೊಂದನ್ನು ಅರ್ಪಿಸಬೇಕೆಂದು ನಮಗೆ ಅಪೇಕ್ಷೆಯಿದ್ದಿತು. ನಮ್ಮ ವಿಶ್ವಾಸಿಗಳ ಪ್ರೋತ್ಸಾಹದಿಂದ ಇಂತಹುದೊಂದು ಪುಸ್ತಕವನ್ನೇ ಪ್ರಕಟ ಮಾಡಬೇಕೆಂದು ಈಗ್ಗೆ ೪೮ ದಿನಗಳ ಹಿಂದೆ ತೀರ್ಮಾನಿಸಿ, ಕೂಡಲೆ ಲೇಖನಗಳನ್ನು ಸಂಗ್ರಹ ಮಾಡುವಬಗ್ಗೆ ೧೫ ದಿನಗಳ ಅವಧಿಯನ್ನಿಟ್ಟುಕೊಂಡು, ಪತ್ರ ಮೂಲಕವೂ ಸ್ವಂತ ಪ್ರವಾಸ ಮಾಡುವುದರ ಮೂಲಕವೂ ಪ್ರಯತ್ನ ಮಾಡಿದೆವು. ಆದರೆ ನಮ್ಮ ಅವಧಿಯೊಳಗೆ ವಿಷಯ ಸಂಗ್ರಹ ಮಾಡುವುದು ದುಸ್ತರವಾಯಿತು. ಹೇಗೋ ಮಾಡಿ ಇಂದಿಗೆ ೨೦ ದಿನಗಳ ಕೆಳಗೆ ಲೇಖನಗಳು ಮುದ್ರಣಕ್ಕೆ ಕೊಡಲ್ಪಟ್ಟವು. ಹಗಲು ರಾತ್ರಿಗಳೆನ್ನದೆ, ಕೆಲಸ ನಡೆಸಿದುದರ ಫಲವಾಗಿ ಪುಸ್ತಕವು ಈ ಆಕಾರದಲ್ಲಿ ಇಂದು ಹೊರಬಿದ್ದಿದೆ.

ಇಷ್ಟು ಅವಧಿಯೊಳಗೇ ಲೇಖನಗಳು ಬರೆಯಲ್ಪಟ್ಟು, ಪುಸ್ತಕವು ಮುದ್ರಣವಾಗುವುದೆಂದರೆ ತುಂಬಾ ಸಾಹಸದ ಕೆಲಸವು. ಮೇಲಾಗಿ, ಭಾವಚಿತ್ರದ ಪಡಿಯಚ್ಚು (ಫೋಟೋ ಬ್ಲಾಕು) ಗಳನ್ನು ತಯಾರು ಮಾಡುವವರ ಕೈ ಕಾಯಬೇಕಾಗಿ ಆದರಿಂದ ಬೇರೆ ಬಹಳ ತೊಂದರೆಯಾಯಿತು. ಈ ಪಡಿಯಚ್ಚು (ಬ್ಲಾಕು) ಗಳು ನಮಗೆ ಅವರಿಂದ ತಲಪುತ್ತ ಬಂದಂತೆ ಬೇರೆ ಬೇರೆ ಮುದ್ರಣಾಲಯಗಳಲ್ಲಿ ಅವುಗಳನ್ನು ಮುದ್ರಣ ಮಾಡಿಸಿದ್ದರಿಂದ ಅವುಗಳನ್ನು ಪ್ರಾಂತಿಕವಾಗಿ ಸಹಾ ವಿಂಗಡಿಸಿ ಮುದ್ರಿಸಲಾಗಲಿಲ್ಲ.

ಆಧುನಿಕ ವೀರಶೈವ ದೊಡ್ಡಮನುಷ್ಯರುಗಳ ಚಿತ್ರಗಳನ್ನೂ, ಅವರ ಸಂಕ್ಷಿಪ್ತ ಜೀವನ ಚರಿತ್ರೆಗಳನ್ನೂ ಇದರಲ್ಲಿಯೇ ಮುದ್ರಿಸಿ ಸೇರಿಸಬೇಕೆಂದು ನಮಗೆ ತುಂಬಾ ಅಭಿಪ್ರಾಯವಿತ್ತು. ಆದರೆ ಅವಧಿಯು ಸಮಾಪಿಸಿದ್ದರಿಂದ ಅವರ ಭಾವಚಿತ್ರಗಳನ್ನು ಮಾತ್ರ ಮುದ್ರಿಸಲಾಗಿದೆ. ಅದರಲ್ಲೂ ಕೆಲವು ಬ್ಲಾಕುಗಳು ನಮಗೆ ಈ ದಿನದವರೆಗೂ ತಲುಪಲಿಲ್ಲವಾದ್ದರಿಂದ ಅವುಗಳನ್ನು ಮುದ್ರಿಸಲಾಗಲಿಲ್ಲ. ಈ ಬಗ್ಗೆ ಅವರೆಲ್ಲರ ಕ್ಷಮೆಯನ್ನು ನಾವು ಬೇಡುತ್ತೇವೆ.

"ವೀರಶೈವ ಕರದರ್ಪಣ" ದಂತಹ ಒಂದು ಪುಸ್ತಕದ ಅವಶ್ಯಕತೆಯು ಸಮಾಜಕ್ಕೆ ಇದೆಯೆಂಬುದನ್ನು ನಾವು ಬಲ್ಲೆವಾದ್ದರಿಂದಲೇ ಈ ವಿಷಯಕ್ಕೆ ಕೈಹಾಕಿದೆವು. ಆದರೆ ನಮ್ಮಾ ಪುಸ್ತಕದಿಂದ ಆ ಅಭಾವವು ಸಂಪೂರ್ಣವಾಗಿ ಪರಿಹಾರವಾಯಿತೆಂದು ಹೇಳಲಾರೆವು. ಆದರೆ ಇಷ್ಟುಮಾತ್ರ ನಿಜ:-ಈ ಪುಸ್ತಕವು ಮುಂದಾಗಬಹುದಾದ ಅಂತಹ ಗ್ರಂಥದ ಒಂದು ಮಾದರಿ ಮಾತ್ರ. ಆ ವಿಷಯವಾಗಿ ಪ್ರಯತ್ನ ಮಾಡುವವರಿಗೆ ಈ ಪುಸ್ತಕವು ಮಾರ್ಗವನ್ನು ಸ್ವಲ್ಪ ಮಟ್ಟಿಗೆ ಸುಲಭಮಾಡಿಕೊಟ್ಟಿರುವುದು.

ಈ ಪುಸ್ತಕದಲ್ಲಿ ಅನಂತ ಕೊರತೆಗಳು ಇರಬಹುದು. ಇದಕ್ಕೆ ಮುಖ್ಯ ಕಾರಣವು ಅಲ್ಪಾವಧಿಯು. ನಾವು ಹಗಲು ರಾತ್ರಿಯೆನ್ನದೆ ಸಂಪೂರ್ಣ ನಿದ್ರಾಭಂಗ ಮಾಡಿಕೊಂಡು, ಇಂದು-ಕಾಲಕ್ಕೆ ಸರಿಯಾಗಿ, ಪುಸ್ತಕವನ್ನು ಹೇಗೋ ಹೊರಹೊರಡಿಸಲಾಯಿತು. ಇದಕ್ಕೋಸ್ಕರವಾಗಿ ಅನೇಕ ವಿಷಯುಗಳನ್ನು ನಾವು ಸಂಕ್ಷಿಪ್ತಮಾಡಬೇಕಾಗಿ ಬಂದಿತು. ಮತ್ತೆ ಕೆಲವು ವಿಷಯಗಳನ್ನು ಸಂಪೂರ್ಣ ಬಿಡಬೇಕಾಯಿತು. ಈ ಎಲ್ಲ ಭಾಗಗಳನ್ನು ಸರಿಪಡಿಸುವ ಸುಯೋಗವು ಒದಗಿದರೆ, ಹಾಗೆ ಮಾಡದೆ ಇರೆವು.

ಅನೇಕ ಮಹನೀಯರು ನಮ್ಮ ಕೋರಿಕೆಯಂತೆ ತಮ್ಮ ಲೇಖನಗಳನ್ನು ಕಳುಹಿಸುವುದರ ಮೂಲಕವೂ, ಫೋಟೋ ಬ್ಲಾಕುಗಳನ್ನು ಎರವು ಕೊಡುವುದರ ಮೂಲಕವೂ ನಮಗೆ ಉಪಕಾರ ಮಾಡಿರುವರು. ಅವರಿಗೆ ನಮ್ಮ ವಂದನೆಗಳನ್ನು ಅರ್ಪಿಸುವೆವಲ್ಲದೆ, ಅನೇಕ ಲೇಖನಗಳನ್ನೂ ಬ್ಲಾಕುಗಳನ್ನೂ ನಾವು ಉಪಯೋಗಿಸಿಕೊಳ್ಳಲಾಗದೆಹೋದ ಬಗ್ಗೆ ಅವರ ಕ್ಷಮೆಯನ್ನು ಬೇಡುವೆವು.

ಎರಡನೆಯ ಮುದ್ರಣವನ್ನು ನಿಧಾನವಾಗಿ ದೋಷಗಳಿಲ್ಲದಂತೆ ಮುದ್ರಿಸಬೇಕೆಂದು ನಮ್ಮ ಅಪೇಕ್ಷೆಯಿರುವುದರಿಂದ ಗುಣೈಕಪಕ್ಷಪಾತಿಗಳಾದ ವಾಚಕರು ಇದರಲ್ಲಿ ಮಾಡಬೇಕಾದ ಬದಲಾವಣೆಗಳನ್ನು ತಿಳಿಸಿದರೆ, ಕೃತಜ್ಞತೆಯಿಂದ ತಿದ್ದಿಕೊಳ್ಳುವೆವು.

ಬೆಂಗಳೂರು,
೨೮-೧೨-೨೭.

ಟಿ. ಯರ್. ಚನ್ನಪ್ಪ, ಮುಖ್ಯ ಸಂಪಾದಕ.
ಬಿ. ಪುಟ್ಟಸ್ವಾಮಯ್ಯ, ಸಹಾಯ ಸಂಪಾದಕ.

# ವಿ ಷ ಯ ಸೂ ಚ ನೆ.

---

ಮೈಸೂರು ಸಂಸ್ಥಾನದ ಘನಹೊಂದಿದ

ಶ್ರೀಮದ್ಯುವರಾಜ ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್

ಜಿ. ಸಿ. ಐ. ಇ., ಯವರು



# ಹತ್ತನೆ ಅಖಿಲಭಾರತ ವೀರಶೈವ ಮಹಾಸಭೆಗೆ

**ಬೊಂಬಾಯಿಯಿಂದ ಕಳುಹಿಸಿದ ಸಂದೇಶವು.**

ಗೌರವೀಯ ರಾವಬಹದ್ದೂರ್ ಎಸ್. ಟಿ. ಕಂಬಳಿಯವರ ಅಧ್ಯಕ್ಷತೆಯಲ್ಲಿ ಈ ದಿವಸ ನಡೆಯುವ ಯಾವದ್ಭಾರತ ೧೦ನೇ ವೀರಶೈವ ಮಹಾಸಭೆಯ ಆರಂಭೋತ್ಸವವನ್ನು ನೆರವೇರಿಸಲು ನಾವು ಪರಸ್ಥಳದಲ್ಲಿರುವದರಿಂದ ಅವಕಾಶವಿಲ್ಲವಾಗಿ ಬಹಳವಾಗಿ ವಿಷಾದಿಸುತ್ತೇವೆ. ಮತ್ತು ಪ್ರಶಸ್ತವೂ, ಪ್ರಮುಖವೂ ಆದ ವೀರಶೈವ ಸಮಾಜವು ಶ್ರೀಬಸವೇಶ್ವರಸ್ವಾಮಿಯವರ ಉದಾತ್ತ ಧೈರ್ಯೋತ್ಸಾಹಗಳಿಂದ ಕೂಡಿ ಸರ್ವತೋಮುಖವಾಗಿ ವೃದ್ಧಿಹೊಂದಲೆಂದೂ, ಈ ಮಹಾಸಭೆಯು ಜಯಶೀಲವಾಗಿ ನಡೆಯಲೆಂದೂ ಆಶಿಸುತ್ತೇವೆ.



ದಿವಾನ್ ಬಹದ್ದೂರ್ ರಾಜಸಭಾ ಭೂಷಣ

ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು,

ಕೆ. ಟಿ. ಸಿ. ಐ. ಯಿ.,

ಬೆಂಗಳೂರು ಸಿಟಿ.

೧೧ನೆ ಅಖಿಲ ಭಾರತ ವೀರಶೈವ ಮಹಾಸಭಾ ಸ್ವಾಗತ ಸಂಘದ

ಅಧ್ಯಕ್ಷರು.



ರಾವ್ ಬಹದ್ದೂರ್

ಸಿದ್ದಪ್ಪಾ ತೋಟಪ್ಪಾ ಕಂಬಳಿ

ಬಿ. ಎ., ಎಲ್. ಎಲ್. ಬಿ.,

ಹೈಕೋರ್ಟ ವಕೀಲ್, ಡೆಪ್ಯುಟಿ ಪ್ರೆಸಿಡೆಂಟ್

ಬೊಂಬಾಯಿ ನ್ಯಾಯವಿಧಾಯಕ ಸಭಾ,

ಹುಬ್ಬಳ್ಳಿ.

೧೧ನೆ ಅಖಿಲಭಾರತ ವೀರಶೈವ ಮಹಾಸಭಾ

ಪ್ರೆಸಿಡೆಂಟರು.




ಮೈಸೂರು ಶ್ರೀಮನ್ಮಹಾರಾಜ ಮುಮ್ಮಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರವರು

|| ಓಂ ||

ಲೇಖಕ
ವೇ|| ಧರ್ಮರತ್ನ
ಶ್ರೀ ಶಂಕರಶಾಸ್ತ್ರಿ

# ವೀರಶೈವ ಮತತತ್ವ ನಿರೂಪಣೆ.

ಮುಳೇ ಮಠಾಧ್ಯಕ್ಷ
ಉಮಚಿಗಿ

ವೀರಶೈವಮತಕ್ಕೆ, ದ್ವೈತಾದ್ವೈತವೆಂತಲೂ, ಶಕ್ತಿವಿಶಿಷ್ಟಾದ್ವೈತವೆಂತಲೂ ಶಿವಾದ್ವೈತವೆಂತಲೂ, ವಿಶಿಷ್ಟಾದ್ವೈತವೆಂತಲೂ, ಬೇರೆಬೇರೆ ನಾಮಗಳುಂಟು. ಈ ನಾಲ್ಕು ನಾಮಗಳು ಒಂದೇ ಅರ್ಥವನ್ನು ಕೊಡುತ್ತವೆ. ದ್ವೈತಾದ್ವೈತರೂಪವಾದ ವೀರಶೈವ ಮತವನ್ನು ನಿರೂಪಿಸಬೇಕಾದರೆ ಮೊದಲು ದ್ವೈತಮತವನ್ನೂ, ಅದ್ವೈತಮತವನ್ನೂ, ಸಂಕ್ಷೇಪತಃ ತೋರಿಸಿ, ಅವುಗಳ ನಿರಸನವನ್ನು ಹೇಳಿ, ಆಮೇಲೆ ವೀರಶೈವ ಮತವನ್ನು ನಿರೂಪಿಸಬೇಕಾಗುತ್ತದೆ. ಯಾಕೆಂದರೆ ವೀರಶೈವ ಮತದಲ್ಲಿ ದ್ವೈತ-ಅದ್ವೈತಗಳೆರಡೂ ಪಾರಮಾರ್ಥಗಳಾಗಿವೆ. ದ್ವೈತವೆಂದರೆ ಭೇದವು. ಅದ್ವೈತವೆಂದರೆ ಅಭೇದವು ದ್ವೈತವಾದಿಗಳೆಲ್ಲರು ಜೀವೇಶ್ವರ ಭೇದ, ಜೀವ-ಜೀವರ ಭೇದ, ಈಶ್ವರನಿಗು ಪೃಥಿವ್ಯಾದಿ ಜಡಪ್ರಪಂಚಕ್ಕು ಭೇದ; ಈಶ್ವರನು ಕುಲಾಲನಂತೆ ಕೇವಲ ನಿಮಿತ್ತ ಕಾರಣನು, ಉಪಾದಾನಕಾರಣನಲ್ಲ, ಮತ್ತು ಅತ್ಯಂತವಾಗಿ ಜ್ಞಾನ, ಸುಖ ದುಃಖಾದಿ ಯಾವ ಗುಣವು ಇಲ್ಲದೆ, ಕಲ್ಲಿನಂತೆ ಇರುವುದೇ ಜೀವಾತ್ಮನ ಮುಕ್ತಿ ಎಂದು ಹೇಳುವರು. ಕೆಲವು ದ್ವೈತಿಗಳು ವಿಷ್ಣು ಲೋಕದಲ್ಲಿ ವಿಷ್ಣುವಿನ ದಾಸರಾಗಿ, ವಿಷ್ಣುವಿನಂತೆ ಯಾವಾಗಲು ದುಃಖವಿಲ್ಲದೆ, ಸುಖಿಗಳಾಗಿರುವುದೇ ಮುಕ್ತಿ ಎಂದು ಹೇಳುವುದುಂಟು. ತಮ್ಮ ದ್ವೈತಮತಕ್ಕೆ "ದ್ವಾಸುಪರ್ಣಾ ಸವಿಜಾ ಸಖಾಯಾ ಸಮಾನಂ ವೃಕ್ಷಂ ಪರಿಸ್ವಜಾತೇ" ಎಂಬುವ ಮೊದಲಾದ, ಭೇದಪ್ರತಿಪಾದಕ ಶೃತಿಗಳನ್ನು ಪ್ರಮಾಣಗಳನ್ನಾಗಿ ತೆಗೆದುಕೊಳ್ಳುವರು. ಭಕ್ತಿ ಜ್ಞಾನ ವೈರಾಗ್ಯಾದಿಗಳನ್ನು ಮುಕ್ತಿಗೆ ಉಪಾಯವನ್ನಾಗಿ ಹೇಳುವರು. ಕೆಲವು ದ್ವೈತಿಗಳಂತು "ಭಕ್ತ್ಯಾಲಭ್ಯಸ್ತ್ವನನ್ಯಯಾ," ಎಂಬುವ ಭಗವದ್ಗೀತೆಯಂತೆ ಭಕ್ತಿಗೆ ಹೆಚ್ಚು ಮಹತ್ವವನ್ನು ಕೊಟ್ಟಿರುವರು.

ನಿರಸನ—ಇಂತಹ ಪಾಷಾಣಪ್ರಾಯವಾದ ಮುಕ್ತಿಯಲ್ಲಿ ಯಾರಿಗೆ ಪ್ರವೃತ್ತಿಯುಂಟಾಗಬೇಕು? ಯಾರಿಗೂ ಆಗಲಾರದು. ಆದ್ದರಿಂದ ಮುಕ್ತಿಯ ಸಲುವಾಗಿ ಹೇಳಿದ ಶ್ರವಣ ಮನನಾದಿ ಸಾಧನಗಳು, ವ್ಯರ್ಥಗಳು. ಲೋಕದಲ್ಲಿ ಪ್ರತಿಯೊಬ್ಬ ಮನುಷ್ಯನು ದುಃಖಸಾಧನಗಳಲ್ಲಿ ನಿವೃತ್ತಿಯನ್ನೂ, ಸುಖಸಾಧನಗಳಲ್ಲಿ ಪ್ರವೃತ್ತಿಯನ್ನೂ ಹೊಂದುವುದುಂಟು. ಸುಖವಿಲ್ಲದ ಮುಕ್ತಿಯಲ್ಲಿಯೂ ಅದರ ಸಾಧನಗಳಲ್ಲಿಯೂ ಯಾರಿಗೂ ಪ್ರವೃತ್ತಿಯಾಗುವುದಿಲ್ಲವಷ್ಟೆ; ಮತ್ತು "ಆನಂದಂ ಬ್ರಹ್ಮಣೋ ವಿದ್ವಾನ್—" "ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಇತ್ಯಾದಿ ಶೃತಿಗಳಿಂದ ಆನಂದಾದಿ ಗುಣಗಳುಳ್ಳದ್ದು ಬ್ರಹ್ಮವೆಂತಲೂ, "ಬ್ರಹ್ಮವಿದಾಪ್ನೋತಿಪರಂ" "ಯಥಾನದ್ಯಃ ಸ್ಯಂದಮಾನಾ ಸಮುದ್ರೇ ಅಸ್ತಂಗಚ್ಛಂತಿ ನಾಮರೂಪೇ ವಿಹಾಯ|| ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ" ಇತ್ಯಾದಿ ಶೃತಿಗಳಿಂದ ಆನಂದಾದಿ ಕಲ್ಯಾಣ ಗುಣಗಳುಳ್ಳ ಪರಶಿವಬ್ರಹ್ಮಪ್ರಾಪ್ತಿಯೇ ಮುಕ್ತಿಯೆಂದು ಕಂಡುಬರುವುದರಿಂದಲೂ, "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಎಂಬುವ ಶ್ರುತಿಗಳಿಂದ ಜೀವೇಶ್ವರರಿಗೆ ಅಭೇದವು ಸಿದ್ಧವಾಗುವುದರಿಂದಲೂ ಕೇವಲ ದ್ವೈತಿಗಳ ಮತವು ಸರ್ವಶ್ರುತಿ ಸಮ್ಮತವಲ್ಲ. ಇನ್ನು ವಿಷ್ಣುಸಾರೂಪ್ಯ ಮುಕ್ತಿಯೂ ಕೂಡ ವಾಸ್ತವ ಮುಕ್ತಿಯೆನಿಸದು. ಯಾಕೆಂದರೆ ಯಾರ ಭಯವೂ ಇಲ್ಲದೆ ಸದಾ ಸುಖಭೋಗವೇ ಮುಕ್ತಿಯು. ಯಾವನು ತನಗಿಂತಲೂ ಭಿನ್ನವಾದದ್ದನ್ನು ನೋಡುವನೋ, ಅವನಿಗೆ ಭಯವು ತಪ್ಪದೆಂದು ಶ್ರುತಿಯು ಹೇಳುತ್ತದೆ. ಆಂದಮೇಲೆ ಈ ವೈಷ್ಣವ ದ್ವೈತಿಗಳು ಹೇಳುವ ಮುಕ್ತಿಯು ಶ್ರುತ್ಯುಕ್ತಮುಕ್ತಿಯಲ್ಲ. "ಅಭಯಂ ವೈಜನಕಃಪ್ರಾಪ್ತೋಽಸಿ" ಎಂಬುವುದರಿಂದ ಮುಕ್ತಿಯು ಭಯವಿಲ್ಲದ್ದೆಂದು ಸ್ಪಷ್ಟವಾಗುತ್ತದೆ. ಲೋಕದಲ್ಲಿ ತನಗಿಂತಲೂ ಮತ್ತೊಬ್ಬ ಹೆಚ್ಚಿನ ಅಧಿಕಾರಿ ಯಿದ್ದರೆ ಅವನ ಭಯವು ತಪ್ಪಲಾರದು. ಆದ್ದರಿಂದ ಇವರ ಮುಕ್ತಿಯು ಶ್ರುತಿ-ಯುಕ್ತಿ-ಅನುಭವ ವಿರುದ್ಧವು. ಇದಲ್ಲದೆ ಇವರು ಶ್ರುತಿಸೂತ್ರೋಕ್ತ ಬ್ರಹ್ಮಶಬ್ದಕ್ಕೆ ವಿಷ್ಣುವೆಂದರ್ಥ ಮಾಡುವುದು. "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೆ" "ವಿಶ್ವಾಧಿಕೋ ರುದ್ರಃ" "ಶಿವಮದ್ವೈತಂಚತುರ್ಥಂ" "ಯದಾ ತಮಸ್ತನ್ನ ದಿವಾನರಾತ್ರಿರ್ನಸನ್ನ ಚಾಸಚ್ಛಿವ ಏವ ಕೇವಲಃ" ಇತ್ಯಾದ್ಯನಂತ ಶ್ರುತಿಗಳಿಗೆ ವಿರುದ್ಧವು. "ನಿರಂಜನಃಪರಮಂ ಸಾಮ್ಯಮುಪೈತಿ" ಎಂಬುವ ಶ್ರುತಿಯು ಮುಕ್ತಿದೆಶೆಯಲ್ಲಿಯೂ ಕೂಡ ಜೀವೇಶ್ವರಭೇದವನ್ನು ಹೇಳುತ್ತದಲ್ಲವೆ? ಅಂದಮೇಲೆ ನಾವು ಹೇಳುವ ವಿಷ್ಣು ಸಾರೂಪ್ಯ ಮುಕ್ತಿಯು ಶ್ರುತಿಸಮ್ಮತವು ಎಂದು ಅವರಂದರೆ, ಇಲ್ಲಿ ಸಾಮ್ಯವು ಭೇದಘಟಿತವಲ್ಲ; ಭೇದಘಟಿತವೆಂದರೆ 'ಪರಮಂ' ಎಂಬುವ ಪದವು ವ್ಯರ್ಥವಾಗುವುದು. ಆದ್ದರಿಂದ ಅನೇಕ ಅಭೇದ ಬೋಧಕ ಶ್ರುತಿಬಲದಿಂ

ದಲೂ ಪರಮಪದವು ವ್ಯರ್ಥವಾಗಬಾರದೆಂಬುವುದರಿಂದಲೂ ಸಾಮ್ಯ ಪದಕ್ಕೆ ಕೇವಲ ಅಭೇದವೆಂದೇ ಅರ್ಥಮಾಡಬೇಕು. ಶಾಸ್ತ್ರಕಾರರು, ಸಾದೃಶ್ಯವು ಕೇವಲ ಅಭೇದರೂಪವೆಂತಲೂ, ಹೇಳಿದ್ದಾರೆ: "ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ | ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ" ಆದ್ದರಿಂದ ಕೇವಲ ದ್ವೈತಿಗಳ ಮತವು ಶ್ರುತಿಯುಕ್ತ್ಯನುಭವವಿರುದ್ಧವಾಗಿರುವದರಿಂದ ಮುಮುಕ್ಷುಗಳಿಗುಪಯುಕ್ತವಲ್ಲ.

ಮತ್ತು ಈ ಕೇವಲ ದ್ವೈತಿಗಳು, ಈಶ್ವರನು ಕೇವಲ ನಿಮಿತ್ತ ಕಾರಣನೆಂದು ಹೇಳುವುದು ಜಗದುಭಯಕಾರಣತ್ವವನ್ನು ಹೇಳುವ ಅನೇಕ ಶ್ರುತಿ ಸೂತ್ರಗಳಿಗೆ ವಿರುದ್ಧವಾಗುವುದು. "ಯತೋವಾ ಇಮಾನಿ ಭೂತಾನಿ ಜಾಯಂತೆ" "ಜನ್ಮಾದ್ಯಸ್ಯ ಯತಃ" ಇತ್ಯಾದಿ ಸೂತ್ರಗಳಿಂದ ಜಗದುಭಯಕಾರಣತ್ವವು ಹೇಳಲ್ಪಡುವುದು. "ಯಥೊರ್ಣನಾಭಿ ಸೃಜತೇ ಗ್ರಸತೇ" ಇತ್ಯಾದಿ ಶ್ರುತಿಗಳಿಂದ ಬ್ರಹ್ಮವು ನಿಮಿತ್ತಕಾರಣವು ಮತ್ತು ಉಪಾದಾನಕಾರಣವೆಂಬಲ್ಲಿ ದೃಷ್ಟಾಂತವು ಹೇಳಲ್ಪಡುತ್ತದೆ. ಜೇಡ ಹುಳವು ಜಾಲಕ್ಕೆ ಉಪಾದಾನಕಾರಣವೂ ನಿಮಿತ್ತಕಾರಣವೂ ಆಗಿರುವಂತೆ ಬ್ರಹ್ಮವು ಜಗತ್ತಿಗೆ ಉಪಾದಾನ ಕಾರಣವೂ ನಿಮಿತ್ತಕಾರಣವೂ ಆಗಿರುವುದೆಂದು ಶ್ರುತಿವಾಕ್ಯಗಳ ತಾತ್ಪರ್ಯವು. ಆದರೆ ಕುಂಬಾರನು ತನ್ನಂಶವಾಗದಿರುವ ಮಣ್ಣನ್ನು ತೆಗೆದುಕೊಂಡು ಕೊಡವನ್ನು ಮಾಡುವನು. ಆದ್ದರಿಂದ ಕೊಡಕ್ಕೆ ಕುಂಬಾರನು ಕೇವಲ ನಿಮಿತ್ತಕಾರಣನಾಗುವನು. ಜೇಡಹುಳವು ತನ್ನಂಶಗಳಾದ ತಂತುಗಳಿಂದ ಜಾಲವನ್ನು ಮಾಡುವುದು. ಆದ್ದರಿಂದ ಜೇಡಹುಳವು ಉಭಯಕಾರಣವಾಗುವದು. ಈಶ್ವರನೂ ಕೂಡ ತನ್ನಂಶವಾದ ಶಕ್ತಿಯಿಂದ ಜಗತ್ತನ್ನು ಮಾಡುವನು. ಆದ್ದರಿಂದ ಶಿವನು ಜಗತ್ತಿಗೆ ಉಭಯಕಾರಣನಾಗುವನು. ಈ ಉಭಯಕಾರಣತ್ವವನ್ನು ಹೇಳುವ ಅನೇಕ ಶ್ರುತಿವಾಕ್ಯಗಳಿಗೆ ದ್ವೈತಿಗಳ ಮತವು ವಿರುದ್ಧವಾಗಿದೆ.

**ಕೇವಲ ಅದ್ವೈತಿಗಳ ಮತವನ್ನು ವಿಚಾರಿಸುವಾ—** ಈ ಅದ್ವೈತ ಮತವು ಶ್ರೀ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟು, ಹಿಂದೂದೇಶದಲ್ಲಿ ಎಲ್ಲ ಕಡೆಗೂ ಬಹು ಪ್ರಸಿದ್ಧಿಯನ್ನು ಹೊಂದಿರುವುದು. ಈ ಮತವು ಇಷ್ಟು ಪ್ರಸಿದ್ಧಿಯನ್ನು ಹೊಂದಲು ಈ ಮತದ ಭಾಷ್ಯಾದಿ ಗ್ರಂಥಗಳು ಎಲ್ಲಾ ಭಾಷೆಗಳಲ್ಲಿ ತರ್ಜುಮೆಯಾಗಿರುವುದೇ ಕಾರಣವು. ಶ್ರೀ ಜಗದ್ಗುರು ಪಂಚಾಚಾರ್ಯರ ಭಾಷ್ಯಾದಿ ಗ್ರಂಥಗಳು ದೊರಕದೇ ಅವು ಅಚ್ಚಾಗದಿರುವುದೇ ವೀರಶೈವಮತದ ಅಪ್ರಸಿದ್ಧಿಗೆ ಕಾರಣವು. ಅವುಗಳನ್ನು ಎಲ್ಲ ಭಾಷೆಗಳಲ್ಲಿ ತರ್ಜುಮೆ ಮಾಡಿ ಮುದ್ರಣ ಮಾಡಿ ಪ್ರಚುರಪಡಿಸಿದಲ್ಲಿ ವೀರಶೈವ ಮತವು ಅತ್ಯಂತ ಪ್ರಸಿದ್ಧಿಗೆ ಬರುವುದರಲ್ಲಿ ಯಾವ ಸಂದೇಹವೂ ಇಲ್ಲ. ಅದ್ವೈತಮತಸ್ಥಾಪಕರಾದ ಶಂಕರಾಚಾರ್ಯರಿಗೆ ಶ್ರೀ ಚಂದ್ರಮೌಳೀಶ್ವರ ಲಿಂಗವನ್ನು ಅನುಗ್ರಹಿಸಿದ ಶ್ರೀ ರೇಣುಕ ಭಗವತ್ಪಾದರಿಂದ ರಚಿಸಲ್ಪಟ್ಟ ಭಾಷ್ಯಾದಿ ಗ್ರಂಥಗಳು ಪ್ರಕಟವಾದರೆ ಅವುಗಳಿಗೆ ಪ್ರಾಶಸ್ತ್ಯವು ದೊರೆಯದಿದ್ದೀತೇನು? ಇರಲಿ. ಈ ಅದ್ವೈತಿಗಳಿಗೂ ವೀರಶೈವರಿಗೂ ಇರುವ ಹದಿನೈದು ಮುಖ್ಯ ಭೇದಗಳನ್ನು ನಮ್ಮ ವೀರಶೈವ ಸಿದ್ಧಾಂತ ಸುಧಾಕರದಲ್ಲಿ ತೋರಿಸಿರುವುದಲ್ಲದೇ ಒಂದೊಂದರಮೇಲೂ ಬಹು ವಿಸ್ತೃತವಾದ ವಿಚಾರವನ್ನೂ ಸಹ ಮಾಡಿದ್ದಾಗಿದೆ. ಆದರೂ ಸಂಕ್ಷೇಪವಾಗಿ ಇಲ್ಲಿ ವಿಚಾರಿಸುವಾ. ಅವರ ಪ್ರಕ್ರಿಯೆಯು. "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ" ಎಂಬದಾಗಿ ಪ್ರತಿಬಿಂಬವಾದ ಅವಚ್ಛಿನ್ನವಾದಗಳನ್ನು ಹೇಳುತ್ತಾರೆ, ಮತ್ತು ಅಧ್ಯಾಸವನ್ನು ಸ್ವೀಕರಿಸುತ್ತಾರೆ. ಅಧ್ಯಾಸದಿಂದಲೆ ಸರ್ವಜಗದುತ್ಪತ್ತಿಯನ್ನು ಹೇಳುವರು. ಈ ಮಿಥ್ಯಾಭೂತವಾದ ಅಧ್ಯಾಸವೇ ಇವರ ಬಂಡವಾಳವು. ಆದ್ದರಿಂದಲೇ ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಗಳ ವ್ಯಾಖ್ಯಾನ ಮಾಡುವ ಮೊದಲು ಅಧ್ಯಾಸ ಭಾಷ್ಯವನ್ನು ಬರೆದುಕೊಂಡು ಅಧ್ಯಾಸಸಿದ್ಧಿಯನ್ನು ಮಾಡಿದಂತೆ ಮಾಡಿರುವರು. ಬ್ರಹ್ಮಸೂತ್ರಗಳಲ್ಲಿಯೂ ಉಲ್ಲೇಖವಿಲ್ಲದ ಅಧ್ಯಾಸವನ್ನು ಇವರು ಒಪ್ಪುವದರಿಂದ, ಇವರ ಮತವು ಬ್ರಹ್ಮ ಸೂತ್ರಗಳಿಗೆ ವಿರುದ್ಧವು. ಬ್ರಹ್ಮಸೂತ್ರಗಳಲ್ಲಿ ಲ್ಲಿಯಾದರೂ ಅಧ್ಯಾಸದ ಉಲ್ಲೇಖವಿದ್ದರೆ ಅಲ್ಲಿಯೇ ಅಧ್ಯಾಸ ಸಿದ್ಧಿಯನ್ನು ವಿಸ್ತಾರವಾಗಿ ಮಾಡಬಹುದಾಗಿತ್ತು; ಇಲ್ಲವೇ ತಮ್ಮ ಅಧ್ಯಾಸ ಭಾಷ್ಯದಲ್ಲಿಯಾದರೂ ಇಂಥ ಸೂತ್ರದಲ್ಲಿ ಉಕ್ತವಾಗಿದೆಯೆಂದು ತೋರಿಸಬಹುದಾಗಿತ್ತು. ಹಾಗೆ ಎಲ್ಲಿಯೂ ತೋರಿಸಿಲ್ಲ. ಆದ್ದರಿಂದ ಇವರ ಈ ಅಧ್ಯಾಸ ಭಾಷ್ಯವು ಬ್ರಹ್ಮಸೂತ್ರಾನುಕೂಲವಲ್ಲ. ಎಲ್ಲ ವ್ಯಾಖ್ಯಾನಕಾರರೂ ಮೂಲವನ್ನು ಅನುಸರಿಸಿ ವ್ಯಾಖ್ಯಾನವನ್ನು ಮಾಡಿದರೆ ಇವರು ಮಾತ್ರ ಮೂಲವನ್ನು ಅನುಸರಿಸದೆಯೇ ವ್ಯಾಖ್ಯಾನ ಮಾಡಿರುವರೆಂದಮೇಲೆ ಇವರದು ವಿಲಕ್ಷಣ ವ್ಯಾಖ್ಯಾನವೇ ಸರಿ.

ಈ ಅದ್ವೈತಿಗಳು ಸ್ವೀಕರಿಸುವ ಅಧ್ಯಾಸವಾದರೂ ಯುಕ್ತವೋ ಎಂಬುದನ್ನು ವಿಚಾರಿಸುವಾ. ಈ ದೋಷ ರೂಪವಾದ ಅಧ್ಯಾಸವು ಶುಕ್ತಿ-ರಜತಾಧ್ಯಾಸದಂತೆ ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿ ಇಲ್ಲವಂತೆ; ಮತ್ತು ಬ್ರಹ್ಮದಲ್ಲಿದ್ದುಕೊಂಡು ಜಗತ್ತನ್ನು ಮಾಡುತ್ತದಂತೆ. ಜಗತ್ತು ಇವರ ಮತದಲ್ಲಿ ಅಧ್ಯಾಸದ (ಮೂಲಾವಿದ್ಯೆಯ) ಪರಿಣಾಮವು; ಬಹ್ಮದ ವಿವರ್ತವು. ವಿವರ್ತವೆಂದರೆ— ಅಧಿಷ್ಠಾನವಾದ ಬ್ರಹ್ಮದ ಅನ್ಯಥಾ ತೋರಿಕೆ; ಪರಿಣಾಮವೆಂದರೆ ಕ್ಷೀರದಧಿಗಳಂತೆ ಪೂರ್ವರೂಪವನ್ನು ಬಿಟ್ಟು ರೂಪಾಂತರವನ್ನು ಹೊಂದುವಿಕೆ. ಶುಕ್ತಿಯನ್ನು ಸಾಕ್ಷಾತ್ಕರಿಸಿದನಂತರದಲ್ಲಿ ರಜತ ರಜತಾಧ್ಯಾಸಗಳ ನಿವೃತ್ತಿಯಾಗುವಂತೆ ಅಧಿಷ್ಠಾನ ಬ್ರಹ್ಮ ಸಾಕ್ಷಾತ್ಕಾರವಾದನಂತರದಲ್ಲಿ ಜಗತ್ತೂ ಜಗದಧ್ಯಾಸಗಳೂ ನಿವೃತ್ತಿಯಾಗಿ ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷವಾಗುವದು.

**ಅಧ್ಯಾಸನಿರಾಸ**—ಈ ದೋಷರೂಪವಾದ ಅವಿದ್ಯೆಗೆ ಆಶ್ರಯವು ಬ್ರಹ್ಮವೆಂದು ಹೇಳಿದರೆ, ಬ್ರಹ್ಮವು ದೋಷವುಳ್ಳದ್ದೆಂದು ಹೇಳಬೇಕಾಗುವುದು. ಆ ದೋಷವುಳ್ಳ ಬ್ರಹ್ಮವೇ ತಾನಾಗುವುದಕ್ಕೆ ಅನೇಕ ಕಷ್ಟಕರಗಳಾದ ಸಾಧನಗಳನ್ನು ಆಚರಿಸಬೇಕೇ? ಯಾವನೂ ಆಚರಿಸಲಾರನು. ಮತ್ತು ಬ್ರಹ್ಮವು ಸಚ್ಚಿದಾನಂದರೂಪವೂ ಪರಿಶುದ್ಧವಾದದ್ದೂ ಎಂದು ಹೇಳುವ ಶ್ರುತಿಗಳಿಗೆ ವಿರೋಧವು. ವಸ್ತುತಃ ಬ್ರಹ್ಮದಲ್ಲಿ ಅಜ್ಞಾನವು ಇಲ್ಲವೇ ಇಲ್ಲವಲ್ಲ, ಅದು ವಸ್ತುತಃ ಇದ್ದರೆ ಬ್ರಹ್ಮವು ದೋಷಿಯಾಗಬಹುದು—ಅಂದರೆ,

ಪ್ರಶ್ನೆ—ಬ್ರಹ್ಮದಲ್ಲಿ ವಸ್ತುತಃ ಇಲ್ಲದಿದ್ದರೆ ಮತ್ತೆ ಹೇಗಿರುವುದು?

ಉತ್ತರ—ಕಲ್ಪಿತ ಸಂಬಂಧದಿಂದ.

ಪ್ರಶ್ನೆ—ಆ ಸಂಬಂಧವನ್ನು ಕಲ್ಪಿಸುವುದು ಯಾವುದು ?

ಉತ್ತರ—ಅದೇ ಅವಿದ್ಯೆಯು.

ಪ್ರಶ್ನೆ—ಅದು ಎಲ್ಲಿದ್ದುಕೊಂಡು ಕಲ್ಪಿಸುತ್ತದೆ ?

ಉತ್ತರ—ಬ್ರಹ್ಮದಲ್ಲಿ ಇದ್ದುಕೊಂಡು ಕಲ್ಪಿಸುತ್ತದೆ.

ಪ್ರಶ್ನೆ—ಮತ್ತೂ ಬ್ರಹ್ಮಕ್ಕೆ ದೋಷಿತ್ವ ಪ್ರಸಂಗವು ಬರಲಿಲ್ಲವೆ ?

ಉತ್ತರ—ಅದು ಸ್ವತಂತ್ರವಾಗಿ ಬೇರೆ ಇದ್ದು ಕಲ್ಪಿಸುತ್ತದೆ.

ಪ್ರಶ್ನೆ—ಹಾಗಾದರೆ ಅದಕ್ಕೊಂದು ಸ್ವತಂತ್ರ ಸತ್ತೆಯನ್ನು ಸ್ವೀಕರಿಸಬೇಕಾಗುತ್ತದೆ ; ಸ್ವೀಕರಿಸಿದರೆ ಅದ್ವೈತ ಸಿದ್ಧಾಂತದ ವ್ಯಾಘಾತವೇ ಆಗುವುದಿಲ್ಲವೇ ?

ಉತ್ತರ—ಇಂಥ ಅವಿದ್ಯೆ ಯೊಂದದೆ ಎಂಬುವಲ್ಲಿ 'ಯದಾತಮಃ' ಇತ್ಯಾದಿ ಶ್ರುತಿಗಳೂ, 'ತಾನು ಅಜ್ಞನು' ಇತ್ಯಾದ್ಯನುಭವವೂ ಪ್ರಮಾಣವು ಅಂದರೆ ಈ ಶ್ರುತಿಯು ಸೃಷ್ಟ್ಯಾದಿಯಲ್ಲಿ ಯಾವಕಾರ್ಯ ಕಾರಣ ವಿಭಾಗವೂ ಇಲ್ಲದೆ ಜಗತ್ತು ಸೂಕ್ಷ್ಮ ವಾಗಿತ್ತು ಎಂಬಲ್ಲಿ ಪ್ರಮಾಣವು; ಅನುಭವವು ಮಿಥ್ಯಾಭೂತವಾದ ಅವಿದ್ಯೆಯಲ್ಲಿ ಪ್ರಮಾಣವಲ್ಲ; ಕಿಂತು ಸತ್ಯವಾದ ಕಿಂಚಿಜ್ಞತ್ವರೂಪವಾದ ಅವಿದ್ಯೆಯಲ್ಲಿ ಪ್ರಮಾಣವಾಗಿದೆ, ಎಂದು ಹೇಳಲೇಬೇಕು. ಇಲ್ಲದಿದ್ದರೆ ಪ್ರಮಾಣದ ಸತ್ತಾ, ಅವಿದ್ಯೆಯ ಸತ್ತಾ, ಬ್ರಹ್ಮದ ಸತ್ತಾ—ಹೀಗೆ ತ್ರಿಸತ್ಯತ್ವಗಳನ್ನು ಹೇಳಬೇಕಾಗುವುದು ; ಹೇಳಿದರೆ ಅದ್ವೈತಹಾನಿಯು. ಚಂದ್ರಕಲಂಕ ನ್ಯಾಯದಂತೆ ಬ್ರಹ್ಮದಲ್ಲಿ ಅವಿದ್ಯೆಯು ಇರುತ್ತದೆಂದರೆ, ಚಂದ್ರನಿಗೆ ಅವಯವಗಳಿದ್ದಂತೆ ಬ್ರಹ್ಮಕ್ಕೆ ಅವಯವಗಳನ್ನು ಹೇಳಬೇಕು; ಹೇಳಿದರೆ, ಬ್ರಹ್ಮವು ಘಟದಂತೆ ಜಡವೆನಿಸಬೇಕಾಗುವುದು ಮತ್ತು ಬ್ರಹ್ಮವು ನಿರವಯವವು ಎಂದು ಹೇಳುವ ಶ್ರುತಿಗಳಿಗೆ ವಿರೋಧವೂ ಆಗುವುದು. ಆದ್ದರಿಂದ ಅವಿದ್ಯಾ ಸದ್ಭಾವದಲ್ಲಿ ಪ್ರಮಾಣವಿಲ್ಲ.

**ಪ್ರತಿಬಿಂಬ ವಾದನಿರಾಸ**—ಜೀವನ ಉಪಾಧಿಯಾದ ಅವಿದ್ಯೆಯಲ್ಲಿಯಾಗಲಿ, ಈಶ್ವರೋಪಾಧಿಯಾದ ಮಾಯೆಯಲ್ಲಿಯಾಗಲಿ ರೂಪವಿಲ್ಲದ ಬ್ರಹ್ಮದ ಪ್ರತಿಬಿಂಬವು ಸಂಭವಿಸುವುದಿಲ್ಲ. ಲೋಕದಲ್ಲಿ ರೂಪವುಳ್ಳ ಪದಾರ್ಥದ ಪ್ರತಿಬಿಂಬವು ಕಂಡುಬರುವದಲ್ಲದೆ, ರೂಪವಿಲ್ಲದ ಪದಾರ್ಥದ ಪ್ರತಿಬಿಂಬವನ್ನು ಯಾರೂ ನೋಡಿಲ್ಲ. ಆದ್ದರಿಂದ ಶುದ್ಧ ಸತ್ತ್ವ ಪ್ರಧಾನ ಮಾಯೆಯಲ್ಲಿ ಬ್ರಹ್ಮ ಪ್ರತಿಬಿಂಬವೇ ಈಶ್ವರನು. ಅವಿದ್ಯಾ (ಅಂತಃಕರಣದಲ್ಲಿ) ಬ್ರಹ್ಮ ಪ್ರತಿಬಿಂಬವೇ ಜೀವನು ಎಂದು ಹೇಳುವದು ಅಯುಕ್ತವು. ಇದಕ್ಕೆ ಅದ್ವೈತಿಯು—ಆಕಾಶವು ರೂಪವಿಲ್ಲದ್ದಾದರೂ ಅದರ ಪ್ರತಿಬಿಂಬವು ಜಲದಲ್ಲಿ ಕಾಣುತ್ತದೆ ; ಇದರಂತೆ ಬ್ರಹ್ಮದ ಪ್ರತಿಬಿಂಬವನ್ನು ಹೇಳಬಹುದು ಎಂದು ಉತ್ತರ ಹೇಳುವನು. ಆದರೆ ಜಲದಲ್ಲಿ ತೋರುವುದು ರೂಪವಿಲ್ಲದ ಆಕಾಶದ ಪ್ರತಿಬಿಂಬವಲ್ಲ; ಕಿಂತು ರೂಪವುಳ್ಳ ಸೂರ್ಯಪ್ರಕಾಶದ ಪ್ರತಿಬಿಂಬವು. ರೂಪವಿಲ್ಲದ ವಸ್ತುವಿನ ಪ್ರತಿಬಿಂಬವನ್ನು ಮಾನಿಸಿದರೆ ವಾಯುಕಾಲಾದಿಗಳ ಪ್ರತಿಬಿಂಬವನ್ನು ಸ್ವೀಕರಿಸಬೇಕಾಗುವುದು. ಹೀಗೆ ಸ್ವೀಕರಿಸುವುದು ಲೋಕಾನುಭವ ವಿರುದ್ಧವು. ಇದೂ ಅಲ್ಲದೆ ದರ್ಪಣದಲ್ಲಿರುವ ದರ್ಪಣದ ರೇಖೆಯು ದರ್ಪಣದಲ್ಲಿಯೂ, ಜಲದಲ್ಲಿರುವ ಮುಖವು ಜಲದಲ್ಲಿಯೂ ಪ್ರತಿಬಿಂಬಿಸದಿರುವಂತೆ ಮಾಯೆಯಲ್ಲಿರುವ ಬ್ರಹ್ಮವು ಮಾಯೆಯಲ್ಲಿ ಪ್ರತಿಬಿಂಬಿಸಲಾರದು. ಯಾವ ಸ್ಥಲದಲ್ಲಿ ಯಾವದಿರುವುದೋ ಆ ಸ್ಥಲದಲ್ಲಿ ಅದರ ಪ್ರತಿಬಿಂಬವಿಲ್ಲೆಂದು ನಿಯಮವುಂಟು. ಇದೂ ಅಲ್ಲದೆ "ಗುಹಾ ಪ್ರತಿಷ್ಠಾ ಪರಮೇ ಪರಾರ್ಧೇ" "ಗುಹಾಪವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್" ಎಂಬುವ ಶ್ರುತಿಸೂತ್ರಗಳಿಂದ ಜೀವೇಶ್ವರರಿಗೆ ಏಕತ್ರ ಸ್ಥಿತಿಯು ಹೇಳಲ್ಪಟ್ಟಿದೆ. ಬಿಂಬ ಪ್ರತಿಬಿಂಬಗಳಿಗೆ ಏಕತ್ರ ಪ್ರವೇಶವು ಲೋಕಾನುಭವ ವಿರುದ್ಧವಲ್ಲವೆ? ಅವಿದ್ಯಾಮಾಯೆಗಳಲ್ಲಿ ಬ್ರಹ್ಮ ಪ್ರತಿಬಿಂಬವೇ ಜೀವೇಶ್ವರರು; ಉಪಾಧಿಗಳ ನಾಶವೇ ಮೋಕ್ಷವೆಂದು ಹೇಳಬೇಕಾಗುವುದು. ಹಾಗೆ ಹೇಳಿದರೆ ಜೀವಾತ್ಮ ಪರಮಾತ್ಮನಾಶವೇ ಮೋಕ್ಷವೆಂದಂತಾಗಿ ಪಾಷಂಡ ಮತಪ್ರವೇಶವಾಗುವುದು. 'ಆತ್ಮಹನನಮಪುರುಷಾರ್ಥಃ' ಎಂಬುವುದರಿಂದ ಆತ್ಮನಾಶರೂಪವಾದ ಮೋಕ್ಷವು ಪುರುಷಾರ್ಥವೆನಿಸಲಾರದು. ಇಂಥ ಮೋಕ್ಷಕ್ಕಾಗಿ ಪಾರಲೌಕಿಕ ಪ್ರಯತ್ನವೇಕೆ? ಮುಮುಕ್ಷುಗಳು ಮೋಕ್ಷಕ್ಕಾಗಿ ಯತ್ನಿಸುವದೇಕೆ ? ಈ ಅದ್ವೈತಿಗಳ ಮತದಲ್ಲಿ ವಿಹಿತ ನಿಷಿದ್ಧ ಕರ್ಮಗಳೆಲ್ಲವೂ ಮಿಥ್ಯೆಗಳಾದ್ದರಿಂದ ಯಾರಿಗೂ ಅವುಗಳಲ್ಲಿ ಪ್ರವೃತ್ತಿ-ನಿವೃತ್ತಿಗಳೇ ಉಂಟಾಗಬಾರದಾಯಿತು. ಹೀಗಾದಲ್ಲಿ ಸನ್ಮಾರ್ಗದ ಉಚ್ಛೇದವೇ ಆಗಿಹೋದೀತು. ಇದೂ ಅಲ್ಲದೆ ಇವರ ಮತದಲ್ಲಿ ಜೀವನು ಮಿಥ್ಯಾಭೂತನಾದ್ದರಿಂದ "ಸ ಆತ್ಮ" ಇತ್ಯಂತದಿಂದ ತತ್ ಪದಾರ್ಥವನ್ನು ನಿರೂಪಿಸಿ, ಪ್ರತಿಬಿಂಬ ರೂಪನಾದ ಜೀವನಿಗೆ ಶ್ರುತಿಯು 'ಸ ತತ್ವಮಸಿ' ಎಂದು ಬೋಧಿಸಬೇಕಾಗಿತ್ತು, ಹೀಗೆ ಬೋಧಿಸಿಲ್ಲಾ. ಇವರು ಹೇಳುವ ಪ್ರತಿಬಿಂಬವಾದವು ಸಮಂಜಸವಲ್ಲವು.

**ಅವಿಚ್ಛಿನ್ನ ವಾದನಿರಾಸ**—ಜಡವಾದ ಅಂತಃಕರಣಾವಚ್ಛಿನ್ನ ಚೈತನ್ಯವು ಜೀವನೆಂದೂ, ಜಡವಾದ ಮಾಯಾವಚ್ಛಿನ್ನ ಚೈತನ್ಯವು ಈಶ್ವರನೆಂದೂ ಹೇಳಿದರೆ ಅಯಃಪಿಂಡಾವಚ್ಛಿನ್ನ ಸೂಚಿಯಿಂದ ಯಾವ ಕೆಲಸವೂ ಆಗದಿರುವಂತೆ ಜೀವೇಶ್ವರರಿಂದ ಯಾವ ಕಾರ್‍ಯವೂ ಆಗದೇ ಹೋಗಬೇಕು. ಇದೂ ಅಲ್ಲದೇ ಜಡವಾದ ಅಂತಃಕರಣಾವಚ್ಛಿನ್ನ ಚೈತನ್ಯವು ಜೀವನೆಂದರೆ, ಜಡವಾದ ಘಟಾವಚ್ಛಿನ್ನವಾದವು ಸಮಂಜಸವಲ್ಲ.

**ಜಗನ್ಮಿಥ್ಯಾತ್ವ ವಾದ ಖಂಡನ—**

ಪ್ರಶ್ನೆ—ಶುಕ್ತಿಯಲ್ಲಿ ರಜತಾಧ್ಯಾಸವಾದಮೇಲೆ ಆ ಶುಕ್ತಿಯು ಪ್ರತ್ಯಕ್ಷವಾಗಲು, ಇಲ್ಲಿ ಪೂರ್ವದಲ್ಲಿಯೂ ರಜತವಿಲ್ಲ, ಈಗಲೂ ರಜತವಿಲ್ಲ, ಮುಂದೆಯಾದರೂ ರಜತವಿರುವುದಿಲ್ಲ ಎಂದು ರಜತಕ್ಕೆ ತ್ರೈಕಾಲಿಕ ನಿಷೇಧವೇ ಕಂಡುಬರುವುದರಿಂದ ಶುಕ್ತಿಯಲ್ಲಿ ತೋರಿದ ರಜತವು ಮಿಥ್ಯೆಯೆಂದು ಅನ್ನುವಂತೆ, ಬ್ರಹ್ಮಸಾಕ್ಷಾತ್ಕಾರವಾದಮೇಲೆ ಜಗತ್ತಿಗೆ ತ್ರೈಕಾಲಿಕ ನಿಷೇಧವು ಸಿದ್ಧವಾಗುವುದರಿಂದ ಜಗತ್ತು ಮಿಥ್ಯಾಭೂತವಾಗಿದೆ ಎಂಬುವಲ್ಲಿ ಪ್ರಮಾಣವೇನು ?

ಉತ್ತರ—ವೇದವೇದಾಂತವಾಕ್ಯಗಳೇ ಪ್ರಮಾಣವು.

ಪ್ರಶ್ನೆ—ಆ ವಾಕ್ಯಗಳು ಜಗದಂತಃಪಾತಿಗಳಾದ್ದರಿಂದ ಅವೂ ಮಿಥ್ಯಾಭೂತಗಳೇ ಆಗಲಿಲ್ಲವೆ ?

ಉತ್ತರ—ಆಹುದು, ಮಿಥ್ಯೆಗಳೇ ಆಗಿರುವವು. ನಮ್ಮ ಅದ್ವೈತ ಮತದಲ್ಲಿ ಬ್ರಹ್ಮವು ಒಂದೇ ಸತ್ಯವಾದದ್ದು; ಅದನ್ನು ಬಿಟ್ಟು ಬಾಕಿ ಎಲ್ಲವೂ ಅಸತ್ಯವೇ.

"ಅಮಿಥ್ಯಾತ್ವವಾದಿ ವಾಕ್ಯಾನಿ ಮಿಥ್ಯೇತಿ ಪರಿಗೀಯತೆ" ಎಂಬುವಂತೆ ಈ ಮಿಥ್ಯಾಭೂತಗಳಾದ ವಾಕ್ಯಗಳು ಮಿಥ್ಯಗಳೇ ಆದುದರಿಂದ ಅವು ಪ್ರಮಾಣಗಳಾಗಲಾರವು. ಅಸತ್ಯಗಳಾದ ಆ ವಾಕ್ಯಗಳಿಂದ ಬ್ರಹ್ಮಕ್ಕೆ ಸತ್ಯತ್ವವಾದರೂ ಹೇಗೆ ಸಿದ್ಧಿಸುವದು ? ಸಿದ್ಧಿಸುವದಿಲ್ಲಾದ್ದರಿಂದ ಬ್ರಹ್ಮವೂ ಕೂಡ ಅಸತ್ಯವಾಗಬೇಕು.

ಯಾವುದು ಮೂರೂ ಕಾಲಗಳಲ್ಲಿಲ್ಲವೋ, ಅದು ಅಸತ್ಯವೆನ್ನುವವರು ಮೂರು ಕಾಲಗಳನ್ನು ಬಿಟ್ಟು ಉಳಿದ ಪ್ರಪಂಚಕ್ಕೆ ಅಸತ್ಯವೆಂದು ಹೇಳಿದಂತಾಗಲಿಲ್ಲವೆ? ಮೂರು ಕಾಲಗಳು ಉಳಿದರೆ ಚಂದ್ರ ಸೂರ್ಯರು ಉಳಿದರು; ಅವರಿಲ್ಲದಿದ್ದರೆ ಕಾಲವ್ಯವಹಾರವಾಗಲಾರದು. ಆದ್ದರಿಂದ ಯಾವ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಳಬೇಕು? ಇದೂ ಅಲ್ಲದೇ ಜಗನ್ಮಿಥ್ಯಾತ್ವ ವಿಷಯದಲ್ಲಿ ಇವರು ಹೇಳುವ ಸ್ವಪ್ನಾದಿ ದೃಷ್ಟಾಂತಗಳು ವಿಷಮಗಳಾಗಿವೆ. ಯಾಕಂದರೆ ಸ್ವಪ್ನವು ಅಸತ್ಯವಲ್ಲ; ಆ ಕಾಲದಲ್ಲಿ ಅದು ಸತ್ಯವೇ ಆಗಿರುವುದು. ಸ್ವಪ್ನ ಪ್ರಪಂಚಕ್ಕೂ ಸತ್ಯನಾದ ಪರಮಾತ್ಮನೇ ಕಾರಣನಾಗಿರುವುದರಿಂದ ಸ್ವಪ್ನ ಪ್ರಪಂಚವು ಅಸತ್ಯವಲ್ಲ. "ಯಃಸ್ವಪ್ನೇ ಪುರುಷಂ ಕೃಷ್ಣಂ ಪಶ್ಯತಿ ಸಪಣ್ಮಾಸ ಜೀವೀಭವತಿ" "ಸ್ವಪ್ನೇತು ಕಾಲಪುರುಷಂ ರಕ್ತ ವಸ್ತ್ರಧರಂ ತಥಾ | ಗಂಧರ್ವನಗರಂಚೈವ ಯಃಪಶ್ಯತಿ ವಿಶೇಷತಃ | ಸಪಣ್ಮಾಸಾದ್ಯಾಮ್ಯಲೋಕಂ ಪ್ರಾಪ್ಯತೇನಾತ್ರ ಸಂಶಯಃ" ಇತ್ಯಾದಿ ಬಹು ಶ್ರುತಿ ಪುರಾಣಗಳಲ್ಲಿ ಹೇಳಲ್ಪಟ್ಟ ಸ್ವಪ್ನಾಧ್ಯಾಯದಂತೆ ಬಹು ಜನರ ಅನುಭವವೂ ಇರುವುದರಿಂದ ಸ್ವಪ್ನವು ಅಸತ್ಯವಲ್ಲಂದಮೇಲೆ ಸ್ವಪ್ನದೃಷ್ಟಾಂತವು ವಿಷಮವಾಯಿತು. ಇಂಥ ದೃಷ್ಟಾಂತಗಳಿಂದ ಜಗತ್ತಿಗೆ ಸತ್ಯತ್ವವು ಸಿದ್ಧಿಸುವುದಿಲ್ಲ. ಇವರ ಮತದಲ್ಲಿ ಜೀವನು ಅಸತ್ಯನು; ಬ್ರಹ್ಮನು ಸತ್ಯವು ಅಂದಮೇಲೆ "ಜೀವೋ ಬ್ರಹ್ಮೈವ ನೇತರಃ" ಎಂದು ಹೇಳುವುದು ಅಸಂಗತವು. ವಾಚಾರಂಭಣ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದಿಲ್ಲ. ಕಿಂತು ಮಣ್ಣಿನಿಂದುಂಟಾದ ಮಡಿಕೆಯು ಮಣ್ಣೇ ಆಗಿರುವಂತೆ ಶಿವನಿಂದುಂಟಾದ ಜಗತ್ತು ಶಿವಸ್ವರೂಪವೇ ಆಗಿದೆ ಎಂದು ಕಾರಣದ ಅಭೇದವನ್ನು ಹೇಳುತ್ತದೆ. ಆದ್ದರಿಂದಲೇ 'ತದನನ್ಯತ್ವಮಾರಂಭಣ ಶಬ್ದಾದಿಭ್ಯಃ' ಎಂಬುವ ಸೂತ್ರವು ಕಾರಣದ ಅಭೇದವನೇ ಆರಂಭಣ ಶಬ್ದಾದಿಗಳಿಂದ ಸಿದ್ಧಿಸುವದೆಂದು ಹೇಳುತ್ತದೆ. "ಸದೇವ ಸೌಮ್ಯೇದಮಗ್ರ ಆಸೀತ್" ಎಂಬುವ ಶ್ರುತಿಯಿಂದ ಜಗತ್ತು ಪೂರ್ವದಲ್ಲಿ ಅಂಡರಸನ್ಯಾಯದಿಂದ ಇತ್ತು, ಈಗಲೂ ಪ್ರತ್ಯಕ್ಷವಾಗಿಯೇ ಇರುತ್ತದೆ, ಮುಂದೆಯಾದರೂ ಸಂಕುಚಿತವಾಗಿರುತ್ತದೆಂದು ಎಲ್ಲರು ಒಪ್ಪುವರಾದ್ದರಿಂದ ತ್ರೈಕಾಲಿಕ ಸತ್ಯತ್ವವೆ ಜಗತ್ತಿಗೆ ಸಿದ್ಧಿಸುವುದಲ್ಲದೆ ಮಿಥ್ಯಾತ್ವವು ಸಿದ್ಧಿಸುವುದಿಲ್ಲ. ಆದ್ದರಿಂದಲೇ ಶಿವಾಧಿಕ್ಯರತ್ನಾವಳಿಕಾರನು—'ಸತ್ಯಂ ಬ್ರಹ್ಮ ತದನ್ಯದೇ ತದಖಿಲಂ ಮಿಥ್ಯೇತಿ ವಕ್ತಾ ಜಡಃ" ಎಂದು ಜಗನ್ಮಿಥ್ಯಾತ್ವವಾದಿಯು ಜಡನೆಂದು ಹೇಳಿರುವನು.

**ಮುಕ್ತಿಗೆ ಜ್ಞಾನವೊಂದೇ ಕಾರಣವೆ?**—ಈ ಅದ್ವೈತಿಗಳು ಮುಕ್ತಿಗೆ ಜ್ಞಾನವೊಂದೇ ಕಾರಣವಲ್ಲದೆ ಕರ್ಮವಲ್ಲೆನ್ನುವರು. ಬ್ರಹ್ಮವು ನಾನೆಂಬ ಜ್ಞಾನವುಳ್ಳವರೆಲ್ಲರೂ ಮುಕ್ತರಾದರೆ ಅವರಲ್ಲಿ ಸಾಂಸಾರಿಕ ಗುಣಗಳು ಕಾಣುವವೇಕೆ? ಜ್ಞಾನವು ಕಾಲುಗಳಿಲ್ಲದ ಕಣ್ಣಿದ್ದ ಹೆಳವನಂತೆಯೂ, ಕರ್ಮವು ಕಣ್ಣಿಲ್ಲದೆ ಕಾಲಿದ್ದ ಕುರುಡನಂತೆಯೂ ಇರುವವು. ಈ ಹೆಳವ ಕುರುಡರು ಬೇರೆಬೇರೆಯಾಗಿ ತಮ್ಮ ಇಚ್ಛಿತಸ್ಥಾನಕ್ಕೆ ಹೋಗಲಾರರು; ಇವರಿಬ್ಬರೂ ಒಟ್ಟುಗೂಡಿದರೆ ಸಾಧ್ಯವಾಗುವುದು. ಅದರಂತೆ ಜ್ಞಾನ ಕರ್ಮಗಳೊಂದೊಂದರಿಂದ ಮುಕ್ತಿಪಟ್ಟಣವು ಲಭಿಸಲಾರದು. ಕೇವಲ ಮೂಲಿಕೆಯನ್ನು ತಿಳಕೊಂಡಮಾತ್ರದಿಂದಲೇ ತಲೆಬೇನೆಯು ನಿವೃತ್ತಿಯಾಗಲಾರದು. ತಲೆಬೇನೆಯು ನಾಶವಾಗಬೇಕಾದರೆ ಈ ರೋಗನಿವಾರಣವು ಇದೇ ಮೂಲಿಕೆಯಿಂದಾಗುತ್ತದೆಂಬ ಜ್ಞಾನವೂ ಮತ್ತು ತಲೆಗೆ ಅದರ ಲೇಪನವೆಂಬ ಕರ್ಮವೂ ಬೇಕು. ಇದರಂತೆ ಭವರೋಗ ನಿವಾರಕನು ಪಶುಪತಿಯು—ಎಂಬುವ ಜ್ಞಾನವೂ, ಪಶುಪತಿ ವಿಷಯಕ ಧ್ಯಾನ ಧಾರಣ ಪೂಜಾ ಮಂತ್ರ ಜಪ ಮೊದಲಾದ ಕರ್ಮಗಳೂ ಬೇಕೇಬೇಕು. 'ನಕರ್ಮಣಾ ನಾಸ್ತ್ಯಕೃತಃಕೃತೇನ' ಇತ್ಯಾದಿ ಶ್ರುತಿಗಳು ಕೇವಲ ಪಶು ಕರ್ಮಗಳನ್ನು ನಿಂದಿಸುತ್ತವಲ್ಲದೆ, ಪತಿಕರ್ಮಗಳನ್ನು ನಿಂದಿಸುವದಿಲ್ಲಾದ್ದರಿಂದ ಅನಿಂದಿತಗಳೂ ಮುಕ್ತಿ ಸಾಧಕಗಳೂ ಆದ ಪತಿ ಕರ್ಮಗಳನ್ನೇ ವೀರಶೈವರು ಆಚರಿಸುತ್ತಾರಲ್ಲದೆ, ಪಶುಹಿಂಸೆ ಮಾಂಸಭಕ್ಷಣ ಸುರಾಪಾನಾದಿಗಳಿಂದ ಯುಕ್ತಗಳಾದ ಯಜ್ಞಾದಿ ಪಶುಕರ್ಮಗಳನ್ನು ಆಚರಿಸುವುದಿಲ್ಲ. ಆದ್ದರಿಂದಲೆ "ಪಾಶಾಶ್ರಯತ್ವಾತ್ತಚ್ಚೋಕ್ತಂ ಪಶುಕರ್ಮೇತಿ ವೈಮಯಾ" ಪೂರ್ವ ಕಾಂಡೀಯ ಅಗ್ನಿಷ್ಟೋಮಾದಿ ಅಶ್ವಮೇಧಾಂತ ಕರ್ಮಗಳು ಪಶುಕರ್ಮಗಳು ಯಾಕಂದರೆ ಪಾಶಯುತಗಳು ಎಂದೂ, "ನ ಕುರ್ಯಾತ್ಪಾಶವಂ ಕರ್ಮ"—ಪಶುಕರ್ಮಗಳನ್ನು ಆಚರಿಸಬಾರದೆಂದೂ ನೀಲಕಂಠ ಶಿವಾಚಾರ್ಯರು ಹೇಳಿರುವರು, ಮತ್ತು ಶ್ರೀ ರೇಣುಕ ಭಗವತ್ಪಾದರೂ ಕೂಡಾ ಪೂರ್ವಾಶ್ರಯ ನಿರಸನ ಸ್ಥಲದಲ್ಲ ಪಶುಕರ್ಮಗಳನ್ನು ವೀರಶೈವನು ಆಚರಿಸಕೂಡದೆಂದೂ, ಅವುಗಳಿಂದ ಪ್ರಯೋಜನವಿಲ್ಲವೆಂದೂ ಅಭಿಪ್ರಾಯ ಕೊಟ್ಟಿರುವರು. ದೀಕ್ಷಿತನಿಗೆ ಪಶುಕರ್ಮಗಳಿಂದ ಪ್ರಯೋಜನವಿಲ್ಲವೆಂದು ಶ್ರೀಕರಭಾಷ್ಯಕಾರರೂ ಕೂಡ ಹೇಳುತ್ತಾರೆ. ಆದ್ದರಿಂದ ನಿಷ್ಪ್ರಯೋಜಕಗಳಾದ ಪಶುಕರ್ಮಗಳು ಜ್ಞಾನಕರ್ಮಗಳ ಸಮುಸಂಚಯದಲ್ಲಿ ಸೇರುವದಿಲ್ಲ. "ವಿದ್ಯಾಂಚಾವಿದ್ಯಾಂಚ" ಎಂಬುವ ಶೃತಿಯು ಜ್ಞಾನಕರ್ಮಸಮಸಮುಚ್ಚಯದಿಂದಲೇ ಮುಕ್ತಿಯನ್ನು ಹೇಳುತ್ತದೆ. ಆದ್ದರಿಂದ ಮುಕ್ತಿಗೆ ಕೇವಲ ಜ್ಞಾನವೊಂದೇ ಕಾರಣವಲ್ಲ; ಜ್ಞಾನಕರ್ಮಗಳೆರಡೂಕಾರಣಗಳಾಗಿವೆ.

**ಅದ್ವೈತಿಗಳು ಆದಿತ್ಯಾದಿ ಪಂಚದೇವತೆಗಳನ್ನು ಉಪಾಸನೆ ಮಾಡುವುದು:**—ಇದು "ಶಿವ ಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಇತ್ಯಾದಿ ಅನಂತ ಶೃತಿಗಳಿಗೆ ವಿರೋಧವಲ್ಲದೆ, ಪಾತಿವ್ರತ್ಯ ಭಕ್ತಿಗೆ ವಿರೋಧವಾಗಿದೆ. "ಪಂಚಪೂಜಾ ವಿಧಾನಾಂತು ಮಿಶ್ರಶೈವ ಮಿತೀರ್ಯತೆ"—ಈ ಪಂಚದೇವತಾ ಉಪಾಸಕರು ಮಿಶ್ರಶೈವರಾಗುತ್ತಾರೆ. ಮುಂದೆ ವೀರಶೈವರ ಶಕ್ತಿವಿಶಿಷ್ಟಾದ್ವೈತ ಮತ ನಿರೂಪಣಸಂದರ್ಭದಲ್ಲಿಯೂ, ಈ ಲೇಖದ ಮತ್ತೆ ಕೆಲವೆಡೆಗಳಲ್ಲಿಯೂ ಈ ಅದ್ವೈತ ಮತವಿಷಯವು ಪ್ರಸ್ತಾಪಿತವಾಗುವುದರಿಂದ ಸದ್ಯಕ್ಕೆ ಇಲ್ಲಿ ಈ ಅದ್ವೈತ ವಿಷಯವನ್ನು ವಿರಮಿಸಿದೆ.

ವಿಶಿಷ್ಟಾದ್ವೈತಿಗಳ ಮತದಲ್ಲಿ ಜೀವನಿಗೆ ಉತ್ಪತ್ತಿಯನ್ನು ಹೇಳುವರು. ಇವರಮತಕ್ಕೆ ಪಾಂಚರಾತ್ರಾದ್ಯಾಗಮಗಳು ಪ್ರಮಾಣಗಳು. "ವಾಸುದೇವೋ ಪರಂ ತತ್ವಂ ಸರ್ವಕಾರಣಮವ್ಯಯಂ| ಸಂಕರ್ಷಣಾಖ್ಯ ಜೀವಸ್ತು ತತ್ಸಕಾಶಾತ್ಪ್ರಜಾಯತೆ | ಸಂಕರ್ಷಣಾಚ್ಚ

ಪ್ರದ್ಯುಮ್ನ ಸಂಜ್ಞಂ ಸಂಕಲ್ಪರೂಪಕಂ | ಮಾನಸಂ ಜಾಯತೇತಸ್ಮಾ ದನಿರುದ್ಧಾಭಿಧಾನಕಂ | ಅಹಂಕಾರಂ ಜಾಯತೇತಿ ವ್ಯೂಹತ್ರ ಯಮುದಾಹೃತಂ" ಸರ್ವಕಾರಣನಾದ ವಾಸುದೇವನಿಂದ ಸಂಕ ರ್ಷಣನೆಂಬ ಜೀವನೂ,ಇವನಿಂದ ಪ್ರದ್ಯುಮ್ನ ನಾಮಕವಾದ ಮನವೂ, ಇದರಿಂದ ಅನಿರುದ್ಧವೆಂಬ ಅಹಂಕಾರವೂ ಹುಟ್ಟುತ್ತವೆಂದು ಇವರ ಪ್ರಕ್ರಿಯೆಯು. ವೇದೋಚ್ಚಾರಣಾರಂಭದಲ್ಲಿ, "ಹರಿಃ ಓಂ" ಎಂಬುವ ಸಾಂಪ್ರದಾಯವು ಇವರಲ್ಲಿರುವುದು. "ನಾರಾಯಣಾದ್ಬ್ರಹ್ಮಾ ಜಾಯತೇ ನಾರಾಯಣಾದ್ರುದ್ರೋಜಾಯತೇ" ಇತ್ಯಾದಿ ಶ್ರುತಿಗಳಿಂದ ನಾರಾಯಣನೇ ಜಗಜ್ಜನ್ಮಾದಿ ಕಾರಣನೆಂತಲೂ, ನಾರಾಯಣನೇ ಸರ್ವೋತ್ಕೃಷ್ಟನೆಂತಲೂ, ಇವನಿಂದ ರಚಿಸಲ್ಪಟ್ಟ ಪಾಂಚರಾತ್ರಾಗ ಮವೇ ಶ್ರೇಷ್ಠವಾಗಿರುವದರಿಂದ ಎಲ್ಲ ಬ್ರಾಹ್ಮಣರಿಗೂ ಈ ಆಗಮವೇ ಗ್ರಾಹ್ಯವೆಂತಲೂ, "ರುದ್ರೋವೈ ಕ್ರೂರಃ" ಎಂಬುವ ಯಜುಃ ಶ್ರುತಿ ಯಿಂದ ರುದ್ರನು ತಾಮಸನೆಂದು ಗೊತ್ತಾಗುತ್ತದೆಯಾಗಿ ಈ ರುದ್ರ ನಿಂದ ರಚಿಸಲ್ಪಟ್ಟ ಶಿವಾಗಮಗಳು ತಾಮಸಗಳಾಗಿವೆಯೆಂತಲೂ, ಸರ್ವಯಜ್ಞಾದಿಕರ್ಮಗಳಲ್ಲಿ ರುದ್ರಾಹುತಿಯ ಅನಂತರದಲ್ಲಿ "ಅಪ ಉಪಸ್ಪೃಶ್ಯ" (ಉದಕವನ್ನು ಮುಟ್ಟಿ) ಎಂದು ಕೇಳಿಕೆಯಲ್ಲಿರುವದ ರಿಂದ ರುದ್ರನಿಗೆ ಆಹುತಿಕೊಟ್ಟಮೇಲೆ ಜಲಸ್ಪರ್ಶಮಾಡಬೇಕೆಂಬುವದೆ ರುದ್ರನು ತಾಮಸನು, ಅಮಂಗಲನು ಎಂಬುವಲ್ಲಿ ಪ್ರಬಲವಾದ ದೃಷ್ಟಾಂತವೆಂತಲೂ ಈ ವಿಶಿಷ್ಟಾದ್ವೈತಿಗಳಾದ ವೈಷ್ಣವರು ಹೇಳು ತ್ತಾರೆ. ಮತ್ತು ಶಾಂಡಿಲ್ಯ ಸ್ಮೃತಿಯಲ್ಲಿ "ಯಚ್ಛಾಸ್ತ್ರೇ ಲಿಂಗಪಾ ರಮ್ಯಂ ವಾಮದೇವನಮುಮಾಪತಿಂ| ಪರತ್ವೇನ ವದೇಚ್ಛಾಸ್ತ್ರಂ ತತ್ತಾ ಮಸಮುದಾಹೃತಂ ||" ಯಾವಶಾಸ್ತ್ರವು ಉಮಾಪತಿಯಾದ ಶಿವನೇ ಸರ್ವೋತ್ಕೃಷ್ಟನೆಂದೂ, ಶಿವಲಿಂಗವೇ ಅಧಿಕವೆಂದೂ ಹೇಳುವದೋ ಆ ಶಾಸ್ತ್ರವು ತಾಮಸವೆಂದು ಹೇಳಲ್ಪಟ್ಟದೆಯಾದ್ದರಿಂದ ಶಿವಪ್ರತಿ ಪಾದಕಗಳಾದ ಶಿವಾಗಮಗಳು, ವೇದವೇದಾಂತಗಳು, ಪುರಾಣೇತಿ ಹಾಸಗಳು ತಾಮಸಗಳೆಂತಲೂ, ಆದ್ದರಿಂದಲೇ ಅವು ಪ್ರಮಾಣಗಳಲ್ಲ ವೆಂತಲೂ ಹೇಳುತ್ತಾರೆ.

ನಿರಸನ—ಈ ಪಾಂಚರಾತ್ರಾಗಮ ಪ್ರತಿಪಾದಿತವಾದ ವೈಷ್ಣವ ಮತವು, ತಂತ್ರಪ್ರಧಾನವಾಗಿರುವದರಿಂದ ತಾಂತ್ರಿಕಮತವಲ್ಲದೆ ವೈ ದಿಕಮತವಲ್ಲದ್ದರಿಂದಲೇ ವೈದಿಕರಾದವರಿಗೆ ಇದು ಮಾನ್ಯವಲ್ಲ. "ಜ್ಞಾಜ್ಞಾವಜಾವೀಶಾನೀಶೌ" "ನಜಾಯತೇಮ್ರಿಯತೇವಾವಿಪ ಶ್ಚಿತ್" ಇತ್ಯಾದ್ಯನೇಕಶ್ರುತಿಗಳಲ್ಲಿ ಜೀವರಿಗೆ ಅನಾದಿತ್ವವು ಅಂದರೆ ಉತ್ಪತ್ತಿಯಿಲ್ಲೆಂಬಂಶವು ಹೇಳಲ್ಪಟ್ಟಿರುವದರಿಂದ ಜೀವರಿಗೆ ಉತ್ಪತ್ತಿ ಯನ್ನು ಹೇಳುವ ಪಾಂಚರಾತ್ರಾಗಮ ಮತವು ಶ್ರುತಿವಿರುದ್ಧವಾ ಯಿತು. ಆದ್ದರಿಂದ ಈ ಮತವು ಅವೈದಿಕರಿಗೆ ಮಾನ್ಯವಲ್ಲದೆ ವೈದಿಕ ರಿಗೆ ಮಾನ್ಯವಲ್ಲ. ಜೀವರು ಉತ್ಪತ್ತಿಯುಳ್ಳವರೆಂದರೆ, ಕೃತನಾಶಾ ಕೃತಾಭ್ಯಾಗಮ ದೋಷವು ಬರುವದು ನಾರಾಯಣ ಪ್ರಣೀತವಾಗಿ ರುವದರಿಂದಲೇ ಪಾಂಚರಾತ್ರಾಗಮವು ಸಾತ್ವಿಕವೂ ಶ್ರೇಷ್ಠವೂ ಆಗಿದೆ ಯೆಂದರೆ ನಾರಾಯಣ ಪ್ರಣೀತವಾದ ಬುದ್ಧಾಗಮವು ಶ್ರೇಷ್ಠವಾಗ ಬಾರದೇಕೆ? "ವಿಶ್ವಾಧಿಕೋರುದ್ರೋ" "ಏಕಏವರುದ್ರೋನದ್ವಿತೀ ಯಾಯತಸ್ಥೇ" "ರುದ್ರಏಕತ್ವಮಾಹುಃ" "ಈಶಾನಃಸರ್ವವಿದ್ಯಾನಾ ಮೀಶ್ವರಃ ಸರ್ವಭೂತಾನಾಂ" "ಪ್ರಪಂಚೋಪಶಮಂ ಶಾಂತಂಶಿವ ಮದ್ವೈತಂ ಚತುರ್ಥಂಮನ್ಯಂತೇ ಸಆತ್ಮಾ ಸವಿಜ್ಞೇಯಃ" ಇತ್ಯಾದಿ ನೂರಾರು ಶ್ರುತಿಗಳಲ್ಲಿ ಶಿವನೇ ಸರ್ವೋತ್ಕೃಷ್ಟನಲ್ಲದೆ ಇತರರಲ್ಲವು.

"ಏಕಏವ ನಾರಾಯಣ ಆಸೀತ್" ಎಂಬಲ್ಲಿ 'ಶಕ್ತೇರಾಸೀತ್ಪರಾಶರಃ' ಎಂಬುವಂತೆ ಆದಿವಿಷ್ಣುವಿಗೆ ಪರಶಿವನಿಂದ ಉತ್ಪತ್ತಿಯನ್ನು ಹೇಳ ಬೇಕು. ಋಗ್ವೇದದಲ್ಲಿ "ವಿಷ್ಣುರಿತ್ಥಾ ಪರಮಸ್ಯವಿದ್ವಾನ್ ಜಾತಃಬ್ರ ಹನ್ನಭಿಪಾತಿ ತೃತೀಯಂ" ವ್ಯೂಹಾವತಾರಾದಿ ರೂಪಾಂತರಗಳಿಂದ ಮೀರಿದ ಜಾತನಾದ ಆದಿವಿಷ್ಣುವು ಪರಶಿವನನ್ನು ತಿಳಿದವನಾಗಿ ಬ್ರಹ್ಮ ವಿಷ್ಣು ಲೋಕಗಳ ಮೇಲಿರುವ ಮೂರನೆ ಕೈಲಾಸವನ್ನು ರಕ್ಷಿ ಸುತ್ತಾನೆಂದು ಹೇಳಿದ್ದರಿಂದಲೂ, "ಅಜಾತಇತ್ಯೇವಂ ಕಶ್ಚಿದ್ಭೀರುಃ ಪ್ರಪದ್ಯತೆ" "ರುದ್ರಯತ್ತೇ ದಕ್ಷಿಣಂಮುಖಂ ತೇನಮಾಂ ಪಾಹಿ ನಿತ್ಯಂ" ಎಂದು ಶ್ವೇತಾಶ್ವತರ ಶ್ರುತಿಯು ಪರಶಿವನಿಗೆ ಅಜಾತ ತ್ವವನ್ನು ಹೇಳುವದರಿಂದಲೂ ಎಂದೆಂದೂ ಹುಟ್ಟು-ಸಾವುಗಳಿಲ್ಲದ ಮಹೇಶ್ವರನಿಂದ ಆದಿವಿಷ್ಣುವಿನ ಜನನವು ಸಿದ್ಧವೇ ಆಗಿರುವುದು. ಆದುದರಿಂದ ಅಜಾತನಾದ ಪರಶಿವನೇ ಕಾರಣ ಕಾರಣನು. "ನಾರಾಯಣಾದ್ರುದ್ರೋಜಾಯತೇ" ಎಂಬಲ್ಲಿ ಹೇಳಲ್ಪಟ್ಟ ರುದ್ರನು ಅವಾಂತರ ಕಾಲರುದ್ರನಲ್ಲದೆ ಮಹಾರುದ್ರನಲ್ಲ. "ತ್ರಯಸ್ತೇ ಕಾರಣಾತ್ಮಾನೋಜಾತಾಃ ಸಾಕ್ಷಾನ್ಮಹೇಶ್ವರಾತ್" ಇತ್ಯಾದಿ ವಾಕ್ಯಗಳಿಂದ ಅವಾಂತರ ಸೃಷ್ಟಿಯಲ್ಲಿ ತ್ರಿಮೂರ್ತಿಗಳು ಪರಶಿವಾನುಗ್ರಹದಿಂದ, ವಿಷ್ಣುವಿನಿಂದ ಬ್ರಹ್ಮನೂ ಬ್ರಹ್ಮನಿಂದ ವಿಷ್ಣುವೂ, ವಿಷ್ಣುವಿನಿಂದ ರುದ್ರನೂ ರುದ್ರನಿಂದ ವಿಷ್ಣುವೂ ಹುಟ್ಟಿ ದರೆಂದು ಹೇಳಲ್ಪಟ್ಟಿರುತ್ತದೆ. ಮಾಂಡೂಕ್ಯ ಶ್ರುತಿಯು 'ಶಿವ ಮದ್ವೈತಂ ಚತುರ್ಥಂ' ಎಂದು ಪರಶಿವನು ನಾಲ್ಕನೆಯವನು, ತ್ರಿಮೂರ್ತಿಗಳ ಪೈಕಿ ಅಲ್ಲವೆಂದೂ, ಮೂರ್ತಿತ್ರಯಕ್ಕೆ ಮಿಗಿಲಾದವ ನೆಂದೂ ಅಭಿಪ್ರಾಯ ಪಡುತ್ತದೆ. ನಾರಾಯಣನು ಕಾರಣಕಾರಣ ನೆಂತಲೂ, ತ್ರಿಮೂರ್ತಿಗಳಿಗೆ ಮಿಗಿಲಾದವನೆಂತಲೂ ಯಾವ ಶ್ರುತಿ ಯಲ್ಲಿಯೂ ಕಂಡುಬರುವುದಿಲ್ಲಾದ್ದರಿಂದ ಶಿವನೇ ಸರ್ವೋತ್ಕೃಷ್ಟನು 'ಸರ್ವಮಿದಂಬ್ರಹ್ಮ ವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾ ನಿಚೇಂದ್ರಿಯಾಣಿ ಸಹಭೂತೈರ್ನಕಾರಣಂ ಕಾರಣಾನಾಂ' ಇತ್ಯಾದಿ ಶ್ರುತಿಗಳಿಂದ ಪರಶಿವನಿಗೆ ಕಾರಣಕಾರಣತ್ವವು ಹೇಳಲ್ಪಡುವುದು. ನಾರಾಯಣನು ಕಾರಣ ಕಾರಣನೆಂತಲೂ, ವಿಶ್ವಾಧಿಕನೆಂತಲೂ ಯಾವ ಶ್ರುತಿಯಲ್ಲಿಯೂ ಕಂಡುಬರುವುದಿಲ್ಲವಾದ್ದರಿಂದ, ವೈಷ್ಣವರು ನಾರಾಯಣನಿಗೆ ಪರಬ್ರಹ್ಮವೆಂದು ಹೇಳುವುದು ಶ್ರುತಿವಾಕ್ಯಗಳಿಗೆ ವಿರುದ್ಧವಾಗಿದೆ. 'ಈಶಾನಃಸರ್ವವಿದ್ಯಾನಾಂ' ಇದರಿಂದ ಪರ ಶಿವನು ಪಾಲಕನೆಂತಲೂ, 'ನಿಧನಪತಯೇನಮಃ' 'ಸರ್ವಭೂತ ದಮನಾಯನಮಃ' 'ಮಹಾಗ್ರಾಸಾಯನಮಃ'—ಈ ಶ್ರುತಿಗಳಿಂದ ಲಯಕಾರಣತ್ವವು ಹೇಳಲ್ಪಡುವುದರಿಂದ ಶಿವನೇ ಪರಬ್ರಹ್ಮವೆಂದು ಸಿದ್ಧವಾಗುತ್ತದೆ. 'ಜನ್ಮಾದ್ಯಸ್ಯಯತಃ' ಎಂಬುವ ಬ್ರಹ್ಮಲಕ್ಷಣವು ಶಿವನಲ್ಲಿಯೇ ಶ್ರುತಿಸಿದ್ಧವಾಗಿ ಸಂಗತವಾಗುತ್ತದಲ್ಲದೆ, ನಾರಾಯಣ ನಲ್ಲಿ ಸಂಗತವಾಗುವುದಿಲ್ಲ. ಮತ್ತು ಈ ವೈಷ್ಣವರು ಊರ್ಧ್ವ ಪುಂಡ್ರ ಧಾರಣ ಮಾಡುವುದು ತಾಂತ್ರಿಕವಲ್ಲದೆ ವೈದಿಕವಲ್ಲ. ಈ ವಿಷಯದಲ್ಲಿ 'ಶ್ರೌತಂ ಲಿಂಗಂತುವಿಜ್ಞೇಯಂ ತ್ರಿಪುಂಡ್ರೋದ್ಧೂಲನಾ ದಿಕಂ | ಅಶ್ರೌತಂತೂರ್ಧ್ವಪುಂಡ್ರಾದಿ ನೈವತಿರ್ಯಕ್‌ತ್ರಿಪುಂಡ್ರಕಂ' ಎಂಬುವ ಪರಾಶರ ಪುರಾಣವು ಪ್ರಮಾಣವಾಗಿದೆ. ಇದೂ ಅಲ್ಲದೆ ಅನೇಕ ಶೈವಗ್ರಂಥಗಳಲ್ಲಿ ಬಲು ವಿಸ್ತಾರವಾಗಿ ಊರ್ಧ್ವತ್ರಿಪುಂಡ್ರಧಾ ರಣವನ್ನು ಸಪ್ರಮಾಣವಾಗಿ ಖಂಡಿಸಿ, ತಿರ್ಯಕ್‌ತ್ರಿಪುಂಡ್ರಧಾರಣ ವನ್ನು ಸಿದ್ಧಮಾಡಿರುವರು. ಇಲ್ಲಿ ವಿಸ್ತಾರಭಯದಿಂದ ಸಂಕ್ಷೇಪಿಸಿದೆ.

ಇನ್ನು ವಿಷ್ಣುವಿಗ್ರಹ ಸಾಲಿಗ್ರಾಮ ದೇವತಾಪೂಜೆಯು ವೈದಿಕವಲ್ಲ, ತಾಂತ್ರಿಕವು. ಶಿವಲಿಂಗ ಪೂಜೆಯು 'ತವಶ್ರಿಯೇ ಮರುತೋರ್ಜಯಂತಃ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗುವುದರಿಂದ ವೈದಿಕವಾಗಿದೆ. ಮತ್ತು ಪ್ರಾಚೀನವಾದ ಪಂಢರಪುರದ ವಿಟ್ಠಲ ಮೂರ್ತಿಗೂ, ಕೊಲ್ಹಾಪುರ ಮಹಾಲಕ್ಷ್ಮಿ ಮೂರ್ತಿಗೂ ಮಸ್ತಕದಲ್ಲಿ ಶಿವಲಿಂಗ ಧಾರಣವು ಪ್ರತ್ಯಕ್ಷ ಸಿದ್ಧವಾಗಿರುವುದರಿಂದ ಆದಿವಿಷ್ಣುವು ಶಿವಭಕ್ತನೆಂಬುವುದು ನಿರ್ವಿವಾದವು.

ರುದ್ರನು ತಾಮಸನು, ಅವನಿಂದ ರಚಿಸಲ್ಪಟ್ಟ ಶಿವಾಗಮಗಳೂ ರುದ್ರಪ್ರತಿಪಾದಕಗಳಾದ ಪುರಾಣಾದಿಗಳೂ ತಾಮಸಗಳು-ಎಂದು ವೈಷ್ಣವರು ಹೇಳುವದು ಸಮಂಜಸವಲ್ಲ. 'ರುದ್ರೋವಾ ಏಷಯದಗ್ನಿಃ ಘೋರಾನ್ಯಾ ಶಿವಾನ್ಯಾ' ಎಂಬುವ ಶ್ರುತಿಯಿಂದ ರುದ್ರನು ತನ್ನ ಘೋರ ಶರೀರದಿಂದ ಸಂಹಾರವನ್ನೂ, ತನ್ನ ಮಂಗಲಮಯವಾದ ಅಘೋರ ಶರೀರದಿಂದ ಪ್ರಪಂಚಪೋಷಣೆಯನ್ನೂ ಸೃಷ್ಟಿಯನ್ನೂ ಮಾಡುತ್ತಾನೆಂಬುದು ಗೊತ್ತಾಗುತ್ತದೆ. ಜಗತ್ಸಂಹಾರ ಕರ್ಮವು ಕ್ರೂರ ಧರ್ಮವಾಗಿರುವುದರಿಂದ ಕ್ರೂರ ಧರ್ಮವುಳ್ಳ ರುದ್ರನು ತಾಮಸನು, ವಿಷ್ಣುವು ಪ್ರಪಂಚ ಪೋಷಕನಾಗಿರುವುದರಿಂದ ಸಾತ್ವಿಕನು ಅಂದರೆ 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿ ಸಂವಿಶಂತಿ ತದ್ಬ್ರಹ್ಮ ತದ್ವಿಜಿಜ್ಞಾಸಸ್ವ' 'ಯಸ್ಯ ಬ್ರಹ್ಮಚ ಕ್ಷತ್ರಂಚ ಉಭೇ ಭವತ ಓದನಃ' ಇತ್ಯಾದಿ ಶ್ರುತಿಗಳಿಂದ ಸೃಷ್ಟ್ಯಾದಿ ಪಂಚಕೃತ್ಯಗಳು ಪರಬ್ರಹ್ಮ ಧರ್ಮಗಳಾದುದರಿಂದ, ಜಗತ್ಸಂಹಾರ ಕೃತ್ಯವೂ ಕೂಡಾ ಪರಶಿವ ಬ್ರಹ್ಮ ಧರ್ಮವಾಗಿದೆಯಾದ್ದರಿಂದ ವೇದ ಸಿದ್ಧವಾದ ಸಂಹಾರ ವಿಷಯದಲ್ಲಿ ಶಂಕಿಸುವದು ಅಯುಕ್ತವಾಗಿದೆ. ಸಂಹಾರಕ್ಕಾಗಿ ಯಾವಾಗಲೂ ಸಾತ್ವಿಕನಾದ ಪರಶಿವನು ತಮೋಗುಣೋಪಾಧಿಕನಾಗುವನಲ್ಲದೆ, ವಸ್ತುತಃ ತಾಮಸನಲ್ಲ. ವಿಷ್ಣುವು ಒಳಗೆ ತಮೋಗುಣವುಳ್ಳವನು, ಹೊರಗೆ ಸತ್ವಗುಣವುಳ್ಳವನೆಂಬುದು ಪುರಾಣಪ್ರಸಿದ್ಧವಾಗಿದೆ. ಆದ್ದರಿಂದ, 'ವೈಷ್ಣವಾನಿಚ ಚತ್ವಾರಿ ತಾಮಸಾನಿ ಮುನೀಶ್ವರಾಃ' ನಾಲ್ಕು ವೈಷ್ಣವ ಪುರಾಣಗಳು ತಾಮಸಗಳು, ಹತ್ತು ಶೈವಪುರಾಣಗಳು ಸಾತ್ವಿಕಗಳಾಗಿವೆ. 'ಪ್ರಪಂಚೋಪಶಮಂಶಾಂತಂ' 'ಶಿವಮದ್ವೈತಂ' ಎಂದು ಮುಂಡಕೋಪನಿಷತ್ತಿನಲ್ಲಿಯೂ, 'ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ' ಎಂದು ಕೈವಲ್ಯೋಪನಿಷತ್ತಿನಲ್ಲಿಯೂ, ಶಿವನು ಪರಮೇಶ್ವರನೆಂತಲೂ ಪರಮ ಸಾತ್ವಿಕನೆಂತಲೂ ಹೇಳಿದುವುದರಿಂದ ಶಿವನು ತಾಮಸನೆಂದು ಹೇಳುವುದು ಬಹಳ ತಪ್ಪಾಗುತ್ತದೆ. ಮತ್ತು ಉಮಾಪತಿಯೂ ತ್ರಿಲೋಚನನೂ ಆದ ಶಿವನು ಪ್ರಭುವೆಂತಲೂ, ಪರಮೇಶ್ವರನೆಂತಲೂ ಹೇಳಿರುವುದರಿಂದ ಶಿವನೇ ಸರ್ವೋತ್ತಮನಲ್ಲದೆ ಬೇರೆ ವಿಷ್ಣು ಮೊದಲಾದ ದೇವತೆಗಳಲ್ಲವೆಂಬುವುದು ನಿರ್ವಿವಾದವು.

ಇನ್ನು ಯಜ್ಞಾದಿ ಕ್ರಿಯೆಗಳಲ್ಲಿ ರುದ್ರಾಹುತಿಯ ಅನಂತರದಲ್ಲಿ ಜಲಸ್ಪರ್ಶವು ಹೇಳಲ್ಪಡುವುದರಿಂದ ರುದ್ರನು ತಾಮಸನು ಮತ್ತು ಅಮಂಗಲನೆಂದು ತಿಳಿದುಕೊಂಡಿರುವುದು ತಪ್ಪು. 'ಅಪಃ ಪರಿಷಿಂಚತಿ ರುದ್ರಸ್ಯಾಂತರ್ಹಿತ್ಯೈವ' ಎಂಬುವ ಯಜುಶ್ರುತಿಯಲ್ಲಿ ಜಲೋಪಸ್ಪರ್ಶವು ರುದ್ರನಲ್ಲಿ ಅಂತರ್ಧಾನಕ್ಕೋಸ್ಕರ ಹೇಳಲ್ಪಟ್ಟಿರುವುದು. ಸ್ಕಾಂದಪುರಾಣದ ವ್ಯಾಸ-ಜೈಮಿನಿ ಸಂವಾದದಲ್ಲಿ-'ಸರ್ವಯೋಗೇಷು ಹೋಮೇಷು ರುದ್ರಾಂತರ್ಧಾನ ಸಿದ್ಧಯೇ 'ಜಲೋಪಸ್ಪರ್ಶನಂ ಪ್ರೋಕ್ತಂ ನೀಲಕಂಠಸ್ಯ ಶೂಲಿನಃ' ಎಂದು ರುದ್ರಾಂತರ್ಧಾನಸಿದ್ಧಿಗಾಗಿ ಜಲೋಪಸ್ಪರ್ಶನವು ಹೇಳಲ್ಪಟ್ಟದೆಯೆಂದು ಸ್ಪಷ್ಟವಾಗಿರಲು, ಮೇಲೆಕಂಡ ಅಭಿಪ್ರಾಯಕ್ಕೆ ಏನು ಕಾರಣವೋ ತಿಳಿಯದಾಗಿದೆ. ಮತ್ತು ಕೂರ್ಮಪುರಾಣದಲ್ಲಿ—'ಯಥಾಕ್ರಮಂ ಸಮಭ್ಯರ್ಚ್ಯ ಭೋಜಯಿತ್ವಾ ಪ್ರಭುಂಭುವಿ|ಪ್ರೇಷಯಿತ್ವಾಥ ಭೃತ್ಯಾನಾಂ ಯಥಾ ಪೂಜಾವಿಧೀಯತೇ | ತಥಾ ರುದ್ರಂ ಮಹಾದೇವಂ ಸರ್ವಯಜ್ಞಫಲ ಪ್ರದಂ| ದತ್ವಾಹುತಿಂ ತತೋ ಭಕ್ತ್ಯಾ ತದಂತರ್ಧಾನ ಸಿದ್ಧಯೇ | ಜಲೋಪಸ್ಪರ್ಶನಂ ಪ್ರೋಕ್ತಂ ತತೋ ದೇವ ಸಮರ್ಚನಂ' ಅಂದರೆ ಯಥಾಕ್ರಮವಾಗಿ ಮೊದಲು ಸ್ವಾಮಿಯನ್ನು ಪೂಜಿಸಿ ಅವನಿಗೆ ಭೋಜನ ಮಾಡಿಸಿ, ಅವನನ್ನು ಕಳುಹಿಸಿಕೊಟ್ಟು ಅನಂತರದಲ್ಲಿ ಅವನ ಭೃತ್ಯರ ಪೂಜೆಯು ಹ್ಯಾಗೋ ಹಾಗೆ, ಸರ್ವಯಜ್ಞಗಳ ಫಲಪ್ರದನೂ ಮಹಾದೇವನೂ ಆದ ರುದ್ರನಿಗೆ ಮೊದಲು ಆಹುತಿಗಳನ್ನು ಕೊಟ್ಟು ಅವನು ಅಂತರ್ಹಿತನು ಅಂದರೆ ಅವನು ತನ್ನ ಸ್ಥಾನವನ್ನು ಸೇರಲೆಂದು ಜಲೋಪಸ್ಪರ್ಶನವು ಹೇಳಿದೆಯೆಂದು ಸ್ಪಷ್ಟವಾಗಿ ಹೇಳಲ್ಪಟ್ಟದೆ. ಸೂತ ಸಂಹಿತೆಯಲ್ಲಿ—ಭೇದಾಭೇದ, ಭೇದ, ಮತ್ತು ಅಭೇದ ಅಂದರೆ ದ್ವೈತಾದ್ವೈತ, ದ್ವೈತ, ಅದ್ವೈತಗಳೆಂಬ ಮೂರು ಮತಗಳು ಹೇಳಲ್ಪಟ್ಟವೆ. ಮತ್ತು ಮಹಿಮ್ನಸ್ತವದಲ್ಲಿ, "ಧ್ರುವಂ ಕಶ್ಚಿತ್ಸರ್ವಂ ಸಕಲಮಪರಸ್ತ್ವಧ್ರುವಮಿತಿ ಪರೋಧ್ರೌವ್ಯಾಧ್ರೌವ್ಯೇ" ಎಂದು ದ್ವೈತಮತ, ಅದ್ವೈತಮತ, ದ್ವೈತಾದ್ವೈತಮತ—ಈ ಮೂರೇ ಮತಗಳು ನಿರೂಪಿಸಲ್ಪಟ್ಟವೆಯಲ್ಲದೆ, ವಿಶಿಷ್ಟಾದ್ವೈತಿಗಳಾದ ವೈಷ್ಣವರ ಮತವು ಹೇಳಲ್ಪಟ್ಟಿಲ್ಲ. ಮತ್ತು ಜೈಮಿನಿ ಮೊದಲಾದ ವೈದಿಕರು ಈ ವಿಶಿಷ್ಟ ಮತವನ್ನು ಪೂರ್ವಪಕ್ಷಕ್ಕೂ ಕೂಡಾ ಯೋಗ್ಯವನ್ನಾಗಿ ಇಟ್ಟುಕೊಂಡಿಲ್ಲಾದ್ದರಿಂದ ಈ ವೈಷ್ಣವ ಮತವು ಕೇವಲ ತಾಂತ್ರಿಕವೆಂಬುದು ಸ್ಪಷ್ಟವು. ಮತ್ತು ಶಂಕರಭಟ್ಟ ಭಾಸ್ಕರಾದಿ ವೈದಿಕರು ದ್ವೈತಾದ್ವೈತಾತ್ಮಕವಾದ ವೀರಶೈವ ಮತವು ಪಾರಮಾರ್ಥಿಕವೆಂದು ವ್ಯವಸ್ಥೆಗೊಳಿಸಿರುವದರಿಂದ, ದ್ವೈತಾದ್ವೈತ ಮತವು ವೈದಿಕವು; ವಿಶಿಷ್ಟ ಮತವು ವೇದಸಿದ್ಧಗಳಾದ ಭೇದಾದಿ ಮತತ್ರಯಗಳಿಗೆ ಬಾಹ್ಯವಾದುದರಿಂದ ಅವೈದಿಕವು. 'ರುದ್ರಃ ಪಶೂನಾಂ ಪತಿಃ' 'ಬ್ರಹ್ಮಾದಯಃಪಶವಃ' ಇತ್ಯಾದಿ ಶ್ರುತಿಗಳಿಂದ ಜೀವರು ಪಶುಗಳೆಂತಲೂ, 'ಜ್ಞಾತ್ವಾದೇವಂ ಸರ್ವಪಾಶಾಪಹಾನಿಃ ಕ್ಷೀಣೈಃ ಕ್ಲೇಶೈರ್ಜನ್ಮ ಮೃತ್ಯುಪ್ರಹಾಣಿಃ' 'ಜ್ಞಾನ ನಿರ್ಮಥನಾಭ್ಯಾಸಾತ್ ಪಾಶಂ ದಹತಿ ಪಂಡಿತಃ' ಇತ್ಯಾದಿ ಶ್ರುತಿಯಿಂದ ಮಾಯೆಯು ಪಾಶವೆಂತಲೂ, 'ಪಶೂನಾಂ ಪತಯೇನಮೋನಮಃ' ಇತ್ಯಾದಿ ಶ್ರುತಿಯಿಂದ ಪರಮೇಶ್ವರನು ಪಶುಪತಿಯೆಂತಲೂ ಸ್ಪಷ್ಟವಾದ ಉಪದೇಶವಿರುವುದರಿಂದ ಪಶು, ಪಾಶ, ಪತಿ, ಈ ಮೂರು ಪದಾರ್ಥಗಳನ್ನು ಹೇಳುವ ಶೈವಶಾಸ್ತ್ರವು ವೈದಿಕವೆಂಬುದು ಸ್ಪಷ್ಟವಾಗಿದೆ. ಚಿದಚಿದೀಶ್ವರ ಪ್ರತಿಪಾದಕವಾದ ರಾಮಾನುಜ ಶಾಸ್ತ್ರವು ವೇದ ಮೂಲಕವಾಗದಿರುವುದರಿಂದ ಅವೈದಿಕವಾಗಿದೆಯೆಂಬುವುದು ಘಂಟಾಘೋಷವು. 'ರುದ್ರಭುಕ್ತಂ ಭುಂಜೀಯಾತ್' ಇತ್ಯಾದಿ ಶ್ರುತಿಯಿಂದ ಸಿದ್ಧವಾಗುವುದರಿಂದ ಶಿವಪ್ರಸಾದವು ವೈದಿಕರಿಂದ ಪರಿಗ್ರಹಿಸಲು ಯೋಗ್ಯವಾಗಿದೆ. ವಿಷ್ಣುಪ್ರಸಾದವು ತಂತ್ರಪ್ರದಾನವಾದ್ದರಿಂದ ತಾಂತ್ರಿಕರಿಗೆ ಯೋಗ್ಯವು. 'ತಾಪಃಪುಂಡ್ರಸ್ತಥಾ ನಾಮ ಮಂತ್ರೋ ಯೋಗಶ್ಚ ಪಂಚಮಃ' ಈ ಐದು ಸಂಸ್ಕಾರಗಳನ್ನು

ಹೇಳುವ ಪಾಂಚರಾತ್ರಾಗಮವು ವೇದವಿರುದ್ಧವಾಗಿರುವುದರಿಂದಲೂ, ಜೀವರ ಉತ್ಪತ್ತಿಯನ್ನು ಹೇಳುವ ವಿಶಿಷ್ಟಾದ್ವೈತಿಗಳಾದ ವೈಷ್ಣವರ ಮತವು ವೈದಿಕರಿಗೆ ಯೋಗ್ಯವಲ್ಲ. ಮತ್ತು ಸಂಕರ್ಷಣನೆಂಬ ಜೀವನಿಂದ ಪ್ರದ್ಯುಮ್ನವೆಂಬ ಮನಸ್ಸು ಹುಟ್ಟಲಾರದು. ಯಾಕಂದರೆ ಅಜ್ಞನಾದ ಜೀವನಿಗೆ ಅಂತಃಕರಣ ರೂಪವಾದ ಮನಸ್ಸನ್ನು ನಿರ್ಮಿಸುವ ಸಾಮರ್ಥ್ಯವೆಲ್ಲಿರುವುದು? ಸಾಮರ್ಥ್ಯವಿಲ್ಲ. 'ಏತಸ್ಮಾಜ್ಜಾಯತೇ ಪ್ರಾಣೋ ಮನಃಸರ್ವೇಂದ್ರಿಯಾಣಿಚ' ಇತ್ಯಾದಿ ಶ್ರುತಿವಾಕ್ಯಗಳಲ್ಲಿ ಪರಬ್ರಹ್ಮದಿಂದಲೇ ಮನಸ್ಸಿನ ಉತ್ಪತ್ತಿಯು ಎಂದು ತಿಳಿಯಲ್ಪಡುತ್ತದೆ. ಅಜಾತನಾದ ಜೀವನಿಗೆ ಉತ್ಪತ್ತಿಯನ್ನೂ, ಕಿಂಚಿಜ್ಞನಾದ ಜೀವನಿಂದ ಮನಸ್ಸಿನ ಉತ್ಪತ್ತಿಯನ್ನೂ, ಜಡವಾದ ಮನಸ್ಸಿನಿಂದ ಅಹಂಕಾರದ ಉತ್ಪತ್ತಿಯನ್ನೂ ಹೇಳುವ ಪಾಂಚರಾತ್ರಾಗಮವನ್ನು ಅನುಸರಿಸಿರುವ ವಿಶಿಷ್ಟಾದ್ವೈತಿಗಳ ಮತವು ಮುಮುಕ್ಷುಗಳಿಗೆ ಯೋಗ್ಯವಲ್ಲವು. ಮತ್ತು 'ಹರಿಃ ಓಂ' ಎಂದು ವೇದೋಚ್ಚಾರದ ಆರಂಭದಲ್ಲಿ ಕೇಳಲ್ಪಡುವುದರಿಂದ ಹರಿಯೇ ವೇದಮಯನು, ಅವನೇ ಸರ್ವೋತ್ಕೃಷ್ಟನೆಂದು ಹೇಳುವುದು ಸಮಂಜಸವಲ್ಲ. 'ಯೋವೇದಾದೌ ಸ್ವರಃಪ್ರೋಕ್ತಃ' ಇತ್ಯಾದಿ ಶ್ರುತಿಯಲ್ಲಿ ವೇದಾರಂಭದಲ್ಲಿ ಪ್ರಣವ ಮಾತ್ರವನ್ನು ಉಚ್ಚರಿಸತಕ್ಕದ್ದು ಎಂದು ಹೇಳುತ್ತಾದರೂ 'ಹರಿಃ ಓಂ' ಎಂದು ಉಚ್ಚರಿಸುವುದಕ್ಕೆ ಏನು ಕಾರಣವೋ ತಿಳಿಯದು! ಆಗಲಿ. 'ಹರಿಃ ಓಂ,' ಎಂಬುದರ ಅರ್ಥವನ್ನು ವಿಚಾರಿಸುವಾ. ಈಶಾನ ಮಂತ್ರಾಂತ್ಯದಲ್ಲಿ—'ಸದಾಶಿವೋಂ' 'ತಸ್ಮಾದೋಂಕಾರಂ ಲಿಂಗಮಾಹುಃ' ಇವೇ ಮೊದಲಾದ ಶ್ರುತ್ಯಾದಿಗಳಿಂದ ಶಿವನೇ ಪ್ರಣವವಾಚ್ಯನೆಂದು ತಿಳಿಯುವದರಿಂದ 'ಯತ್ಪರಾತ್ಪರತೋಽಹರಿಸ್ತತ್ಪರಾತ್ ಪರತಃಶಿವಃ' ಎಂಬುವ ಶ್ರುತಿಯಂತೆ ಹರಿಗಿಂತಲೂ ಮೇಲಾದವನು ಶಿವನೆಂದು ಅರ್ಥಕೊಡುವ 'ಹರಿಃ ಓಂ' ಎಂಬದನ್ನು ನಾವು ಉಚ್ಚರಿಸುವುದು ವಿರುದ್ಧವಲ್ಲ. ಅಥವಾ 'ಖಟ್ವಾಂಗೀ ವಿಷ್ಣುವಲ್ಲಭಃ' ಎಂಬುವ ವಾಕ್ಯದಂತೆ ವಿಷ್ಣುವು ಶಿವನ ಶಕ್ತಿಯ ಅಂಶನಾಗಿರುವುದರಿಂದ 'ಮಾತಾಪಿತರೌ' ಮಾತಾಪಿತೃಗಳು ಎಂದು ತಾಯಿಯ ಹೆಸರನ್ನು ಮೊದಲು ಉಚ್ಚರಿಸುವಂತೆ ಮೊದಲು ಹರಿಯ ಉಚ್ಚಾರವೆಂದು ತಿಳಿಯಬೇಕು.

## ಶಕ್ತಿವಿಶಿಷ್ಟಾದ್ವೈತ ತತ್ವ ನಿರೂಪಣೆ.

ವೀರಶೈವ ಮತವು ಹಿಂದೆ ಹೇಳಿದ ಮೂರು ಮತಗಳಿಗಿಂತ ಸರ್ವೋತ್ಕೃಷ್ಟವಾದುದು. ಯಾಕಂದರೆ ದ್ವೈತಾದ್ವೈತ ಮತಗಳು ಕೆಲವು ಶ್ರುತಿಗಳಿಗೆ ಸಮ್ಮತಗಳಾಗಿಯೂ, ಮತ್ತೆ ಕೆಲವು ಶ್ರುತಿ ವಾಕ್ಯಗಳಿಗೆಅಸಮ್ಮತಗಳಾಗಿಯೂ ಇರುವುವು. ವೀರಶೈವಮತವು ಸರ್ವ ಶ್ರುತಿ ಸಮ್ಮತವಾಗಿದೆ. ವೀರಶೈವರ ಮತವೆಂದರೆ ಶಕ್ತಿವಿಶಿಷ್ಟಾದ್ವೈತವು. ಶಕ್ತಿಗಳೆರಡು: ಒಂದು ಶಿವನ ಚಿಚ್ಛಕ್ತಿಯು, ಮತ್ತೊಂದು ಜೀವನ ಜಡವಾದ ಚಿತ್ತ ಶಕ್ತಿಯು. ಇನೆರಡು ಶಕ್ತಿಗಳಿಂದ ವಿಶಿಷ್ಟರು ಶಿವ-ಜೀವರು. ಈ ಶಿವಜೀವರ ಅಭೇದವೇ ಅದ್ವೈತವು. ಈ ಮತಕ್ಕೇನೇ ಶಿವಾದ್ವೈತವೆಂತಲೂ, ವಿಶೇಷಾದ್ವೈತವೆಂತಲೂ, ದ್ವೈತಾದ್ವೈತವೆಂತಲೂ ಬೇರೆಬೇರೆ ನಾಮಗಳಿರುವುವು. ಶಿವಾದ್ವೈತವೆಂಬಲ್ಲಿಯಾದರೂ ಶಿವನೆಂದರೆ ಸ್ವಪ್ರಕಾಶತಾಶಕ್ತಿವಿಶಿಷ್ಟನೆಂತಲೇ ಅರ್ಥವು. ಇಂಥ ಶಕ್ತಿವಿಶಿಷ್ಟ ಶಿವನ ಅದ್ವೈತವು ಜೀವನಿಗೆ ಹೇಳಲ್ಪಡುವದು. 'ವಿಶೇಷಾದ್ವೈತ' ವೆಂಬುವಲ್ಲಿ 'ವಿ' ಅಂದರೆ ಶಿವನು, 'ಶೇಷ' ವೆಂದರೆ ಜೀವನು, ಇವರುಗಳ ಅದ್ವೈತವು ಎಂದರ್ಥವು. ಅದ್ವೈತಿಗಳ ಮತದಲ್ಲಿ ಬ್ರಹ್ಮ ನಿರ್ವಿಶೇಷ ನಿಶ್ಶಕ್ತಿಕವಾಗಿ ಹೇಳುವಂತೆ ವೀರಶೈವ ಮತದಲ್ಲಿ ಶಿವನು ನಿಶ್ಶಕ್ತಿಕನಲ್ಲ; ಶಕ್ತಿವಿಶಿಷ್ಟನು. ಈ ಬಗ್ಗೆ ಕ್ರಿಯಾಸಾರದಲ್ಲಿ ಒಂದು ವಿಸ್ತಾರವಾದ ಉಪದೇಶವೇ ಇದೆ. ಅದ್ವೈತಿಗಳು ಅವಿದ್ಯಾಶಕ್ತಿಗೆ ಮಿಥ್ಯೆಯೆನ್ನುವಂತೆ ಶಕ್ತಿವಿಶಿಷ್ಟಾದ್ವೈತಿಗಳೆನ್ನುವದಿಲ್ಲ; ಸ್ವಾಭಾವಿಕವೆನ್ನುವರು. ಅವರು ಹಾಗನ್ನುವದು-"ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ" ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾಗುತ್ತದೆ. ಇಂಥ ಸ್ವಾಭಾವಿಕ ಶಕ್ತಿಯಿಂದ ಕೂಡಿದ ಶಿವನಲ್ಲಿ ಜೀವನು ಗುರುಮುಖದಿಂದ ಸಾಧನಗಳನ್ನು ತಿಳಿದು ಆಚರಿಸಿ, ತನ್ನ ಚಿತ್ತದ ಜಾಡ್ಯವನ್ನು ಅಂದರೆ ಅಶುದ್ಧಿಯನ್ನು ಹೋಗಲಾಡಿಸಿ, ಅದನ್ನು ವಿಕಸನಗೊಳಿಸಿದರೆ ನದಿಗಳು ಸಮುದ್ರದಲ್ಲಿ ಸಮರಸವಾಗುವಂತೆ ಶಿವನಲ್ಲಿ ಸಮರಸನಾಗಿಬಿಡುವನು; ಇದುವೇ ಮುಕ್ತಿಯು. ಇದಕ್ಕೆ ಸಾಯುಜ್ಯಮುಕ್ತಿಯೆಂದೂ ಹೆಸರು. ಸಾಲೋಕ್ಯ, ಸಾಮೀಪ್ಯ, ಸಾರ್ಷ್ಟಿ, ಸಾಯುಜ್ಯಮುಕ್ತಿಗಳು ಶ್ರುತಿ ಪ್ರಸಿದ್ಧಗಳೇ ಆಗಿರುವವು. ಈ ಸಾಯುಜ್ಯರೂಪವಾದ ಸಾಮರಸ್ಯವೇ ಮುಖ್ಯ ಫಲವು; ಇದಕ್ಕೆ ಸಾಧಕವು ಲಿಂಗಾಂಗಸಂಯೋಗವೆಂಬ ಶಿವಯೋಗವು. ಈ ಯೋಗದಿಂದ "ಕೀಟೋಭ್ರಮರಯೋಗೇನ ಭ್ರಮರೋ ಭವತಿ ಧ್ರುವಂ. ಮಾನವಃ ಶಿವಯೋಗೇನ ಶಿವೋಭವತಿ ಸರ್ವದಾ" ಎಂಬ ಶಂಖ ಸ್ಮೃತಿಯಂತೆ ಮಾನವನು ಶಿವನೇ ಆಗಿಬಿಡುವನು, ಅಂದರೆ ಮುಕ್ತನಾಗುವನು. ಈ ಸಾಯುಜ್ಯ ರೂಪವಾದ ಮುಕ್ತಿಯೇ ಶಕ್ತಿವಿಶಿಷ್ಟಾದ್ವೈತವೆಂಬಲ್ಲಿಯ ಅದ್ವೈತಪದದಿಂದ ಹೇಳಲ್ಪಡುತ್ತದೆ. ಅಂದರೆ ಮುಕ್ತಿ ದಶೆಯಲ್ಲಿ ಶಿವ ಜೀವರಿಗೆ ಅಭೇದವು ಹೇಳಲ್ಪಡುತ್ತದೆ. ಶಕ್ತಿವಿಶಿಷ್ಟ ಪದದಿಂದ ಬದ್ಧದಶೆಯಲ್ಲಿಯ ಭೇದವು ಹೇಳಲ್ಪಡುತ್ತದೆ. ಈ ಭೇದವು ವೀರಶೈವ ಮತದಲ್ಲಿ ಸ್ವಾಭಾವಿಕವಾಗಿದ್ದರೂ ಮುಕ್ತಿದಶೆಯಲ್ಲಿ ಇದರ ನಿವೃತ್ತಿಯನ್ನು ಒಪ್ಪುತ್ತೇವೆ. ಕೆಲವರು—ನಿಂಬೇಹಣ್ಣಿನ ಹುಳಿಯ ಸ್ವಭಾವವು ಆ ಹಣ್ಣಿಗೆ ಎಷ್ಟು ಸಂಸ್ಕಾರವನ್ನು ಮಾಡಿದರೂ ಅದರ ನಿವೃತ್ತಿಯಾಗದಿರುವಂತೆ ಸ್ವಾಭಾವಿಕ ಭೇದದ ನಿವೃತ್ತಿಯಾಗಲಾರದು, ಅದು ನಿವೃತ್ತಿಯಾಗದಿದ್ದರೆ 'ಯದಾಹ್ಯೇ ವೇಷಕಿಂಚಿದುದರಮಂತರಂ ಕುರುತೇ ತದಾತಸ್ಯಭಯಂ ಭವತಿ' ಇತ್ಯಾದಿ ಶ್ರುತಿಯಂತೆ ಅಭಯಾತ್ಮಕವಾದ ಮುಕ್ತಿಯು ಸಿದ್ಧಿಸುವುದಿಲ್ಲಾದ್ದರಿಂದ ಭೇದವು ಸ್ವಾಭಾವಿಕವಲ್ಲ, ಕಲ್ಪಿತವೆಂದು ಹೇಳುವರು. ಇದು ಅವರ ತಪ್ಪು ತಿಳುವಳಿಕೆಯು. ಯಾಕೆಂದರೆ ಸ್ವಾತಿಮಳೆಯಲ್ಲಿ ಕಪ್ಪೆಚಿಪ್ಪಿನಲ್ಲಿ ಬಿದ್ದ ಜಲದ ಸ್ವಭಾವವು ನಿವೃತ್ತಿಯಾಗಿ ಮುತ್ತಾಗುತ್ತದೆ;ಕೀಟವು ಭ್ರಮರವಾದಾಗ ಅದರ ಸ್ವಭಾವವು ನಿವೃತ್ತವಾಗುತ್ತದೆ; ಬೆಣ್ಣೆಯು ತುಪ್ಪವಾದಾಗ ಅದರ ಸ್ವಭಾವವು ನಿವೃತ್ತವಾಗಿ ಪುನಃ ಬೆಣ್ಣೆಯಾಗುವದಿಲ್ಲ. ಇದರಂತೆ ಸಾಧನ ರೂಪವಾದ ಶಿವಯೋಗದಿಂದ ಜೀವನು ಶಿವನಾಗಿ ಬಿಟ್ಟಮೇಲೆ ಅಂದರೆ ಮುಕ್ತಿಯನ್ನು ಹೊಂದಿಬಿಟ್ಟರೆ, ಇವನಿಗೆ ಜೀವಭಾವವು ತಪ್ಪಿಬಿಡುವದು. ಆದ್ದರಿಂದಲೇ ಶ್ರುತಿಯು "ನಸಪುನರಾವರ್ತತೇ ನಸಪುನರಾವರ್ತತೇ" ಎಂದು ಹೇಳುತ್ತದೆ. ಈ ಮುಕ್ತಿ ಸಾಧಕವಾದ ಶಿವಯೋಗವು ಐದು ಪ್ರಕಾರವಾಗಿದೆ:—ಜ್ಞಾನಂ ಶಿವಮಯಂಭಕ್ತಿಃ ಶೈವೀಧ್ಯಾನಂ ಶಿವಾತ್ಮಕಂ ಶೈವವ್ರತಂ ಶಿವಾರ್ಚೇತಿ ಶಿವಯೋಗೋಹಿ ಪಂಚಧಾ" ಅಂದರೆ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನ ಇವುಗಳು. ಈ ಶಿವಾರ್ಚನೆಗೆ ಶಿವದೀಕ್ಷೆಯಿಲ್ಲದವನು ಅಧಿಕಾರಿಯಲ್ಲ. 'ಶಿವೋಭೂತ್ವಾಶಿವಂಯಜೇತ'

'ನಾರುದ್ರೋರುದ್ರಮರ್ಚಯೇತ್' ಎಂಬುವ ಶ್ರುತಿಗಳು ಶಿವನಾಗದೆ ಶಿವನನ್ನು ಪೂಜಿಸಬಾರದೆಂದು ಹೇಳುತ್ತವೆ. ತಾನು ಶಿವನೇ ಆದ ಮೇಲೆ ಶಿವನನ್ನು ಪೂಜಿಸುವದು ಹೇಗೆ? ಶಿವನಾಗಿಯೆಂದರೆ ಶಿವ ಭಕ್ತನಾಗಿ ಎಂದು ಅರ್ಥವು. 'ಶಿವೋ ಭೂತ್ವಾಯಜೇತೇತಿ ಭಕ್ತೋ ಭೂತ್ವೇತಿ ಕಥ್ಯತೆ' ಎಂದು ಉತ್ಪಲ ಶಿವಾಚಾರ್ಯರೂ ಕೂಡಾ ಹೇಳಿರುವರು. ಶಿವಪೂಜಕನು ಭಕ್ತಿ ಸಂಪನ್ನನಾಗಿರಬೇಕು. ಭಕ್ತಸ್ಥಲದ ಶುದ್ಧಸದ್ಭಕ್ತಿಯು ಲಭಿಸಬೇಕಾದರೆ ತನ್ನ ತನುತ್ರಯ ಗಳು ಶುದ್ಧಗಳಾಗಬೇಕು.

ಇವು ಶುದ್ಧಗಳಾಗಬೇಕಾದರೆ ಮುಖ್ಯವಾದ ದೀಕ್ಷಾತ್ರಯಗಳು ಬೇಕು. ಈ ಶಿವದೀಕ್ಷೆಯಲ್ಲಿಯೇ ಅಷ್ಟಾವರಣಗಳು ಸಿಗುವವಲ್ಲದೆ ಪಂಚಾಚಾರಗಳ ಬೋಧವಾಗುವದು. ಆಗ ಶಿಷ್ಯನು ಶಿವಲಿಂಗ ಪೂಜೆಗೂ ಶಿವಲಿಂಗ ಪ್ರತಿಪಾದಕ ವೇದಾಂತಾದಿಗಳ ಶ್ರವಣಕ್ಕೂ ಅಧಿಕಾರಿಯಾಗುವನು. ಅಷ್ಟಾವರಣಗಳೆಂದರೆ ಸಿದ್ಧಾಂತಾಗಮದಲ್ಲಿ 'ಭಸ್ಮರುದ್ರಾಕ್ಷಕಂ ಲಿಂಗಂ ಗುರುರ್ಮಂತ್ರಂ ತಥಾಚರಃ ಪಾದೋದ ಕಂ ಪ್ರಸಾದಶ್ಚ ಶೈವಾಷ್ಟಾವರಣಾನಿ ಹಿ'' ಅಂದರೆ ಗುರು, ಲಿಂಗ, ಜಂ ಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ, ಮಂತ್ರ ಇವು ಅಷ್ಟಾ ವರಣಗಳು ಇವು ಶಿವದೀಕ್ಷೆಯಲ್ಲಿ ಷಡಧ್ವಶುದ್ಧಿಯನ್ನು ಹೊಂದಿದ ಶಿಷ್ಯನಿಗೆ ದೊರಕುವವು. ಷಡಧ್ವಗಳೆಂದರೆ-''ಮಂತ್ರಾಧ್ವಾಚ ಪದಾ ಧ್ವಾಚ ವರ್ಣಾಧ್ವಾ ಭುವನಾಧ್ವಕಃ | ತತ್ವಾಧ್ವಾಚ ಕಲಾಧ್ವಾಚ ಷಡಧ್ವಾನ ಇಮೇಮತಾಃ' ಎಂದು ಹೇಳಲ್ಪಟ್ಟರುವದು. ಸಪ್ತಕೋಟಿ ಮಂತ್ರಗಳು ಮೂಲವಿದ್ಯೆಯಾದ ಪಂಚಾಕ್ಷರೀ ಮಂತ್ರದಿಂದ ಹುಟ್ಟ ದಂಥವುಗಳು; ಇವುಗಳು ಮಂತ್ರಾಧ್ವಾಂತರ್ಗತಗಳಾಗುವವು; ಮಂ ತ್ರಗಳಲ್ಲಿಯ ಪದಗಳ ಸಮೂಹವು ಪದಾಧ್ವವು; ಅಕಾರಾದಿ ಐವತ್ತು ವರ್ಣಗಳು ವರ್ಣಾಧ್ವವು; ಇನ್ನೂರಿಪ್ಪತ್ತುನಾಲ್ಕು ಅನಾಶ್ರಿತಾದಿ ಕಾಲರುದ್ರಾಂತ ಭುವನಗಳು ಭುವನಾಧ್ವವು; ವಾದಿಧರಣ್ಯಂತಗ ಳಾದ ಮುವ್ವತ್ತಾರು ತತ್ವಗಳು ತತ್ವಾಧ್ವವು; ಶಶಿನೀ ಮೊದಲಾದ ಮುವ್ವತ್ತೆಂಟು ಕಲಾಧ್ವವು. ಈ ಆರೂ ಶಿವತ್ವಪ್ರಾಪ್ತಿಗೆ ಮಾರ್ಗ ಗಳಾಗಿರುವುದರಿಂದ ಇವುಗಳಿಗೆ ಅಧ್ವಗಳೆಂದು ಹೆಸರು ಬಂದಿದೆ. ಈ ಆರು ಅಧ್ವಗಳು ಸದಾಶಿವನ ಸದ್ಯೋಜಾತಾದಿ ಪಂಚಮಂತ್ರ ರೂಪವಾದ ಶರೀರಕ್ಕೆ ರೋಮ, ಚರ್ಮ, ರುಧಿರ, ನಾಡಿ, ಮಾಂಸ, ಶುಕ್ಲ, ಮಜ್ಜಾ, ಅಸ್ಥಿಗಳಂತೆ ಇರುತ್ತವೆ. ಗುರುಮೂರ್ತಿಯು ಈ ಆರು ಅಧ್ವಗಳ ಶುದ್ಧಿಯನ್ನು ಮಾಡಿ, ಶಿಷ್ಯನ ಮಾಂಸಪಿಂಡವನ್ನು ಕಳೆದು ಮಂತ್ರಪಿಂಡವುಳ್ಳವನನ್ನಾಗಿ ಮಾಡುವನು. ಅಂದರೆ ಸದಾ ಶಿವನು ಹೇಗೆ ಮಂತ್ರ ಶರೀರಿಯೋ ಹಾಗೆ, ಶಿಷ್ಯನು ಮಂತ್ರಶರೀರಿ ಯಾಗುವನು. ಆಗ ಶಿಷ್ಯನು ಶಿವಪೂಜೆಗೆ ಅಧಿಕಾರಿಯೂ, ಷಟ್ ಸ್ಥಲ ಬ್ರಹ್ಮಜಿಜ್ಞಾಸೆಗೆ ಅಧಿಕಾರಿಯೂ ಆಗುವನು. ಶಕ್ತಿ ವಿಶಿಷ್ಟಾ ದ್ವೈತವೆಂಬಲ್ಲಿ ಶಕ್ತಿವಿಶಿಷ್ಟರು ಶಿವ-ಜೀವರೆಂದು ಹೇಳಿರುವೆವಲ್ಲವೆ? ಈ ಶಿವಜೀವರುಗಳಿಗೆ ಲಿಂಗಾಂಗಿಗಳೆಂತಲೂ ಹೆಸರು. ಈ ವಿಷಯ ದಲ್ಲಿ 'ಆತ್ಮಾಯನಮಃಆತ್ಮಲಿಂಗಾಯನಮಃ' 'ಶಿವಾಯನಮಃ ಶಿವಲಿಂಗಾಯನಮಃ' ಈ ಶ್ರುತಿಗಳು ಪ್ರಮಾಣಗಳು. ಅದ್ವೈತ ಪದಕ್ಕೆ ಸಾಮರಸ್ಯವೆಂದು ಅರ್ಥವು. ಈ ಲಿಂಗಾಂಗಸಾಮರಸ್ಯವನ್ನು ಗುರುಮೂರ್ತಿಯು ಶಿವದೀಕ್ಷೆಯಲ್ಲಿ ಮೊದಲು ತಾನೇ ಉಂಟು ಮಾಡಿ ಶಿಷ್ಯನ ಅಭ್ಯಾಸಕ್ಕಾಗಿ ಪುನಃ ಪಂಚಾಕ್ಷರೀ ಮಹಾ ಮಂತ್ರ ದಿಂದ ಬೋಧಿಸುವನು. ಈ ಪಂಚಾಕ್ಷರೀ ಮಹಾಮಂತ್ರವೇ ವೀರ ಶೈವರೆಲ್ಲರಿಗೂ ಉಪದೇಶಾರ್ಹವಾದದ್ದು. ಆದರೆ ಇದು ಪ್ರಣವಸಹಿತ ವಾಗಿರಬೇಕು. ಈ ವಿಷಯದಲ್ಲಿ 'ವೀರಶೈವೈರ್ಗುರುಕೃಪಾಸುಧಯಾ ಸಿಚ್ಯಯೋಗತಃ | ದೀಕ್ಷಯಾಂಕುರಿತಂ ಚೈವ ಬ್ರಹ್ಮ ಶಬ್ದೇನ ಶ ಬ್ದಿತಂ || ಲಿಂಗಾಂಗಯೋಃ ಸಾಮರಸ್ಯಂ ಮಹಾವಾಕ್ಯೋಪದೇಶ ವತ್ | ಪಂಚಾಕ್ಷರ ಮಹಾಮಂತ್ರಾದ್ಬೋಧನೀಯಂ ವಿಪಶ್ಚಿತಾ' ಕ್ರಿಯಾಸಾರಕಾರರ ನಾಲ್ಕನೇ ಉಪದೇಶದ ವಾಕ್ಯಗಳು ಪ್ರಮಾಣ ಗಳಾಗಿವೆ. ಈ ವಾಕ್ಯಗಳನ್ನು ಹೇಳುವ ಮೊದಲು ನೀಲಕಂಠ ನಾದ ನಾನು ವೀರಶೈವರ ಸಂಪ್ರದಾಯಸಿದ್ಧವಾದ ಮಾರ್ಗವನ್ನು ವಿಸ್ತರಿಸುವೆನೆಂದು ಹೇಳಿರುವರು, ಅಂದರೆ ಶಿವದೀಕ್ಷೆಯಿಂದ ಅಂಕು ರಿಸಲ್ಪಟ್ಟ ಲಿಂಗಾಂಗ ಸಾಮರಸ್ಯವನ್ನು ಆ ಕಾಲದಲ್ಲಿಯೇ ಜಪಕ್ಕಾಗಿ ಉಪದೇಶಿಸಲ್ಪಟ್ಟ ಪಂಚಾಕ್ಷರೀ ಮಹಾ ಮಂತ್ರದಿಂದಲೇ ಬೋಧಿಸ ಬೇಕು. ಈ ಪಂಚಾಕ್ಷರೀ ಮಹಾಮಂತ್ರವೇ ಪರಾವಿದ್ಯೆಯು. 'ಆಶ್ರಿತ್ಯ ಪರಮಾಂವಿದ್ಯಾಂ ಹೃದ್ಯಾಂ ಪಂಚಾಕ್ಷರೀಂಬುಧಃ' ಎಂದು, ಮತ್ತು 'ತಸ್ಯಾಃಪರಮವಿದ್ಯಾಯಾಸ್ವರೂಪ ಮಧುನೋಚ್ಯತೆ ಆದೌ ನಮಃಪ್ರಯೋಕ್ತವ್ಯಂ ಶಿವಾಯೇತಿ ತತಃಪರಂ | ಸೈಷಾ ಪಂಚಾ ಕ್ಷರೀ ವಿದ್ಯಾ ಸರ್ವಶ್ರುತಿ ಶಿರೋಗತಾ'' ಎಂದು ವಾಯವೀಯ ಸಂಹಿ ತೆಯಲ್ಲಿಯೂ, ''ತಸ್ಮಾನ್ಮಂತ್ರಾಂತರಂತ್ಯಕ್ತ್ವಾ ಸಾಧಯನ್ನಧಿಕಾ ರತಃ | ಆಶ್ರಯೇತ್ ಪರಮಾಂ ವಿದ್ಯಾಂ ಹೃದ್ಯಾಂಪಂಚಾಕ್ಷರೀಂ ಬುಧಃ'' ಎಂದು ವೀರಮಾಹೇಶ್ವರಾಚಾರಸಂಗ್ರಹದಲ್ಲಿಯೂ ಪಂಚಾ ಕ್ಷರೀವಿದ್ಯೆಗೆ ಪರಮ ವಿದ್ಯೆಯೆಂದು ಹೇಳಲ್ಪಟ್ಟಿದೆ. ಇನ್ನೂ ಅನುಭವಸೂತ್ರವು, ಶಿವತತ್ವ ರತ್ನಾಕರವೂ ಕೂಡಾ ಇದಕ್ಕೇನೇ ಪರಾವಿದ್ಯೆಯೆಂದು ಹೇಳುವುವು. ಈ ಪರಾವಿದ್ಯೆಯಿಂದಲೇ ಅಕ್ಷರ ಶಬ್ದವಾಚ್ಯನಾದ ಪರಶಿವತತ್ವ ಪ್ರಾಪ್ತಿಯಾಗುವದೆಂದು 'ದ್ವೇವಿದ್ಯೇ ವೇದಿತವ್ಯೇ ಇತಿಹಸ್ಮ ಯದ್ಬ್ರಹ್ಮವಿದೋ ವದಂತಿ ಪರಾಚೈವಾ ಪರಾಚ' ಋಗ್ವೇದಾದಿಗಳು ಅಪರಾ ವಿದ್ಯೆಯೆಂತಲೂ, 'ಯಯಾತ ದಕ್ಷರಮಧಿಗಮ್ಯತೇ ಸಾ ಪರಾ' ಎಂದು ಸ್ಪಷ್ಟವಾಗಿ ಮುಕ್ತಿಯು ಪರಾವಿದ್ಯೆಯೆನಿಸಿದ ಪಂಚಾಕ್ಷರೀ ಮಹಾಮಂತ್ರದಿಂದಲೇ ಲಭಿ ಸುವದೆಂದು ಮುಂಡಕೋಪನಿಷತ್ತು ಹೇಳುತ್ತದೆ. ಇದೂ ಅಲ್ಲದೆ ಕ್ರಿಯಾಸಾರಕಾರರು ಮತ್ತೊಂದು ಕಡೆಯಲ್ಲಿ ಪಂಚಾಕ್ಷರಮ ಹಾ ಮಂತ್ರವೇ ಮುಕ್ತಿ ಸಾಧನವಲ್ಲದೆ ಮತ್ತೊಂದುಅಲ್ಲವೆನ್ನುವರು. ಸಿದ್ಧಾಂತ ಶಿಖಾಮಣಿಯ ಪಂಚಾಕ್ಷರಜಪಸ್ಥಲದಲ್ಲಿ ಪಂಚಾಕ್ಷರೀಮ ಹಾ ಮಂತ್ರವೇ ಮುಕ್ತಿಸಾಧನವೆಂದು ಬಹು ವಿಸ್ತಾರವಾಗಿ ಹೇಳಲ್ಪ ಟ್ಟರುವುದು. ಮತ್ತು ಸಾನಂದರು ಅಷ್ಟಾವಿಂಶತಿ ನಾಯಕ ನರಕ ವಾಸಿಗಳನ್ನು ಇದೇ ಪಂಚಾಕ್ಷರಮಹಾಮಂತ್ರದ ಉಚ್ಚಾರ ಮಾತ್ರದಿಂದಲ್ಲವೆ ಉದ್ಧರಿಸಿದ್ದು! ಮತ್ತು ಸಾನಂದ, ಶತಾನಂದ, ಉಪಮನ್ಯು, ಹಶಿಷ್ಟ, ವಾಮದೇವ ಮೊದಲಾದ ಮುನಿಗಳು ಇದೇ ಮಹಾಮಂತ್ರದಿಂದಲೇ ಯೋಗಸಿದ್ಧರೂ ಮಹಾತೇಜಸ್ವಿಗಳೂ, ಆಗಿ ಕಡೆಗೆ ಮೋಕ್ಷ ಲಕ್ಷ್ಮಿಯನ್ನು ಕೂಡಾ ಹೊಂದಿದರೆಂಬುವುದು ಪ್ರಸಿದ್ಧವೇ ಆಗಿದೆ. ಮತ್ತು 'ಜಪಃಪಂಚಾಕ್ಷರಾಭ್ಯಾಸಂ ಪ್ರಣವಾ ಭ್ಯಾಸ ಏವವಾ' ಎಂದು ಶ್ರೀ ರೇಣುಕ ಭಗವತ್ಪಾದರೂ ಹೇಳಿದ್ದಾರೆ. ಮೂಲಪ್ರಣವವನ್ನಾಗಲಿ ನಕಾರಾದಿ ಯಕಾರಾಂತ ಪಂಚಾಕ್ಷರವ ನ್ನಾಗಲಿ ಜಪಿಸಬಹುದೆಂದೂ, ಮೂಲಪ್ರಣವ ಸಹಿತ ಪಂಚಾಕ್ಷರ ಮಂತ್ರವನ್ನು ಅಂದರೆ ಷಡಕ್ಷರೀ ಮಂತ್ರವನ್ನು ಜಪಿಸಬಾರದೆಂದೂ ತಿಳಿಯ ಕೂಡದು. ಯಾಕಂದರೆ ಪಂಚಾಕ್ಷರ ಜಪಸ್ಥಲದಲ್ಲಿ—

‘ಜಪೇತ್ಪಂಚಾಕ್ಷರೀಂ ವಿದ್ಯಾಂ ಪ್ರಣವೇನ ಷಡಕ್ಷರೀಂ’ ಎಂದು ಆಚಾರ್ಯರು ಹೇಳಿರುವರು. ಮೂಲಪ್ರಣವವು ಐದಂಶಗಳಿಂದ ಕೂಡಿದ್ದರಿಂದ ನಿರ್ಗುಣ ಬೋಧಕವಾದ ಸೂಕ್ಷ್ಮ ಪಂಚಾಕ್ಷರಿಯೆಂತಲೂ, ನ ಕಾರಾದಿ ಯ ಕಾರಾಂತವು ಸಗುಣ ಬೋಧಕವಾದ ಸ್ಥೂಲಪಂಚಾಕ್ಷರಿಯೆಂತಲೂ ಕ್ರಿಯಾಸಾರಾದಿಗಳಲ್ಲಿ ಪ್ರಸಿದ್ಧವಾಗಿರುವುದರಿಂದಲೂ, ವೀರಶೈವರು ಸಗುಣ ನಿರ್ಗುಣ ಮೂರ್ತಿಗಳನ್ನು ಅಭೇದದಿಂದ ಉಪಾಸನೆ ಮಾಡಬೇಕಾಗಿರುವುದರಿಂದಲೂ, ಪ್ರಣವ ಸಹಿತ ಪಂಚಾಕ್ಷರ ಮಹಾ ಮಂತ್ರವೇ ಸರ್ವ ವೀರಶೈವರಿಗೆ ಜಪಿಸಲು ಯೋಗ್ಯವು. ಇದೇ ಕಾರಣದಿಂದಲೇ ಪಂಚಾಕ್ಷರ ಜಪಸ್ಥಲವೆಂದು ಶ್ರೀ ಭಗವತ್ಪಾದರು ಹೆಸರಿಟ್ಟಿರುವರು; ಇಲ್ಲದಿದ್ದರೆ ಷಡಕ್ಷರ ಜಪಸ್ಥಲವೆಂದನ್ನಬಹುದಾಗಿತ್ತು. ಇದೇ ಕಾರಣದಿಂದ ವಚನಗಳಲ್ಲಿಯೂ ಕೂಡ ಪಂಚಾಕ್ಷರ ಜಪಸ್ಥಲವೆಂದೇ ಹೇಳಿರುವರು. ಈ ಪ್ರಣವ ಸಹಿತ ಪಂಚಾಕ್ಷರ ಮಂತ್ರವೇ ಅಷ್ಟಾವರಣ ನಿಷ್ಠವಾಗಿರುವದು. ಶ್ರೀಕರಭಾಷ್ಯಕಾರರೂ ಕೂಡ ಅಷ್ಟಾವರಣಗಳಲ್ಲಿ ಸೇರಿರುವ ಮಂತ್ರವು ಪಂಚಾಕ್ಷರವೇ ಎಂದು ಹೇಳಿರುವರು. ಈ ಪಂಚಾಕ್ಷರ ಮಂತ್ರವು ಶ್ರೀ ರುದ್ರ ಪಠಿತವಾಗಿರುವುದರಿಂದ ವೈದಿಕವಾಗಿದೆ. ಈ ಮಹಾಮಂತ್ರರೂಪವಾದ ಪರಾವಿದ್ಯೆಯಿಂದ ಲಿಂಗಾಂಗ ಸಾಮರಸ್ಯವನ್ನು ಬೋಧಿಸಬೇಕು ಅಂದರೆ ನಮಃ ಪದಾರ್ಥವು ಅಂಗವು, ಶಿವಪದಾರ್ಥವು ಲಿಂಗವು, ಅಯ ಪದಾರ್ಥವು ಸಾಮರಸ್ಯವು. ಲಿಂಗಗಳೆಷ್ಟು, ಅಂಗಗಳೆಷ್ಟು, ಶಕ್ತಿ-ಭಕ್ತಿಗಳಾವು, ಹಸ್ತಗಳಾವು, ಅರ್ಪಣೀಯ ಪದಾರ್ಥವಾವುದು, ಯಾವ ಯಾವ ಲಿಂಗಗಳು ಯಾವ ಯಾವ ಅಂಗಗಳಲ್ಲಿ ಸಾಮರಸ್ಯವು?-ಇತ್ಯಾದಿ ವಿಷಯವನ್ನು ಪುನಃ ದೀಕ್ಷಾ ಗುರುವಿನಿಂದಲೇ ತಿಳಿಯಬೇಕು. ಈ ಲಿಂಗಾಂಗ ಸಾಮರಸ್ಯಬೋಧವೆಂಬ ಷಟ್‌ಸ್ಥಲ ಬ್ರಹ್ಮೋಪದೇಶವಾದರೂ ದೀಕ್ಷೆಯೊಳಗಂತರ್ಗತವಲ್ಲದೆ, ಇದಕ್ಕಾಗಿ ಮತ್ತೊಂದು ಸಂಸ್ಕಾರವಿಲ್ಲ. ವಟುವಿನ ಬುದ್ಧಿ ಸಾಮರ್ಥ್ಯವನ್ನು ನೋಡಿ, ಉಪದೇಶ ಮಾಡಬೇಕಾಗುತ್ತದೆ. ಶಿವದೀಕ್ಷೆಗೆ ಕಾಲ ನಿಯಮವಿರುವಂತೆ ಷಟ್‌ಸ್ಥಲ ಬ್ರಹ್ಮೋಪದೇಶ ವಿಧಿಗೆ ಕಾಲನಿಯಮವಿಲ್ಲ. ಶಿವದೀಕ್ಷೆಯನ್ನು ಹುಟ್ಟದ ೮ನೇ ವರ್ಷದಲ್ಲಿ ಮಾಡುವುದು ಉತ್ತಮವು, ೮ ವರ್ಷ ಮೀರಿ ೧೬ ವರ್ಷಗಳೊಳಗೆ ಮಾಡುವುದು ಮಧ್ಯಮವು, ೧೬ ವರ್ಷಗಳ ಮೇಲೆ ಮಾಡುವದು ಅಧಮವು. ಹೀಗೆ ಕಾಲನಿಯಮವುಂಟು. ೮ನೇ ವರ್ಷದಲ್ಲಿ ವಟುವಿಗೆ ಅಂಥ ಸಾಮರಸ್ಯ ವಿದ್ಯೆಯನ್ನು ಗ್ರಹಣ ಮಾಡುವ ಶಕ್ತಿಯು ಪ್ರಾಯಶಃ ಇರುವದೇ ಇಲ್ಲ. ಆದ್ದರಿಂದ ದೀಕ್ಷೆಯಲ್ಲಿ ಗುರುವಿನಿಂದ ಶಿಷ್ಯನಲ್ಲಿ ಮಾಡಲ್ಪಟ್ಟ ಸಾಮರಸ್ಯವನ್ನು, ಶಿಷ್ಯನು ಪ್ರತಿನಿತ್ಯದಲ್ಲಿಯೂ ಆಚರಿಸಿ ಅಭ್ಯಾಸಮಾಡಿ ದೃಢಪಡಿಸಿಕೊಳ್ಳುವದಕ್ಕಾಗಿ ಪುನಃ ಗುರುಮೂರ್ತಿಯನ್ನು ಆಶ್ರಯಿಸಬೇಕಾಗುವುದು.

ಶಕ್ತಿವಿಶಿಷ್ಟಾದ್ವೈತಕ್ಕೆ ಅಂದರೆ ಲಿಂಗಾಂಗ ಸಾಮರಸ್ಯಕ್ಕೆ ಸಾಧನಗಳಾದ ಅಷ್ಟಾವರಣಗಳಲ್ಲಿ ಮಂತ್ರಸ್ವರೂಪವನ್ನೂ ಗುರುವಿನ ಸ್ವರೂಪವನ್ನೂ ಸಂಕ್ಷೇಪದಿಂದ ನಿರೂಪಿಸಿದ್ದಾಯಿತು. ಇನ್ನು ಲಿಂಗದ ವಿಷಯವನ್ನು ಹೇಳುವೆನು. ಶಿವಲಿಂಗವು ಶಿವನಿಗೆ ಭಿನ್ನವಾದದ್ದಲ್ಲ; ಶಿವಸ್ವರೂಪವಾದದ್ದು; ಇದು ಸರ್ವ ವ್ಯಾಪಕವೂ, ಸರ್ವಶಕ್ತಿಯುಳ್ಳದ್ದೂ, ವಿಶ್ವರೂಪವೂ, ವಿಶ್ವನಿಯಾಮಕವೂ ಆಗಿದೆ. ಇದುವೇ ಸರ್ವೋಪನಿಷತ್ತುಗಳಿಂದ ಹೇಳಲ್ಪಡುವ ಬ್ರಹ್ಮವು. ಪರಶಿವಲಿಂಗವೇ ಜಗತ್ತಿನ ಜನ್ಮಾದಿಗಳಿಗೆ ಕಾರಣವು. ಇದರಿಂದಲೇ ಸರ್ವವ್ಯವಹಾರವು ನಡೆಯುತ್ತದೆ. ಈ ಶಿವನ ಇಚ್ಛೆಯಿಲ್ಲದೆ ಲೋಕದಲ್ಲಿ ಒಂದು ಹುಲ್ಲುಕಡ್ಡಿಯೂ ಸಹ ಅಲ್ಲಾಡುವದಿಲ್ಲ. ಪೂರ್ವದಲ್ಲಿ ಮದೋನ್ಮತ್ತರಾದ ಬ್ರಹ್ಮ ವಿಷ್ಣು ದೇವತೆಗಳಿಗೆ ಅನುಗ್ರಹಿಸುವದಕ್ಕಾಗಿ ಜ್ಯೋತಿರ್ಲಿಂಗರೂಪದಿಂದ ಅವರಿಗೆ ಕಾಣಿಸಿಕೊಂಡಾಗ ಅವರು ಆ ಲಿಂಗದ ಮಸ್ತಕ-ಪಾದಗಳನ್ನು ನೋಡುವದಾಗಲಿಲ್ಲ, ಇದು ಸರ್ವೋತ್ಕೃಷ್ಟವಾದದ್ದು, ಈ ಲಿಂಗರೂಪಿಯಾದ ಶಿವನು ಜಗತ್ತನ್ನು ಮಾಡಬೇಕಾದರೆ ಮತ್ತಾವದೊಂದನ್ನೂ ಅಪೇಕ್ಷಿಸದೆ ತನ್ನ ಸಂಕಲ್ಪದಿಂದಲೇ ಮಾಡುವನೆಂದು ಶಾಸ್ತ್ರವು ಹೇಳುತ್ತದೆ. ‘ಚಿದಾತ್ಮೈವಹಿದೇವೋಂತಃಸ್ಥಿತಮಿಚ್ಛಾವಶಾದ್ಬಹಿಃ ಯೋಗೀವನಿರುಪಾದಾನ ಮರ್ಥಜಾತಂಪ್ರಕಾಶಯೇತ್’ ಯೋಗಿಯು ತನ್ನ ಸಂಕಲ್ಪಶಕ್ತಿಯಿಂದ ತನಗಭೀಷ್ಟಗಳಾದ ಪದಾರ್ಥಗಳನ್ನು ಮಾಡುವಂತೆ ಶಿವನು ಕೇವಲ ತನ್ನ ಶಕ್ತಿಯಿಂದಲೇ ಪ್ರಪಂಚವನ್ನು ಮಾಡುವನು. ಶಿವನು ಸರ್ವಜ್ಞತ್ವಾದಿ ಆರಂಗಗಳಿಂದ ಕೂಡಿಕೊಂಡಿರುತ್ತಾನೆ. ಈ ಪರಶಿವಬ್ರಹ್ಮವು ಅದ್ವೈತಿಗಳು ಹೇಳುವಂತೆ ನಿರಂಗನಿರ್ವಿಶೇಷವಲ್ಲ. ಈ ಆರು ಅಂಗಗಳು ಶ್ರುತಿಸಿದ್ಧಗಳಾಗಿರುವವು. ಈ ಸರ್ವವ್ಯಾಪಕವಾದ ಪರಶಿವಲಿಂಗವು ಭಕ್ತರ ಅನುಗ್ರಹಕ್ಕಾಗಿ ಇಷ್ಟಲಿಂಗಾದಿ ಸ್ವರೂಪವಾಯಿತು. ಕರಗಿದ ತುಪ್ಪವು ಹೆತ್ತತುಪ್ಪವಾದಂತೆಯೂ, ಸರ್ಪವು ಕುಂಡಲಾಕಾರವಾದಂತೆಯೂ, ಬಂಗಾರಗಟ್ಟಿಯು ಕಟಕ ಮಕುಟಗಳಾದಂತೆಯೂ, ಕರಗಿದ ತುಪ್ಪದ ಗುಣವು ಹೆತ್ತ ತುಪ್ಪದಲ್ಲಿರುವಂತೆಯೂ, ಆ ಪರಶಿವಲಿಂಗವು ಇಷ್ಟಾದಿ ಲಿಂಗರೂಪವಾದಾಗ್ಯೂ, ಇಷ್ಟಾದಿ ಲಿಂಗಗಳಲ್ಲಿ ಆ ಪರಶಿವಲಿಂಗದ ಯಾವ ಗುಣಕ್ಕೂ ಲೋಪವಿಲ್ಲಾದ್ದರಿಂದ ಇಷ್ಟಲಿಂಗವು ತನ್ನನ್ನು ಧರಿಸಿ-ಪೂಜಿಸಿ-ಧ್ಯಾನಿಸುವವರಿಗೆ ಇಷ್ಟಾರ್ಥವನ್ನು ಕೊಡುತ್ತದೆ. “ಇಷ್ಟಮೂರ್ಜಂ” ‘ತತ್ಪ್ರಾಣೇಷ್ವಂತರ್ಮನಸೋಲಿಂಗಂ,’ ‘ಭಾವಗ್ರಾಹ್ಯಮನೀಡಾಖ್ಯಂ’ ಇತ್ಯಾದಿ ಶ್ರುತಿಗಳು ಇಷ್ಟಪ್ರಾಣಭಾವಲಿಂಗಗಳನ್ನು ಪ್ರತಿಪಾದಿಸುತ್ತವೆ.

ಲಿಂಗಧಾರಣವು ನಾಲ್ಕು ವೇದಗಳಲ್ಲಿಯೂ ವೇದಾಂತಗಳಲ್ಲಿಯೂ ನಾಲ್ಕು ಯುಗಗಳಲ್ಲಿ ಪ್ರಸಿದ್ಧಗಳಾದ ಮನು ಮೊದಲಾದ ನಾಲ್ಕು ಸ್ಮೃತಿಗಳಲ್ಲಿಯೂ, ಶಿವಾಗಮಗಳಲ್ಲಿಯೂ, ಪುರಾಣಗಳಲ್ಲಿಯೂ, ಇತಿಹಾಸಗಳಲ್ಲಿಯೂ ಹೇಳಲ್ಪಟ್ಟಿರುವದು. ‘ಪವಿತ್ರಂತೇ ವಿತತಂ’ ಇತ್ಯಾದಿ ಋಗ್ವೇದ ವಾಕ್ಯಗಳಲ್ಲಿ ಲಿಂಗಧಾರಣವು ಹೇಳಲ್ಪಡುತ್ತದೆ. ‘ಸರ್ವಲಿಂಗಂ ಸ್ಥಾಪಯತಿ’ ಇತ್ಯಾದಿ ಯಜುರ್ವೇದದ ವಾಕ್ಯಗಳಲ್ಲಿಯೂ, ‘ವಿಶ್ವೇದೇವಂ ವಿದುಷಾವೇದಿತವ್ಯಂ ಶ್ರದ್ಧಾ ಭಕ್ತ್ಯಾ ಶೈವಲಿಂಗಂ ಪ್ರಧೃತಂ ಸರ್ವದೇವೈಃ’ ಇತ್ಯಾದಿ ಸಾಮವೇದ ವಾಕ್ಯಗಳಲ್ಲಿಯೂ, ‘ತನುಸು ಲಿಂಗಂ ಶಾಂಭವಂ ಬಿಭೃಯಾನ್ಮುಕ್ತಿಕಾಮಃ’ ಇತ್ಯಾದಿ ಅಥರ್ವಣ ವೇದ ವಾಕ್ಯಗಳಲ್ಲಿಯೂ, ‘ಅಮೃತಸ್ಯದೇವಧಾರಣೋ ಭೂಯಾಸಂ,’ ‘ಲಿಂಗಾಂಗ ಶೋಭಾ ಮೋಕ್ಷಮಾರ್ಗೈಕನಿಷ್ಠಾಃ’ ಇತ್ಯಾದ್ಯನಂತಗಳಾದ ಉಪನಿಷದ್ವಾಕ್ಯಗಳಲ್ಲಿಯೂ ಹೇಳಲ್ಪಡುತ್ತದೆ. ಲಿಂಗಧಾರಣ ಪ್ರತಿಪಾದಕಗಳಾದ ಶೃತಿ ವಾಕ್ಯಗಳ ಉಪಬ್ರಂಹಣ ವಾಕ್ಯಗಳು ಪುರಾಣಗಳಲ್ಲಿ ಪ್ರಸಿದ್ಧಗಳೇ ಆಗಿರುವವು. ಕೃತಯುಗದಲ್ಲಿ ಮನುಸ್ಮೃತಿಯು, ತ್ರೇತಾಯುಗದಲ್ಲಿ ಗೌತಮ ಸ್ಮೃತಿಯು, ದ್ವಾಪರ ಯುಗದಲ್ಲಿ ಶಂಖಲಿಖಿತಸ್ಮೃತಿಯು, ಕಲಿಯುಗದಲ್ಲಿ ಪರಾಶರ ಸ್ಮೃತಿಯು ಪ್ರಧಾನ

ಗಳು. ಈ ಸ್ಮೃತಿಗಳಲ್ಲಿ ಲಿಂಗಧಾರಣವು ಹೇಳಲ್ಪಡುತ್ತದೆ. 'ಶಿವ ಲಿಂಗಾಂಗ ಸಂಯುತಃ' ಎಂದು ಮನುಸ್ಮೃತಿಯೂ, 'ಮಸ್ತಕೇಲಿಂಗಧಾರಣಂ' ಎಂದು ಗೌತಮಸ್ಮೃತಿಯೂ, 'ಮಸ್ತಕೇ ಹೃದಯೇ ಕಂಠೇ ಧಾರಯೇತ್ಸರ್ವದಾದ್ವಿಜಃ' ಎಂದು ಶಂಖಸ್ಮೃತಿಯೂ, 'ಲಿಂಗಧಾರಿಣಾಂ ಬ್ರಹ್ಮತ್ವಮೇವಭವತಿ,' ಎಂದು ಪರಾಶರಸ್ಮೃತಿಯೂ, ಲಿಂಗಧಾರಣವನ್ನು ಹೇಳುತ್ತವಾದ್ದರಿಂದ ನಾಲ್ಕುಯುಗಗಳಲ್ಲಿ ಲಿಂಗಧಾರಿ ವೀರಶೈವರಿದ್ದರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ಬೇರೆಬೇರೆ ಯುಗಗಳಲ್ಲಿ ಬೇರೆಬೇರೆ ನಾಮಗಳಿಂದ ಜಗದ್ಗುರು ಪಂಚಾಚಾರ್ಯರ ಅವತಾರವು ಸಾರ್ಥಕವಾಗುತ್ತದೆ. ಮಹಾಭಾರತ ಅನುಶಾಸನಿಕ ಪರ್ವದಲ್ಲಿ, ದಾನಪಾತ್ರರಾವ ಬ್ರಾಹ್ಮಣರೆಂದು ಯುಧಿಷ್ಠಿರನು ಪ್ರಶ್ನೆಮಾಡಲು, ಲಿಂಗಧಾರಿ ಬ್ರಾಹ್ಮಣರು ದಾನಪಾತ್ರರೆಂದು ಭೀಷ್ಮನು ಉತ್ತರವನ್ನು ಹೇಳಿರುವನು. ಇದರಿಂದ ಲಿಂಗ ಧಾರಣವು ಮಹಾಭಾರತದಲ್ಲಿಯೂ ಹೇಳಲ್ಪಟ್ಟಿತೆಂದು ತಿಳಿಯುತ್ತದೆ. ಯಾವನ ಸ್ಥೂಲದೇಹದಲ್ಲಿ ಲಿಂಗಧಾರಣವಿಲ್ಲವೋ, ಆ ದೇಹವು ಶವದಂತೆ ನಿಷ್ಫಲವೆಂದು ಲಿಂಗವನ್ನು ಧರಿಸದವರಿಗೆ ಪ್ರತ್ಯವಾಯವು ಪುರಾಣ ಪ್ರಸಿದ್ಧವಾಗಿದೆ. ಇನ್ನು ಶ್ರುತಿಗೆ ಅನುಕೂಲಗಳಾದ ಶಿವಾಗಮಗಳಲ್ಲಂತೂ ಲಿಂಗಧಾರಣವನ್ನು ಹೇಳುವ ಅನಂತ ವಾಕ್ಯಗಳಿರುತ್ತವೆ. ಎಲ್ಲ ಶಿವಾಗಮಗಳ ಸಿದ್ಧಾಂತ ರೂಪವಾದ ಸಿದ್ಧಾಂತಾಗಮದಲ್ಲಿ 'ಶೃತಿಸ್ಮೃತಿಪುರಾಣೇಷು ವೈದಿಕಾನಾಂ ವರಾನನೇ | ಲಿಂಗಧಾರಣಮಾಖ್ಯಾತಂ ಸರ್ವಸಿದ್ಧಿಪ್ರದಾಯಕಂ ||' ಶೃತಿ ಸ್ಮೃತಿ ಪುರಾಣಗಳಲ್ಲಿ ಸರ್ವಸಿದ್ಧಿಯನ್ನುಂಟುಮಾಡುವ ಲಿಂಗಧಾರಣವು ಹೇಳಲ್ಪಡುತ್ತದೆಂದು ಶ್ರೀ ಪರಮೇಶ್ವರನು ಪಾರ್ವತೀದೇವಿಗೆ ಹೇಳಿರುವನು.

'ತ್ರಿಯಾಯುಷಂ ಜಮದಗ್ನೇಃ' ಎಂಬುವ ಮಂತ್ರದಿಂದ ಭಸ್ಮದಿಂದ ತ್ರಿಪುಂಡ್ರಧಾರಣವು ವಿಧಿಸಲ್ಪಡುತ್ತದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ, ಊರ್ಧ್ವಪುಂಡ್ರವು ಸಾಮವೇದವು, ಮಧ್ಯಪುಂಡ್ರವು ಯಜುರ್ವೇದವು, ಅಧಃ ಪುಂಡ್ರವು ಋಗ್ವೇದವೆಂದು ಹೇಳಿ— 'ತಸ್ಮಾತ್ಪುಂಡ್ರಂ ತ್ರಿಯಾಯುಷಂ' ಎಂದು ಹೇಳಲ್ಪಟ್ಟಿದೆ. ಮತ್ತು ಯಜುರ್ವೇದದಲ್ಲಿ 'ಭೂತ್ಯೈನಪ್ರಮದಿತವ್ಯಂ' ಎಂದು ಭಸ್ಮಧಾರಣವು ಹೇಳಲ್ಪಟ್ಟಿದೆ. ಆದ್ದರಿಂದ ಭಸ್ಮಧಾರಣವು ವೈದಿಕವಾಗಿದೆ. ರುದ್ರಾಕ್ಷಧಾರಣವು ಕಾತ್ಯಾಯನ ಶಾಖೆಯಲ್ಲಿ 'ತಾನಿಹವಾ ಏತಾನಿ ರುದ್ರಾಕ್ಷಾಣಿ ಯತ್‌ತ್ರಯೋ ವೇದಾಧಾರಯಂತಿ ತಸ್ಮಾದ್ದೇವಾಧಾರಯಂತಿ ಯಸ್ತಾನಿಧಾರಯ್ಯ' ಬೃಹಜ್ಜಾಬಾಲದಲ್ಲಿ 'ರುದ್ರಾಕ್ಷಾಣಾಂತು ಭದ್ರಾಣಾಂ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಡುತ್ತದೆ. ಇನ್ನು ಶಾಂಡಿಲ್ಯಶಾಖಾ—ಸ್ಕಾಂದ-ಲೈಂಗ್ಯಾದಿ ಪುರಾಣಗಳಲ್ಲಿಯೂ ಇತಿಹಾಸದಲ್ಲಿಯೂ ಹೇಳಲ್ಪಡುವದರಿಂದ ಶ್ರೌತವಾಗಿದೆ. ಋಗ್ವೇದದಲ್ಲಿ 'ತ್ವಾದತ್ತೇಭಿರುದ್ರ ಶಂತಮೇಭಿಃ' ಎಂಬ ಮಂತ್ರದಿಂದಲೂ, ಈಶಾವಾಸ್ಯೋಪನಿಷತ್ತಿನಲ್ಲಿ 'ಈಶಾವಾಸ್ಯಮಿದಂ ಸರ್ವಂ' ಎಂಬ ಮಂತ್ರದಿಂದಲೂ, ಯಜುರ್ವೇದದಲ್ಲಿ 'ಯಚ್ಛಂಚಯೋಶ್ಚ ಮನುರಾಯಜೇಪಿತಾ' ಎಂಬ ಮಂತ್ರದಿಂದಲೂ. ಇನ್ನೂ ಅನೇಕ ಶೃತ್ಯಾದಿಗಳಲ್ಲಿ ಹೇಳಲ್ಪಡುವುದರಿಂದಲೂ ಶ್ರೌತವಾಗಿದೆ.

ಪಾದೋದಕ ಸೇವನೆಯು 'ತ್ರಿಪಾದೂರ್ಧ್ವಮುದೈತ್ಪುರುಷಃ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗುವದರಿಂದ ವೈದಿಕವಾಗಿದೆ.

ಇಂಥ ಅಷ್ಟಾವರಣ ರೂಪಗಳಾದ ಸಾಧನಗಳಿಂದ ಗುರುವಿನಿಂದ ದೀಕ್ಷಾಕಾಲದಲ್ಲಿ ಲಭಿಸಿದ ಲಿಂಗಾಂಗ ಸಾಮರಸ್ಯವನ್ನು ಅಭ್ಯಾಸಮಾಡುತ್ತಾ ಹೋಗಬೇಕು. ಈ ಲಿಂಗಾಂಗ ಸಾಮರಸ್ಯ ರೂಪವಾದಫಲವನ್ನು ಗುರುವು ಶಿಷ್ಯನಿಗೆ ದೀಕ್ಷೆಯಲ್ಲಿಯೇ ಕೊಟ್ಟುಬಿಟ್ಟಿದ್ದಾನಲ್ಲಾ, ಪುನಃ ಸಾಧನಗಳೇಕೆ?—ಅಂದರೆ ಹೊಲದಲ್ಲಿ ಬೀಜವನ್ನು ಬಿತ್ತಿದ ಮೇಲೆ ಪುನಃಪುನಃ ಜಲ ಸೇಚನವನ್ನು ಮಾಡಲೇಬೇಕಾಗುತ್ತದೆ, ಮಾಡದಿದ್ದರೆ ಬೀಜವು ಅಂಕುರಿಸಿ ಪಲ್ಲವಿಸಿ ಫಲವುಳ್ಳದ್ದಾಗುವದಿಲ್ಲ. ಆದ್ದರಿಂದ ಬೀಜಕ್ಕೆ ಜಲಸೇಚನೆಯೆಂಬ ಸಾಧನವು ಬೇಕು. ಗುರುವು ಶಿಷ್ಯಕ್ಷೇತ್ರದಲ್ಲಿ ಲಿಂಗಾಂಗಸಾಮರಸ್ಯ ರೂಪವಾದ ಬೀಜವನ್ನು ಬಿತ್ತಿದ ಮೇಲೆ ಶಿಷ್ಯನು ಗುರುವಿನ ಅಪ್ಪಣೆಯ ಪ್ರಕಾರ ಗುರುಪೂಜಾ, ಲಿಂಗಪೂಜಾ ಮೊದಲಾದ ಸಾಧನರೂಪ ಪತಿಕರ್ಮಗಳೆಂಬ ಜಲಸೇಚನೆಯನ್ನು ಮಾಡಲೇಬೇಕು. ಒಕ್ಕಲಿಗನ ಬೀಜವು ಗಿಡವಾಗಿ ಫಲವನ್ನು ಕೊಟ್ಟರೂ ಪುನಃಪುನಃ ಫಲಕ್ಕಾಗಿ ಸಾಧನಗಳಲ್ಲಿ ಪ್ರವರ್ತಿಸುವಂತೆ ಶಿವದೀಕ್ಷೆಯಲ್ಲಿ ಶ್ರೀ ಗುರುಮೂರ್ತಿಯಿಂದ ಲಿಂಗಾಂಗಸಾಮರಸ್ಯವೆಂಬ ಫಲವೇ ಅಂದರೆ ಮೋಕ್ಷವೇ ದೊರಕಿದ್ದರೂ ಪುನಃ ಫಲಕ್ಕಾಗಿಯೇ ಸಾಧನಗಳಲ್ಲಿ ಪ್ರವರ್ತಿಸಬೇಕಾಗುತ್ತದೆ. ಮೋಕ್ಷರೂಪವಾದ ಫಲವು ಒಂದೇಯಲ್ಲವೇ, ದೀಕ್ಷೆಯಿಂದಲೇ ಮೋಕ್ಷಫಲವು ಉಂಟಾದಮೇಲೆ ಪುನಃ ಅಷ್ಟಾವರಣರೂಪಗಳಾದ ಸಾಧನಗಳೇಕೆ ಬೇಕು? "ದೀಕ್ಷಯಾಮುಚ್ಯತೇದೇಹೀವಿವಿಧಾಧ್ವಬಂಧನಾತ್ | ದೀಕ್ಷೈವ ಮೋಕ್ಷದಾಪುಂಸಾಂ |" ಇತ್ಯಾದಿ ವಾಕ್ಯಗಳು ದೀಕ್ಷೆಯಿಂದ ಮೋಕ್ಷವನ್ನು ಹೇಳುತ್ತಿರಲು ದೀಕ್ಷೆಯಾದನಂತರ ಸಾಧನಗಳಾಚರಣೆಗೆ ಪ್ರಯೋಜನವಿಲ್ಲ. ಪ್ರಯೋಜನವಿಲ್ಲದ ಮೇಲೆ ಯಾವ ಮಂದನೂ ಕೂಡ ಸಾಧನಗಳಲ್ಲಿ ಪ್ರವರ್ತಿಸಲಾರನು ಅಂದರೆ—ದೀಕ್ಷೆಯಿಂದಲೇ ಮುಕ್ತಿ ರೂಪವಾದ ಫಲವೇ ಪ್ರಾಪ್ತವಾಗುತ್ತದೆನ್ನುವದನ್ನು ಒಪ್ಪಿಕೊಳುತ್ತೇವೆ. ಆದರೆ ಆನಂತರ ಸಾಧನಗಳಲ್ಲಿ ಪ್ರವೃತ್ತಿಯು ಹುಟ್ಟಬಾರದೆಂಬುವದನ್ನು ಮಾತ್ರ ಒಪ್ಪುವದಿಲ್ಲ. ಹಾಗಾದರೆ ಪ್ರಯೋಜನವಿಲ್ಲದ ಕೆಲಸವನ್ನು ಮಾಡುವವನು ಅವಿವೇಕಿಯಾಗಲಾರನೋ ಅಂದರೆ, ವ್ಯಾಸಾದಿಶಾಸ್ತ್ರ ಕರ್ತೃಗಳು ಮುಕ್ತರೋ, ಅಮುಕ್ತರೋ? ಮುಕ್ತರಾಗಿದ್ದರೆ ಪುನಃ ಶಾಸ್ತ್ರಚಿಂತನ-ನಿರ್ಮಾಣಗಳಲ್ಲಿ ಅವರಿಗೆ ಪ್ರವೃತ್ತಿಯು ಹೇಗೆ? ಅವರಿಗೆ ಮೋಕ್ಷಫಲವು ಮೊದಲೇ ದೊರಕಿರುವದಷ್ಟೆ? ಇನ್ನು ಅಮುಕ್ತರೆಂದರೆ, ತಾವೇ ಮುಕ್ತಿಫಲವನ್ನು ನೋಡದಿರುವಾಗ ಅನ್ಯರಿಗೆ ಆ ಫಲವನ್ನು ತೋರಿಸುವ ಬಗೆ ಹೇಗೆ? ತಾನೇ ನದಿಯಲ್ಲಿ ಮುಳುಗಿಹೋಗುವಾಗ ಅನ್ಯರನ್ನು ದಾಟಿಸುವದುಂಟೆ? ಎಂದಿಗೂ ಇಲ್ಲ. ಆದ್ದರಿಂದ ಮುಕ್ತಿ ಫಲವನ್ನು ಹೊಂದಿರುವ ವ್ಯಾಸ ಮೊದಲಾದ ಮಹರ್ಷಿಗಳೂ, ಜನಕಾದಿ ಮಹಾರಾಜರೂ ಶಾಸ್ತ್ರನಿರ್ಮಾಣ ಮತ್ತು ಶಾಸ್ತ್ರಜಿಜ್ಞಾಸಾದಿ ಸಾಧನಗಳಲ್ಲಿ ಪ್ರವರ್ತಿಸುವಂತೆ, ದೀಕ್ಷೆಯಿಂದ ಮುಕ್ತಿಫಲವನ್ನು ಹೊಂದಿದ ವೀರಶೈವರು ಲಿಂಗಪೂಜಾ, ಲಿಂಗಧಾರಣ, ಲಿಂಗಜಿಜ್ಞಾಸ ಮೊದಲಾದ ಸಾಧನಗಳಲ್ಲಿ ಪ್ರವರ್ತಿಸುವರು. ಇದೂ ಅಲ್ಲದೆ ಅದ್ವೈತಿಗಳು ಜೀವ-ಬ್ರಹ್ಮೈಕ್ಯ ರೂಪವಾದ ಸಮ್ಯಗ್ ಜ್ಞಾನವು ಪ್ರಾಪ್ತವಾಗಿದ್ದರೂ ಪ್ರಾರಬ್ಧ ಪಾಕಪರ್ಯಂತರವಾಗಿ ದೇಹೋಪಾಧಿಯು ಇರುವದೆಂದು ಹೇಳುವಂತೆ ದೀಕ್ಷಿತರಿಗೆ ದೇಹೋಪಾಧಿಯು ಸಂಗತವು. ಇದೂ ಅಲ್ಲದೆ, ಅಗ್ನಿಷ್ಟೋಮಯಾಗವು ಸ್ವರ್ಗಸಾಧನವಾಗಿದೆ. ಇದನ್ನು ಆಚರಿಸಿದ ಮೇಲೆ ಪುನಃ ಅಪೂರ್ವಕಲ್ಪನೆ

ಯೂ, ಅನ್ಯಸಾಧನಗಳ ಆಚರಣೆಯೂ ಯಾತಕ್ಕೆ ಬೇಕು ? ಆದ್ದರಿಂದ ಸಾಧ್ಯಾರ್ಥವು ಸಿದ್ಧವಾಗಿದ್ದರೂ ಪುನಃ ಸಾಧನಗಳ ಕಲ್ಪನೆಯನ್ನು ಮಾಡುವಂತೆ, ಲಿಂಗಾಂಗಸಾಮರಸ್ಯರೂಪವಾದ ಫಲವು ಸಿದ್ಧವಾಗಿದ್ದರೂ ಲಿಂಗಪೂಜಾದಿ ಸಾಧನಗಳು ಬೇಕೇಬೇಕು. ಪೂರ್ವಕಾಂಡದಲ್ಲಿ ಸಂಧ್ಯಾವಂದನ ಅಗ್ನಿಹೋತ್ರಾದಿಗಳು ನಿತ್ಯಕರ್ಮಗಳಾಗಿರುವವು, ಆ ನಿತ್ಯಕರ್ಮಗಳನ್ನು ಆಚರಿಸದಿದ್ದರೆ ಪ್ರತ್ಯವಾಯವು ವಿಧಿಸಲ್ಪಡುತ್ತದೆ, ಆದ್ದರಿಂದ ಪ್ರತ್ಯವಾಯದಿಂದ ಜ್ಯೋತಿಷ್ಟೋಮವು ಆಚರಿಸಲ್ಪಟ್ಟದ್ದರೂ ನಿತ್ಯಕರ್ಮಗಳನ್ನು ಆಚರಿಸಬೇಕಾಗುತ್ತದೆ ಅಂದರೆ, ನಮ್ಮಲ್ಲಿಯೂ ಶಿವಪೂಜಾ, ಶಿವಮಂತ್ರಜಪ, ಪಂಚಾಚಾರ ಮೊದಲಾದ ಕರ್ಮಗಳು ನಿತ್ಯಕರ್ಮಗಳಾಗಿವೆ. ಇವುಗಳನ್ನು ಆಚರಿಸದಿದ್ದರೆ ಪ್ರತ್ಯವಾಯವು ವಿಧಿಸಲ್ಪಡುತ್ತದಾದ್ದರಿಂದ ಸಾಧನಗಳು ಬೇಕು. ವಸ್ತುತಃ ವೀರಶೈವ ಮತದಲ್ಲಿ ಸಾಲೋಕ್ಯಾದಿ ಶ್ರುತಿಸಿದ್ಧಗಳಾದ ನಾಲ್ಕು ಮುಕ್ತಿಗಳನ್ನು ಹೇಳುವದರಿಂದ ಅಧಿಕಾಧಿಕ ಫಲಕ್ಕಾಗಿ ಸಾಧನಗಳು ಬೇಕಾಗುವವು. ಆದ್ದರಿಂದ ಸಾಧಕನು ಗುರುವಿನಿಂದ ಮಾಡಲ್ಪಟ್ಟ ಸಾಮ್ಯರಸ್ಯದ ದಾರ್ಢ್ಯಕ್ಕಾಗಿಯೂ, ಆ ಸಾಮರಸ್ಯದ ವಿಚ್ಛೇದವಾಗಬಾರದೆಂಬುವದಾಗಿಯೂ ಸಾಧನಾಚರಣಗಳುಳ್ಳವನಾಗಿರಬೇಕು.

ಲಿಂಗಾಂಗ ಸಾಮರಸ್ಯವು ಎರಡು ಪ್ರಕಾರವಾಗಿದೆ: ಒಂದನೆಯದು ಸಾಧನಾವಸ್ಥೆಯಿಂದ ಸಹಿತವಾದದ್ದು; ಎರಡನೆಯದು ಅದರಿಂದ ರಹಿತವಾದದ್ದು. ಬೀಜವನ್ನು ಬಿತ್ತಿದ ಒಕ್ಕಲಿಗನು ಮುಂದೆ ಅದರ ಫಲವು ಸಿಗುವವರೆಗೂ ಆ ಬೀಜವು ಕೆಟ್ಟುಹೋಗಬಾರದೆಂದು ಅನೇಕೋಪಾಯಗಳಿಂದ ಪರಿಪಾಲಿಸುವಂತೆ ಮೊದಲಿನ ಸಾಮರಸ್ಯವನ್ನು ಪರಿಪಾಲಿಸುವುದಕ್ಕಾಗಿಯೇ ಶಿವಪೂಜಾದಿ ಉಪಾಯಗಳು ಬೇಕೇಬೇಕು. ಈ ಉಪಾಯಗಳ ಆಚರಣೆಯು ತನ್ನ ಪ್ರಾರಬ್ಧ ಪರಿಪಾಕವಾಗುವವರಿಗೂ ಅಂದರೆ ದೇಹಪಾತವಾಗುವವರಿಗೂ ಬೇಕು. ಆಮೇಲೆ ಫಲರೂಪವಾದ ಸಾಮರಸ್ಯವು ಲಭಿಸುವದು. ಈ ಸಾಮರಸ್ಯವೇ 'ನ ಸ ಪುನರಾವರ್ತತೇ ನಸಪುನಾವರ್ತತೇ' 'ಅನಾವೃತ್ತಿ: ಶಬ್ದಾತ್' ಈ ಶ್ರುತಿ ಸೂತ್ರಗಳಿಂದ ಹೇಳಲ್ಪಡುವ ಅನಾವೃತ್ತಿರೂಪವಾದ ಮುಕ್ತಿಯು. ಈ ಲೋಕದಲ್ಲಿ ಲಿಂಗಾಂಗಿ ಸಾಮರಸ್ಯವು ಅಂದರೆ ಶಿವಯೋಗವು ಸವಿಕಲ್ಪರೂಪವಾಗಿ ಯಾರಿಂದ ಸಾಧಿಸಲ್ಪಡುವದೋ, ಅವರು ಸಾಯುಜ್ಯ ಮುಕ್ತಿಯ ಹಿಂದಿನ ಸೋಪಾನಗಳಲ್ಲಿದ್ದು, ಅಲ್ಲಿ ಪುನಃ ನಿರ್ವಿಕಲ್ಪಸ್ಥಿತಿಯನ್ನು ಸಾಧಿಸಿ, ಅಂದರೆ ಬ್ರಹ್ಮತಾದಾತ್ಮ್ಯ ಸಾಕ್ಷಾತ್ಕಾರವನ್ನು ಹೊಂದಿ, ಅನಾವೃತ್ತಿರೂಪವಾದ ಸಾಯುಜ್ಯ ಮುಕ್ತಿಯನ್ನು ಹೊಂದುವರು. ಇಲ್ಲಿಯೇ ಶಿವಾದ್ವೈತದ ಸಾಕ್ಷಾತ್ಕಾರವಾಗಿದ್ದರೆ ಶರೀರ ಪಾತಾನಂತರದಲ್ಲಿ ಅವರಿಗೆ ತಿರುಗಿ ಭವಕ್ಕೆ ಬಾರದಿರುವ ಮುಕ್ತಿಯೇ ಲಭಿಸಿಬಿಡುವದು. ಆದ್ದರಿಂದ ಲಿಂಗಾಂಗ ಸಂಯೋಗದ ದಾರ್ಢ್ಯಕ್ಕಾಗಿ ಗುರುವಾಕ್ಯಪಾಲನ, ಶಿವಪೂಜಾ, ಪಂಚಾಕ್ಷರ ಮಂತ್ರಜಪ, ಭಸ್ಮ-ರುದ್ರಾಕ್ಷ ಧಾರಣ, ಶಿವಲಿಂಗ ಧ್ಯಾನ ಧಾರಣಾದಿ ಪತಿಕರ್ಮ ರೂಪಗಳಾದ ಸಾಧನಗಳು ಬೇಕು. ಆದ್ದರಿಂದ ದೀಕ್ಷೆಯಾದನಂತರ ಶಿವಪೂಜಾದಿ ಸಾಧನಗಳೇಕೆ ಬೇಕು ಎಂದು ಶಂಕೆ ಮಾಡುವವರಿಗೆ ಸಮಾಧಾನವಾಯಿತಲ್ಲವೆ? ಇನ್ನು ಈ ದೀಕ್ಷಾ ಸಂಪನ್ನನು ಪ್ರಾತಃಕಾಲದಲ್ಲಿ ಶಿವನನ್ನು ಸ್ಮರಿಸುತ್ತೆದ್ದು, ಶುದ್ಧ ಸ್ನಾನವನ್ನು ಮಾಡಿಕೊಂಡು, ಶಿವಪೂಜೆಯನ್ನು ಮಾಡಿ, ವೇದಾಂತ ಜಿಜ್ಞಾಸೆಯನ್ನು ಮಾಡಬೇಕು. ಇವಕ್ಕೆ 'ಶ್ರೋತವ್ಯೋ ಮಂತವ್ಯೋ ನಿಧಿಧ್ಯಾಸಿತವ್ಯಃ' ಎಂಬುವ ಶ್ರುತಿಯಿಂದ ವಿಹಿತವಾದ ಶ್ರವಣವೆನ್ನುವರು. ಇದನ್ನು ಶ್ರುತಿವಾಕ್ಯಗಳಿಂದಲೇ ಮಾಡಬೇಕು. 'ಶ್ರುತಿಃ ಪಂಚಾಕ್ಷರೋ ಮಂತ್ರೋ ಮಂತ್ರಾರ್ಥಸ್ಯೈವ ಚಿಂತನಂ' ಅಂದರೆ ತತ್ತ್ವಮಸ್ಯಾದಿ ಮಹಾ ವಾಕ್ಯಾರ್ಥವನ್ನೇ ಬೋಧಿಸುವ ಪಂಚಾಕ್ಷರ ಮಂತ್ರಾರ್ಥವನ್ನು ಚಿಂತಿಸಬೇಕು. ಈ ಲಿಂಗಾಂಗ ಸಾಮರಸ್ಯರೂಪವಾದ ಮಂತ್ರಾರ್ಥದ ಚಿಂತನೆಗೆ ಅನುಕೂಲಗಳಾದ ವೇದಾಂತಗಳನ್ನೂ ವಿಚಾರಿಸಬೇಕು; ಶಾಸ್ತ್ರಗಳನ್ನೂ ಸ್ಮೃತಿಗಳನ್ನೂ, ಪುರಾಣೋಪಪುರಾಣಗಳನ್ನೂ ವ್ಯಾಸಸೂತ್ರಗಳನ್ನೂ ವಿಚಾರಿಸಬೇಕು. ಆಮೇಲೆ ಎಲ್ಲವನ್ನು ಪಂಚಾಕ್ಷರಾರ್ಥ ರೂಪವೆಂದೇ ತಿಳಿಯಬೇಕೆಂದು ಕ್ರಿಯಾಸಾರಕಾರರು ಹೇಳಿದ್ದಾರೆ.

## ಉಪಸಂಹಾರ.

ದ್ವೈತ ಅದ್ವೈತ ವಿಶಿಷ್ಟಾದ್ವೈತ ಮತಗಳು ಶ್ರುತಿಯ ಏಕದೇಶಗಳಲ್ಲಿ ಹೇಳಲ್ಪಡುವವದರಿಂದಲೂ, ಮೇಲೆ ಹೇಳಿದ ಯುಕ್ತಿ-ಅನುಭವಗಳಿಗೆ ವಿರುದ್ಧಗಳಾಗಿರುವದರಿಂದಲೂ ಮುಮುಕ್ಷುಗಳಿಗುಪಯುಕ್ತವಲ್ಲ. ವೀರಶೈವರ ಶಕ್ತಿವಿಶಿಷ್ಟಾದ್ವೈತಮತವು ಸರ್ವಶ್ರುತಿ ಸಮ್ಮತವಾಗಿರುವದರಿಂದಲೂ, ಯುಕ್ತಿ-ಅನುಭವಗಳಿಗೆ ಸಮ್ಮತವಾಗಿರುವದರಿಂದಲೂ, ಸರ್ವೋತ್ಕೃಷ್ಟವಾಗಿದೆ. ಆದ್ದರಿಂದಲೇ ಸಿದ್ಧಾಂತಾಗಮವು "ದ್ವೈತಾದ್ವೈತಮತಂ ವೀರಶೈವಂ ಮೋಕ್ಷೈಕ ಕಲ್ಪಕಂ| ಸರ್ವವೇದಾಂತ ಸಿದ್ಧಾಂತಸಾರಂಸರ್ವಾರ್ಥಸಿದ್ಧಿದಂ|| ಎಂದರೆ ದ್ವೈತಾದ್ವೈತವೆಂಬ ವೀರಶೈವಮತವು ಮೋಕ್ಷದಾನವಿಷಯದಲ್ಲಿ ಕಲ್ಪವೃಕ್ಷವಾಗಿಯೂ, ಸರ್ವಾರ್ಥಸಿದ್ಧಿಯನ್ನುಂಟುಮಾಡುವದಾಗಿಯೂ ಇರುತ್ತದೆಂದು ಹೇಳುತ್ತದೆ. ಮತ್ತು ಸರ್ವವೇದಾಂತ ಸಿದ್ಧಾಂತಗಳ ಸಾರವೆಂತಲೂ ಹೇಳುತ್ತದೆ. ಶ್ರೀ ಪತಿಪಂಡಿತರೂಕೂಡ ತಮ್ಮ ಭಾಷ್ಯದಲ್ಲಿ "ಶ್ರುತ್ಯೈಕದೇಶಪ್ರಾಮಾಣ್ಯಂದ್ವೈತಾದ್ವೈತ ಮತಾದಿಷು| ದ್ವೈತಾದ್ವೈತ ಮತೇಶುದ್ಧೇವಿಶೇಷಾದ್ವೈತಸಂಜ್ಞಿಕೇ| ವೀರಶೈವೈಕ ಸಿದ್ಧಾಂತೇ ಸರ್ವಶ್ರುತಿ ಸಮನ್ವಯಃ || ಎಂದು ದ್ವೈತಾದ್ವೈತರೂಪವಾದ ವೀರಶೈವ ಮತಕ್ಕೆ ಸರ್ವೋತ್ಕೃಷ್ಟತೆಯನ್ನು ಹೇಳಿದ್ದಾರಾದ್ದರಿಂದಲೇ **"ನೊ ವೀರಶೈವ ಸದೃಶಂ ಮತಮಸ್ತಿ ಜಗತ್ರಯೇ"** ಎಂದು ವೀರಶೈವ ಮತಕ್ಕೆ ಸಮಾನವಾದ ಮತವು ಮೂರು ಲೋಕಗಳಲ್ಲಿಯೂ ಇಲ್ಲವೆಂದು ಸಾರಲ್ಪಡುತ್ತದೆ. || ಇತಿ-ಶಿವಂ ||

ಉಜ್ಜಯನೀ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರ
ಅಸ್ಥಾನಪಂಡಿತ, ಉನುಚಿಗಿ ಮಳೇಮಠಾಧ್ಯಕ್ಷ
**ಧರ್ಮರತ್ನ ಶ್ರೀ ಶಂಕರಶಾಸ್ತ್ರಿಗಳು.**

# ವೀರಶೈವ ಧರ್ಮದ ವಿಶಾಲತ್ವ.

ಲೇಖಕರು: ಶ್ರೀಮನ್ನಿರಂಜನಪ್ರಣವಸ್ವರೂಪ ಸಂಗನಬಸವಾ ಸ್ವಾಮಿಗಳು, ಬಂಥನಾಳ. ಜಿ|| ವಿಜಾಪುರ.

ಈ ಪ್ರಪಂಚದಲ್ಲಿರುವ ಪ್ರತಿಯೊಂದು ಚಿಕ್ಕದೊಡ್ಡ ಮತಗಳಿಗೂಸಹ ತನ್ನದೊಂದಂಗವನ್ನು ಕೊಟ್ಟು ತಾನುಸಂಪೂರ್ಣಾಂಗದಿಂದಕೂಡಿ ವಿರಾಜಿಸುವ ಅತಿಪ್ರಾಚೀನವಾದ ನಮ್ಮೀವೀರಶೈವ ಧರ್ಮಮಾತೆಯ ಘನತೆಯನ್ನು ಎಷ್ಟುವಿವರಿಸಿದರೂ ಅತ್ಯಲ್ಪವೇ ಆಗಿದೆ. ಸಾಕ್ಷಾತ್ ಭಗವಾನ್‌ಶಂಕರನುಕೂಡಾ 'ನವೀರಶೈವ ಸದೃಸಂ ಮತಮಸ್ತಿಜಗತ್ರಯೇ' ಎಂಬದಾಗಿ ಶಿವಾಗಮಗಳಲ್ಲಿ ಸಾರಿರುವನು. ಇಂಥಾಮಹತ್ತರವಾದ ವೀರಶೈವ ಧರ್ಮವು, ಉಳಿದ ಧರ್ಮಗಳಿಗಿಂತಲೂ ಸಂಪೂರ್ಣತೆಯುಳ್ಳದ್ದುಹೇಗೆ? ಉಳಿದ ಮತಗಳಿಗೂ, ಈ ಮತಕ್ಕೂ ಏನುಭೇದವು ? ಇವೇಮೊದಲಾದ ವಿಷಯಗಳನ್ನು ಸಂಕ್ಷಿಪ್ತವಾಗಿ ತುಲನಾತ್ಮಕ ದೃಷ್ಟಿಯಿಂದ ವಿಚಾರಿಸುವದೇ ಈ ಲೇಖದ ಉದ್ದೇಶವಾಗಿದೆ.

ಜಗತ್ತಿನೊಳಗಿನ ಎಲ್ಲಧರ್ಮಗಳ ಅಥವಾ ಪಂಥಗಳ ಸಮಸ್ತ ಪ್ರಮಾಣಗ್ರಂಥಗಳನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲನೆಮಾಡಿ ನೋಡಿದರೆ ಪಾರಮಾರ್ಥಿಕಸುಖಸಾಧನೆಯು ಮೂರುವರ್ಗಗಳಾಗುವವೆಂದು ಅರ್ವಾಚೀನಕಾಲದ ಪ್ರಸಿದ್ಧ ಆಧ್ಯಾತ್ಮ ಜ್ಞಾನಿಗಳಾದ ಸ್ವಾಮಿರಾಮತೀರ್ಥರೇ ಮೊದಲಾದವರ ಅಭಿಃಪ್ರಾಯವಿದೆ. ಈ ವರ್ಗಗಳನ್ನು ಕುರಿತು ಗೀರ್ವಾಣ ಭಾಷೆಯಲ್ಲಿ "ತಸ್ಯೈವಾಹಂ" "ತವೈವಾಹಂ" "ತ್ವಮೇವಾಹಂ" ಎಂದು ಕರೆಯಲ್ಪಟ್ಟವೆ. ತಸ್ಯೈವಾಹಂ" ಎಂಬ ವಾಕ್ಯದ ಅರ್ಥವೇನಂದರೆ, ಆ ಜಗಚ್ಚಾಲಕನಾದ ಪ್ರಭುವಿನಿಂದಲೇ ನಾನು ಜೀವಿಸುವದು. ಆತನ ಪ್ರೇರಣೆಯ ವಿನಃ ಯಾವದೂ ಈಜಗತ್ತಿನಲ್ಲಿ ನಡೆಯದೆಂಬ ಭಾವವು. ಇದು ಆಧ್ಯಾತ್ಮಜ್ಞಾನದ ದೃಷ್ಟಿಯಿಂದ ಪ್ರಥಮದ ಸೋಪಾನವೆಂದು ಋಷಿಪುಂಗವರ ಅನುಭವ. ಮನುಷ್ಯನು ಉನ್ನತಿಯಮಾರ್ಗವನ್ನು ಅನುಸರಿಸಿದರೆ ಅರ್ಥಾತ್ ಈಶ್ವರೀಸಾಕ್ಷಾತ್ಕಾರಕ್ಕೆ ಪ್ರಯತ್ನಿಸಹತ್ತಿದರೆ ಆತನಲ್ಲಿ ಮೊದಲು ಭಕ್ತಿಯ ಅಂಕುರೋದಯವಾಗುತ್ತದೆ. ಆದರೆ ಈ ಮಾರ್ಗದಲ್ಲಿ ಈಶ್ವರನು ತನ್ನಿಂದ ದೂರದಲ್ಲಿ ಎಲ್ಲಿಯೋ ಒಂದುಕಡೆ ಇದಾನೆಂದು ಆತನ ತಿಳುವಳಿಕೆ ಇರುತ್ತದೆ. ನಮ್ಮಿಂದ ದೂರವಾಗಿರುವ ಮನುಷ್ಯನ ಸಂಬಂಧವಾಗಿ ತೃತೀಯ ಪುರುಷಪ್ರಯೋಗವನ್ನು ಮಾಡುತ್ತಿರುತ್ತೇವೆ. ಈ ಪ್ರಕಾರ ಆಧ್ಯಾತ್ಮಿಕ ಪ್ರಥಮಾವಸ್ಥೆಯಲ್ಲಿ ಪರಮಾತ್ಮನ ಭಕ್ತ ಅಥವಾ ಉಪಾಸಕನು "ತಸ್ಯೈವಾಹಂ,' ಅಂದರೆ ನಾನು ಅವನಿಂದಲೇ ಇದ್ದೇನೆ ಎಂಬ ಈ ಧರ್ಮದ ಪ್ರಾರಂಭದ ಅವಸ್ಥೆಯು ಶೈಶವಾವಸ್ಥೆಯಲ್ಲಿರುವ ಮಗುವಿನ ಪ್ರಕಾರವಿದೆ. ಚಿಕ್ಕ ಮಗುವು ತನ್ನ ಜನನಿಯ ಹಾಲನ್ನು ಸೇವನೆ ಮಾಡದೆ ಮುಂದಿನ ಯೌವನವೃದ್ಧಾಪ್ಯ ಮೊದಲಾದ ಅವಸ್ಥೆಗಳನ್ನು ಪಡೆಯಲು ಹ್ಯಾಗೆಅವಕಾಶವಿಲ್ಲವೋ ಹಾಗೆಯೇ ಆಧ್ಯಾತ್ಮಸುಖೇಚ್ಛೆಯು ಪ್ರಥಮದಲ್ಲಿ 'ತಸ್ಯೈವಾಹಂ' ಎಂಬ ಪ್ರಾಥಮಿಕ ಅವಸ್ಥೆಯನ್ನು ಅಂದರೆ ಗೌಣೀಭಕ್ತಿಯನ್ನು ಅವಲಂಬನ ಮಾಡದಹೊರ್ತು ಗತ್ಯಂತರವಿಲ್ಲ. ಪಾರಮಾರ್ಥದ ಮುಂದಿನ ಪ್ರಗತಿಯನ್ನು ಹೊಂದುವದರ ಸಲುವಾಗಿ ಈ ಮಾರ್ಗವು ಅಗತ್ಯವಾದುದಾಗಿದೆ. ಈ ಅವಸ್ಥೆಯು ಯಾವ ಧಾರ್ಮಿಕಮನುಷ್ಯನಲ್ಲಿ ನೆಲೆಗೊಂಡಿರುವುದೋ ಆತನ ಜೀವನಯಾತ್ರೆಯು ಎಷ್ಟುಆನಂದವಾಗಿ ಸಾಗುವದೆಂಬುದನ್ನು ಬಣ್ಣಿಸಲಳವಲ್ಲ. ಸೂರ್ಯೋದಯದಿಂದ ಸೂರ್ಯಾಸ್ತದವರೆಗೂ ಸೂರ್ಯಾಸ್ತದಿಂದ ಸೂರ್ಯೋದಯದವರೆಗೂ ಮಾಡತಕ್ಕ ಮಾಡಿಸುವ ಪ್ರತಿಯೊಂದು ಕಾರ್ಯವೂ ಪ್ರಭುವಿನ ಪ್ರೇರಣೆಯಿಂದಲೇಎಂದು ಆ ಮುಮುಕ್ಷುವಿನಭಾವನೆ ಇರುವುದರಿಂದ ದುಃಖಸಂತಾಪಗಳ ಬಾಧೆಯೇ ನಷ್ಟವಾದಂತಿರುವದು. ಈ ಜಗತ್ತೇ ಆನಂದ ಭವನವಾಗಿ ಪರಿಣಮಿಸುವದು ಆದರೆ ಈ ಅವಸ್ಥೆಯು ಎಷ್ಟೇಸುಖಮಯವಿದ್ದರೂ ಆಧ್ಯಾತ್ಮಿಕಜ್ಞಾನದ ದೃಷ್ಟಿಯಿಂದ ಪ್ರಥಮ ಮೆಟ್ಟಲು ಅನ್ನುವದೇ ಮಹರ್ಷಿಗಳ ಸಿದ್ಧಾಂತ.

ಇದರ ಮುಂದಿನ ಮೆಟ್ಟಲು 'ತವೈವಾಹಂ,' ಈ ವಾಕ್ಯದ ಅರ್ಥವೇನಂದರೆ, ನಿನ್ನವನೇ ನಾನು. ಇದರಲ್ಲಿ ಪ್ರಭುವಿನ ಸಮಾಗಮವಾಗಿ ಪ್ರೀತಿಯಮಿತ್ರನಂತೆ ಪರಮಾತ್ಮನೊಡನೆ ಮುಮುಕ್ಷುವಿನ ವರ್ತನವಿರುವದು. ಈ ಸೋಪಾನವು ಪರಮಾತ್ಮನ ಸಾಮೀಪ್ಯ ಪದವಿಯ ಕುರುಹು. ಮೊದಲನೇ ಅಂತಸ್ಥಿನಲ್ಲಿ ಪರಮಾತ್ಮನು ಎಲ್ಲಿಯೋ ದೂರದಲ್ಲಿ ಅದೃಶ್ಯವಾಗಿ ಇದ್ದಾನೆಂದು ಭಾವನೆಇರುತ್ತದೆ. ಆದರೆ ಈ ಎರಡನೆಯ "ತವೈವಾಹಂ" ಎಂಬ ಅವಸ್ಥೆಯಲ್ಲಿ ಅದುಬದಲಾಯಿಸಿ ಈಶ್ವರನು ಎಲ್ಲಿಯೋ ದೂರದಲ್ಲಿರದೆ ಆತನು ತನ್ನ ಸಮೀಪದಲ್ಲಿಯೇ ಅರ್ಥಾತ್ ತನ್ನೊಡನೆ ಅತಏವ ತನ್ನ ಹೃದಯದಲ್ಲಿಯೇ ಇದ್ದಾನೆಂದು ತಿಳಿದು ನಾನುನಿನ್ನವನೇ ಎಂಬ ದ್ವಿತಿಯಾ ಪುರುಷಪ್ರಯೋಗವನ್ನು ಈ ಎರಡನೆಯ ಸ್ಥಿತಿಯಲ್ಲಿ ಮುಮುಕ್ಷುವು ಪರಮಾತ್ಮನಿಗೆ ಸಂಬೋಧನೆಯ ಮಾಡುತ್ತಿರುತ್ತಾನೆ. ಈ ಸ್ಥಿತಿಯಲ್ಲಿಯ ಉಪಾಸಕನಿಗೆ ಪರಮಾತ್ಮನು ತನ್ನ ಪ್ರಾಣವಾಗಿ ಪರಿಣಮಿಸುವನು. ಅಂದರೆ ಮನುಷ್ಯನಿಗೆ ಪ್ರಾಣವೆಷ್ಟುಪ್ರೀಯವೂ, ನಿಕಟಸಂಬಂಧವೂ, ಇದೆಯೋ? ಅಷ್ಟು ಪ್ರಿಯವೂ, ಸಂಭಂದವೂ, ಪರಮಾತ್ಮನ ವಿಷಯವಾಗಿ ಭಾವನೆ ಇರೋಣವರಿಂದ ಆತನ ಶಾಂತಿಗೆ ಪಾರವೇಇರುವದಿಲ್ಲ. ಲೌಕಿಕದಲ್ಲಿ ಸಾಧಾರಣ ಒಬ್ಬಸರಕಾರಿ ಅಧಿಕಾರಿಯ ಪರಿಚಯ ವಿಶೇಷವಿದ್ದರೆ ಎಷ್ಟೋಬಲವಿದ್ದಂತೆ ತೋರುತ್ತಿರುವಲ್ಲಿ ಜಗತ್ತಿನ ಚೈತನ್ಯಶಕ್ತಿಯೇ ತನ್ನಲ್ಲಿದ್ದಾನೆಂದು ಭಾವಿಸುವ ಭಕ್ತನಬಲವಂತಿಕೆಗೆ ಪಾರವೇ ಇರುವದಿಲ್ಲ. ಈ ಅವಸ್ಥೆಯಲ್ಲಿಯೂ ಕೂಡಾ ಎಂಥ ಸಾಮರ್ಥ್ಯಸುಖಗಳಿದ್ದರೂ ಅಧ್ಯಾತ್ಮ ದೃಷ್ಟಿಯಿಂದ ಎರಡನೆಯ ಮೆಟ್ಟಲವೆಂದು ನಮ್ಮ ಮಹರ್ಷಿಗಳ ನಿಶ್ಚಯದ ಸಿದ್ಧಾಂತ.

ಈ ಎರಡು ಅವಸ್ಥೆಗಳ ಮುಂದಿನ ಮೆಟ್ಟಲು "ತ್ವಮೇವಾಹಂ" ಎಂಬವಾಕ್ಯವು. ಈ ವಾಕ್ಯದ ಅರ್ಥವೇನಂದರೆ:—ನೀನೇ ನಾನು. ಇದು ಭಕ್ತ್ಯಾನುಭವದ ಕುರುಹು. ಪ್ರಥಮ ಸೋಪಾನದಲ್ಲಿ ಎಲ್ಲಿಯೋ ದೂರದಲ್ಲಿ ಪರಮಾತ್ಮನು ಅದೃಶ್ಯವಾಗಿದ್ದನೆಂದೂ, ಎರಡ

ನೆಯ ಸೋಪಾನದಲ್ಲಿ ತನ್ನ ಹತ್ತರವೇ ಅರ್ಥಾತ್ ಮನದೊಳಗೆ ಶಿವನು ಮನೆಮಾಡಿಕೊಂಡಿಹನೆಂಬ ಶಿವಯೋಗಿಗಳ ವಚನದಂತೆ ತನ್ನಲ್ಲಿಯೇ ಪರಮಾತ್ಮನಿದ್ದಾನೆಂದು ಅಭಿಃಪ್ರಾಯವಿತ್ತು. ಆದರೆ ಈ ಮೂರನೆಯ ಮಾರ್ಗದಲ್ಲಿ ಪರಮಾತ್ಮನೂ ಭಕ್ತನೂ ಏಕರೂಪವಾಗಿರುತ್ತಾರೆ. ಅಂದರೆ ಭಕ್ತನು ಪರಮಾತ್ಮನಲ್ಲಿ ಬೆರೆಯುತ್ತಾನೆ. ಹ್ಯಾಗೆ ಉಪ್ಪು ನೀರಿನ ಸಮಾಗಮಮಾಡಿ ಉದಕವೇ ಆಗಿಹೋಗುವದೋ ಹಾಗೆಯೇ ವಿಷಯವಿಮುಕ್ತನಾದ ಜೀವನು ಮೊದಲು ಪರಮಾತ್ಮನ ಅಸ್ತಿತ್ವದಲ್ಲಿ ಶ್ರದ್ಧೆಯಿಟ್ಟು ನಂತರ ಪರಮಾತ್ಮನು ತನ್ನೊಳ್ ನೋಡಿ, ಕೂಡಾಡಿ, ಕಡೆಗೆ ಆ ಪರಮಾತ್ಮನೇ ತಾನಾಗಿ ಹೋಗುವನು. ಈ ಅವಸ್ಥೆಯೇ ಕಡೆಯ ಮೆಟ್ಟಲು. ಇದೇ ಅನುಭವವನ್ನೇ ಕುರಿತು ಮಹಾಜ್ಞಾನಿಗಳು ಜೀವಪರಮೈಕ್ಯವೆಂದೂ, ಶರಣರು ಲಿಂಗಾಂಗ ಸಾಮರಸ್ಯವೆಂದೂ, ಅಥವಾ ಶಾಂಭವೀ ಭಕ್ತಿಯೆಂದೂ, ಅರ್ಥಾತ್ ಪರಾಭಕ್ತಿಯೆಂದೂ ಹೇಳಿಕೊಂಡಿರುವರು. ಇದೆಯೇ ಅಧ್ಯಾತ್ಮಜ್ಞಾನದ ಅಂತಿಮ ಪರಿಣಾಮವು. ಹಾಗೂ ವೀರಶೈವರ ಐಕ್ಯಸ್ಥಲಾನುಭವವು; ಇದೆಯೇ ಜಗದ್ಧರ್ಮದ ಸಾರವಾಗಿದೆ.

ಇವೇ ಮಾರ್ಗಗಳನ್ನೇ ಇನ್ನು ಸ್ಪಷ್ಟವಾಗಿ ವಿವರಿಸಬೇಕಾದರೆ ನಮ್ಮ ಹಿಂದುಧರ್ಮಶಾಸ್ತ್ರಗಳಲ್ಲಿಯ ದ್ವೈತ, ವಿಶಿಷ್ಟಾದ್ವೈತ ಮತ್ತು ಅದ್ವೈತವೆಂದು ತೋರಿಸಲು ಹೆಚ್ಚಿಗೆ ಅನುಕೂಲ. ದ್ವೈತದಲ್ಲಿ ವಿಶ್ವವೂ ಜೀವಾತ್ಮರೂ ಯಂತ್ರದಂತಿದ್ದು, ಪರಮಾತ್ಮನು ಯಂತ್ರಚಾಲಕನಂತೆ ಇರುತ್ತಾನೆ. ವಿಶಿಷ್ಟಾದ್ವೈತದಲ್ಲಿ ಪರಮಾತ್ಮನು ವಿಶ್ವದ ಮತ್ತು ಜೀವದ ವ್ಯತಿರಿಕ್ತನಾಗಿರದೆ ಅವುಗಳಲ್ಲೆಲ್ಲ ಚೈತನ್ಯರೂಪದಿಂದ ವ್ಯಾಪಿಸಿರುತ್ತಾನೆ. ಅದ್ವೈತದಲ್ಲಿ ಇದು ವಿಶ್ವವು, ಇವರು ಜೀವರು, ಈತನು ಪರಮಾತ್ಮನು ಎಂಬ ಭೇದಸ್ಥಿತಿಯೆಲ್ಲವು ಲಯವಾಗಿ ತಾನೇ ತಾನಾಗಿರುವವನಾಗಿರುತ್ತಾನೆ. ಒಟ್ಟನಮೇಲೆ ಈ ಐಕ್ಯಾನುಭವವೇ ನೈಜಸುಖದ ಮೂಲ. ಈ ಸ್ಥಿತಿಯ ಅನುಭವಕ್ಕಾಗಿಯೇ ಜಗತ್ತಿನ ಸರ್ವಧರ್ಮಗಳ ಹೋರಾಟ. ಆದರೆ ''ಜೀವೋಬ್ರಹ್ಮೈವನಾಪರಃ'' ಎಂಬ ಸಿದ್ಧಾಂತವು ಸರ್ವರಿಗೂ ಅವಗತವಾಗುವದು ಬಹಳೇ ಕಠಿಣವದೆ. ಕೇವಲ ಬುದ್ಧಿಯಿಂದ ಊಹಿಸಲು ಸಹ ಪ್ರಥಮದಲ್ಲಿ ದುಸ್ತರವಾಗಿದೆ. ಅತ್ಯಂತ ಕುಶಾಗ್ರ ಹಾಗು ನಿರ್ಭಯವಾದ ವಿವೇಚನಾತ್ಮಕ ಬುದ್ಧಿಯುಳ್ಳವರಿಗೆ ಮಾತ್ರ ತಿಳುವಳಿಕೆಯಾದರೂ ಆಗಬಹುದು. ಆದರೆ ತಿಳುವಳಿಕೆಯೇ ಧರ್ಮದ ಧ್ಯೇಯವಲ್ಲ. ಅನುಭವವೇ ಧರ್ಮದ ಧ್ಯೇಯವಾಗಿದೆ. ಪ್ರಯುಕ್ತ ವಿಷಯವಿರಕ್ತನಾದ ಜೀವನು ಐಕ್ಯಾನುಭವಿಯಾಗಬೇಕಾದರೆ 'ದ್ವೈತ' 'ವಿಶಿಷ್ಟಾದ್ವೈತ' 'ಅದ್ವೈತ' ಈ ಮಾರ್ಗಗಳನ್ನು ಕ್ರಮಶಃ ಗತಿಸುವದರ ವಿನಾ ಗತ್ಯಂತರವಿಲ್ಲ. ಹ್ಯಾಗೆ ಎಷ್ಟೋ ಕಾಲದ ಅನುಭವದಿಂದ ಒಂದು ರಾಷ್ಟ್ರವು ತಿಳುವಳಿಕೆಯ ಮೆಟ್ಟಲುಗಳನ್ನು ಅನುಭವಿಸುತ್ತಾ ಅನುಭವಿಸುತ್ತಾ, ಒಮ್ಮೆ ಸಂಸ್ಕೃತಿ ಶಿಖರವನ್ನು ಮುಟ್ಟುತ್ತದೆಯೋ, ಹಾಗೆಯೇ ಒಂದು ವ್ಯಕ್ತಿಯು ಧರ್ಮದ ತಿಳುವಳಿಕೆಯ ಈ ತ್ರಿವಿಧ ಮೆಟ್ಟಲುಗಳನ್ನು ಅನುಭವಿಸುತ್ತಾ ಅನುಭವಿಸುತ್ತಾ ಕಡೆಗೆ ಶಿವ ಜೀವಪರೈಕ್ಯಾನುಭವಕ್ಕೆ ಬಂದು ಮುಟ್ಟುತ್ತದೆ.

ಎಂಥ ನಿರ್ವಿಕಲ್ಪ ಸಮಾಧಿಷ್ಠನೂ ಕೂಡಾ ತಾನು ಒಂದೊಂದು ಕಾಲದಲ್ಲಿ "ದ್ವೈತ" "ವಿಶಿಷ್ಟಾದ್ವೈತ" ಸ್ಥಿತಿಯೊಳಗಿದ್ದನೆಂದು ಪೂರ್ಣಮನವರಿಕೆ ಇರುವದು. ಈ ಮೃತ್ಯುಲೋಕದಲ್ಲಿ ಹುಟ್ಟಿದ್ದ ಜೀವನಿಗೆ ಜನ್ಮಿಸಿದ ಕಾಲದಲ್ಲಿಯಾದರೂ ದೇಹದ ಅಧ್ಯಾಸವಿರುವದು ಸಹಜವಲ್ಲವೇ? ಅಂದ ಬಳಿಕ ದೇಹವೇ ನಾನೆಂಬ ಅಧ್ಯಾಸವಿರುವವರೆಗೆ ಈ ಜಗತ್ತು ಸ್ವಪ್ನವೆಂದು ಹೇಳುವದರೊಳಗೆ ಅರ್ಥವೇನಿದೆ? ಬೆಳಕಿನ ಸುಖವನ್ನು ಹೊಂದಬೇಕೆನ್ನುವವನು ಕತ್ತಲೆಯ ಅನುಭವವನ್ನು ಹೇಗೆ ತಕ್ಕೊಳ್ಳಲೇಬೇಕೋ, ಅದರಂತೆ ಜಗತ್ತು ನಿಜವಾಗಿದೆ ಎಂದು ಎಲ್ಲಿಯವರೆಗೆ ತೋರುತ್ತಿರುವದೋ ಅಲ್ಲಿಯವರೆಗೂ ಪರಮಾತ್ಮನ ಸಾಕಾರತ್ವವನ್ನು ಮಾನ್ಯ ಮಾಡಲಿಕ್ಕೇ ಬೇಕು. ಕಾರಣವೇನಂದರೆ ಜಗತ್ತು ನಿಶ್ಚಯವಾದರೆ ಅದರ ಕರ್ತನು ಯಾರಾದರೂ ಇರಲೇಬೇಕಲ್ಲವೇ? ಆತನಿಗೆಯೇ ಪರಮಾತ್ಮನೆಂದೂ, ಜಗನ್ನಿಯಾಮಕನೆಂದೂ ನಾಮವಿದೆ. ಜಗತ್ತು ನಮಗೆ ಕಾಣದಾದಾಗ್ಗೆ ಮಾತ್ರ ಸಾಕಾರಮೂರ್ತಿಯೂ ನಮಗೆ ಕಾಣದಾಗುವನು. ಎಲ್ಲಿಯವರೆಗೆ ದೇಹಾಧ್ಯಾಸ ಉಳಿದಿರುವದೋ ಅಲ್ಲಿಯವರೆಗೂ, ಸಾಕಾರಮೂರ್ತಿಯ ಅನುಸಂಧಾನವು ಅಗತ್ಯವಿದೆ. ದೇಹಾಧ್ಯಾಸವು ನಷ್ಟವಾದಾಗ್ಗೆ ಮಾತ್ರ ಭಾವಾನುಸಂಧಾನವು ನಡೆಯುವದು. ಆವಾಗ್ಗೆ ಮಾತ್ರ ತಾನೇತಾನಾಗಿ ತನ್ನ ಹೊರ್ತು ಯಾವದೂ ತೋರುವದಿಲ್ಲ ಎಂಬದಾಗಿ ಅರ್ವಾಚೀನ ಸನಾತನ ಮತೋದ್ಧಾರಕರಾದ ಸ್ವಾಮಿ ವಿವೇಕಾನಂದರ ಅಭಿಃಪ್ರಾಯವಿದೆ. ಇನ್ನು ಅದ್ವೈತಾನುಭವವುಳ್ಳ ಬ್ರಹ್ಮಜ್ಞಾನಿಯು ಪುನಃ ದ್ವೈತಸ್ಥಿತಿಗೆ ಬರುವನೋ ಇಲ್ಲವೋ? ಬಂದರೆ ಆ ಸ್ಥಿತಿಗನುಸಾರವಾದ ಸಾಕಾರ ಮೂರ್ತಿಯ ಅನುಸಂಧಾನವು ಅಗತ್ಯವದೆಯೋ, ಹ್ಯಾಗೆ?-ಇವೇ ಮೊದಲಾದ ವಿಷಯಗಳನ್ನು ಮುಂದೆ ಆಲೋಚಿಸುವಾ.—

ಇಲ್ಲಿಯವರೆಗೂ ಜಗತ್ತಿನಲ್ಲಿಯ ವೀರಶೈವೇತರ ಮತಗಳ ವಿವೇಚನಮಾಡಿ ಅವುಗಳಲ್ಲಿಯ ಒಂದೊಂದು ಮಾರ್ಗಗಳು ಹ್ಯಾಗೆ ಅಪೂರ್ಣವಾದವುಗಳೆಂಬುದನ್ನು ಸಹ ವಿವರಿಸಿದ್ದಾಯಿತು. ಈಗ ಈ ಎಲ್ಲಮಾರ್ಗಗಳು ನಮ್ಮೀ ವೀರಶೈವ ಮತದಲ್ಲಿ ಹ್ಯಾಗೆ ಅಡಕವಾಗಿರುವದೆಂಬುದನ್ನು ಸಂಕ್ಷಿಪ್ತವಾಗಿ ವಿವರಣೆಮಾಡಿ ಈ ವಿಷಯವನ್ನು ಪೂರೈಸೋಣ. ಮೇಲೆ ವಿವರಿಸಿದ ತ್ರಿವಿಧ ಮಾರ್ಗಗಳಲ್ಲಿ ಗತಿಸುವದರ ವಿನಃ ಯಾವ ಜೀವನಿಗೂ ಉದ್ಧಾರವಿಲ್ಲವೆಂಬುದು ನಿಶ್ಚಿತವಾದ ವಿಚಾರವಷ್ಟೇ? ಆದರೆ ಇವುಗಳಲ್ಲಿಯ ಒಂದೊಂದೇ ಮಾರ್ಗವನ್ನು ಸರ್ವಸ್ವವೆಂದು ತಿಳಿದು ಆಚರಿಸುವ "ದ್ವೈತವಾದಿ" ವಿಶಿಷ್ಟಾದ್ವೈತವಾದಿ," "ಅದ್ವೈತವಾದಿ" ಈ ಮೊದಲಾದವರಿಗೆ ಪೂರ್ಣಸಮರಸಾನುಭವಸುಖವು ದೊರೆಯುವದು ದುರ್ಲಭವೆಂದು ಈ ವಿವೇಚನೆಯಿಂದ ಸಹಜ ನಿಷ್ಪನ್ನವಾಗುತ್ತದೆ. ಆದರೆ ವಿಶಾಲವಾದ ನಮ್ಮೀ ವೀರಶೈವ ಮತದಲ್ಲಿಮಾತ್ರ ಈ ಮೂರು ಮಾರ್ಗಗಳು ಹೊಂದಿಕೆಯಾಗಿ ಕ್ರಮದಿಂದ ಸಾಗುವಕಾರಣ ಐಕ್ಯಾನುಭವವು ಅತಿಸುಲಭವಾದುದಾಗಿದೆ. ಅದಕ್ಕಾಗಿಯೇ ಭಗವಾನ್ ಶಂಕರನು "ಅಲ್ಪಕ್ರಿಯಾ ಬಹು ಫಲಾ ವೀರಶೈವ ಮಹೇಶ್ವರೀ" ಎಂಬದಾಗಿ ಪರಮೇಶ್ವರಾಗಮದಲ್ಲಿ ಉದ್ಗಾರ ತೆಗೆದಿರುವನು. ಈ ಮತವು ಕಾಮ್ಯಕರ್ಮದ ಕರಾಟವಲ್ಲ, ಅನಂತದೈವೋಪಾಸನೆಯ ಝುಂಜಾಟವಲ್ಲ. ಶಿವಜೀವರ ಪರಮರಹಸ್ಯ, ಮುಕ್ತಿಪ್ರಾಪ್ತಿಯ ಸುಖಕರ ಮಾರ್ಗ. ಈ ಮಾರ್ಗವೇ ಷಟಸ್ಥಲವೆಂದು ಹೆಸರುಗೊಂಡಿರುವದು. ಜೀವನಿಗೆ ಜೀವತ್ವವಳಿದು ಶಿವತ್ವ ಉಂಟಾಗಬೇಕಾದರೆ

ಈ ಆರು (ಸ್ಥಲ) ಮಾರ್ಗಗಳೇ ಸಾಧನಗಳಾಗಿವೆ. ಆದರೆ ಈ ಆರು ಸ್ಥಲಾಚರಣೆಗೂ ತ್ರಿವಿಧದೀಕ್ಷೆಗಳೇ ಕಾರಣಗಳಾದ್ದರಿಂದ ಆ ದೀಕ್ಷಾತ್ರಯಗಳಲ್ಲಿ ಈ ತ್ರಿವಿಧ ಮಾರ್ಗಗಳು ಹ್ಯಾಗೆ ಅಡಕವಾಗಿವೆ ಎಂಬುದನ್ನಿಷ್ಟು ತಿಳಿಯುವಾ:—

ಏಕಮೇವಾ ಪರಬ್ರಹ್ಮ ಸಚ್ಚಿದಾನಂದ ಲಕ್ಷಣಂ |
ಶಿವತತ್ವಂ ||

ಎಂಬ ಶಿವಾಗಮ ಪ್ರಮಾಣವಾಗಿ ಒಬ್ಬದೇವನೇ ಮುಮುಕ್ಷುವಿನ ಅಧಿಕಾರಾನುಗುಣವಾಗಿ ತ್ರಿವಿಧನಾಗಲ್ಪಟ್ಟನು. ಅಂದರೆ ಮೊದಲು ವಿವೇಚನೆ ಮಾಡಿದಪ್ರಕಾರ "ತಸ್ಯೈವಾಹಂ" "ತವೈವಾಹಂ" "ತ್ವಮೇವಾಹಂ" ಎಂಬ ಸರ್ವಧರ್ಮಾಂತರ್ಗತವಾದ ತ್ರಿವಿಧಮಾರ್ಗಗಳ ಅನುಸಂಧಾನದ ಮೂರ್ತಿಯಾಗಿ ಪರಿಣಮಿಸಿದನು. ಅಂದರೆ ಇಷ್ಟಲಿಂಗದೇವರೆಂದೂ, ಪ್ರಾಣಲಿಂಗದೇವರೆಂದೂ, ಭಾವಲಿಂಗದೇವರೆಂದೂ, ಹೇಳಿಸಿಕೊಳ್ಳಲ್ಪಡುವನು.

|| ಪ್ರಮಾಣ ||

ಭಾವಲಿಂಗಂ ಪರಂತತ್ವಂ ಪ್ರಾಣಲಿಂಗತು ಸೂಕ್ಷ್ಮಕಂ |
ಇಷ್ಟಲಿಂಗಂ ಭವೇತ್ಸ್ಥೂಲ ಮೇತಲ್ಲಿಂಗತ್ರಯಂಸ್ಮೃತಂ ||
ಸ್ಥೂಲಂಬಾಹ್ಯಾ ಮಿತಿಪ್ರೋಕ್ತಂ ಸೂಕ್ಷ್ಮಮಾಭ್ಯಂತರಂ ಸ್ಮೃತಂ |
ಸಬಾಹ್ಯಾಂತರಂ ಯತ್ತ್ಪರ ಮಿತ್ಯಭಿಧೀಯತೆ ||೨||

ಈ ಶ್ಲೋಕಗಳ ತಾತ್ಪರ್ಯವೇನಂದರೆ:—ಒಳಹೊರಗೆ ವ್ಯಾಪಿಸಿರುವ ಐಕ್ಯಾನುಭವಕ್ಕೆ ಕಾರಣವಾದ ಪರಬ್ರಹ್ಮವೇ ಭಾವಲಿಂಗವೆಂದು, ಸ್ಥೂಲವಿಶ್ವದಲ್ಲಿ ಸೂಕ್ಷ್ಮರೂಪವಾಗಿ ವ್ಯಾಪಿಸಿರುವ ಚೈತನ್ಯವೇ ಪ್ರಾಣಲಿಂಗವೆಂದೂ, ಯಂತ್ರದಂತೆ ಜಡವಾಗಿರುವ ಜಗತ್ತನ್ನು ಯಂತ್ರಚಾಲಕನಾದ ಪರಶಿವನು, ಇಷ್ಟಲಿಂಗವೆಂದು ಈ ಮತದಲ್ಲಿಯ ನಿರ್ಧಾರವಿದೆ.

ಪರಬ್ರಹ್ಮನೋಳ್ ಸಮರಸವಾಗಲು ಯಾವ "ದ್ವೈತ" "ವಿಶಿಷ್ಟಾದ್ವೈತ" "ಅದ್ವೈತ" ಈ ಮೂರು ಮಾರ್ಗಗಳು ಒಂದಕ್ಕೊಂದು ಸಹಾಯಕಾರಿಗಳೆಂದೂ, ಅವುಗಳಲ್ಲೊಂದನ್ನು ಬಿಟ್ಟರೆ ಜೀವಶಿವರೈಕ್ಯವು ಅನುಕೂಲಿಸುವದಿಲ್ಲವೆಂದೂ, ಜ್ಞಾನಿಗಳ ಅಭಿಪ್ರಾಯವನ್ನು ಈ ಮೊದಲೇಹೇಳಿದೆ. ಆದರಂತೆಯೇ ಈ ಮತದಲ್ಲಿಯೂ, ಪರಮಾತ್ಮನೊಬ್ಬನು ಪ್ರಪಂಚದ ಹೊರಗಿದ್ದು ಈ ಸೃಷ್ಟಿಯನ್ನು ನಡೆಸುವನೆಂಮ ಆತನ ಪ್ರೇರಣೆಯಿಂದಲೇ ಜೀವಜಗತ್ತಿನ ವ್ಯವಹಾರವೆಂಬ ತಿಳುವಳಿಕೆಯು ಆತ್ಮಜ್ಞಾನದದೃಷ್ಟಿಯಿಂದ ಪ್ರಾರಂಭಸ್ಥಿತಿಯಾಗಿದ್ದು ಅದನ್ನೇ ವೀರಶೈವಮತದಲ್ಲಿ ಸಂಸಾರದಲ್ಲಿ ಹೇಯಉತ್ಪನ್ನವಾಗಿ ಪಾರಮಾರ್ಥದಕಡೆಗೆ ಪ್ರವೃತ್ತಿಯಾದ ಜೀವನಿಗೆ ತ್ಯಾಗಾಂಗವೆಂಬ ಸ್ಥೂಲತನುವಿನಲ್ಲಿ ಶ್ರೀಗುರುವು ಕ್ರಿಯಾದೀಕ್ಷೆಯಬಲದಿಂದ ದ್ವೈತಮತದ್ಯೋತಕವಾದ ಅರ್ಥಾತ್ "ತಸ್ಯೈವಾಹಂ" ಎಂಬವಾಕ್ಯಾನುಭವವನ್ನು ಇಷ್ಟಲಿಂಗಧಾರಣದಿಂದ ಮಾಡಿಕೊಡುವನು. ಇಲ್ಲಿ ಲಿಂಗರೂಪವಾದ ಶಿವನಿಗೂ, ಅಂಗರೂಪವಾದ ಜೀವನಿಗೂ ಭಿನ್ನತ್ವವಿದು ಸೇವ್ಯಸೇವಕತ್ವದ ಭಕ್ತಿಯೇ ಮುಖ್ಯಾಂಗವಾಗಿರುವದು. ಈ ಸ್ಥಿತಿಯು ಮುಮುಕ್ಷುವಿನಲ್ಲಿ ಅಳವಟ್ಟಬಳಿಕ ಸದ್ಗುರುವು ಎರಡನೆ ಅಂತಸ್ಥವಾದ "ವಿಶಿಷ್ಟಾದ್ವೈತ ಸಿದ್ಧಾಂತವನ್ನು ಅರ್ಥಾತ್ "ತವೈವಾಹಂ" ಎಂಬ ವಾಕ್ಯಾನುಭವವನ್ನು ಭೋಗಾಂಗವೆನಿಸಿದ ಸೂಕ್ಷ್ಮತನುವಿನಲ್ಲಿ ಮಂತ್ರದೀಕ್ಷಾಬಲದಿಂದ ಅಂತರಂಗದಲ್ಲಿರುವ ಸೂಕ್ಷ್ಮವಾದ ಪ್ರಾಣಲಿಂಗವನ್ನು ತೋರಿಕೊಟ್ಟು, ನೀನು ಹ್ಯಾಗೆ ನಿನ್ನ ಶರೀರದಲ್ಲಿ ಚೈತನ್ಯವಾಗಿದ್ದಿರುವಿಯೋ ಅದರಂತೆ, ಈ ವಿಶ್ವ ಮತ್ತು ಜೀವನನ್ನು ಈ ಪ್ರಾಣಲಿಂಗವು ವ್ಯಾಪಿಸಿಕೊಂಡಿರುವದೆಂದು ಮನವರಿಕೆಯಾಗುವಂತೆ ಹೇಳಿಕೊಡುವರು.

ಮುಮುಕ್ಷುವಿನಲ್ಲಿ ಈ ಸ್ಥಿತಿಯು ಅಳವಟ್ಟ ನಂತರ ಸದ್ಗುರುವು ಮೂರನೇ ಸ್ಥಿತಿಯಾದ 'ತ್ವಮೇವಾಹಂ' ಎಂಬ 'ಅದ್ವೈತ' ಸಿದ್ಧಾಂತಾನುಭವವನ್ನು ಯೋಗಾಂಗವೆಂಬ ಕಾರಣತನುವಿನಲ್ಲಿ ವೇದದೀಕ್ಷೆಯ ಬಲದಿಂದ ಒಳ ಹೊರಗೂ, ಮೇಲೆಯೂ, ಕೆಳಗೂ ವ್ಯಾಪಿಸಿರುವ ತಾನೇ ತಾನಾದ ಭಾವಲಿಂಗಾನುಸಂಧಾನವನು ಬೆಳಸಿ, ತಾನು-ಶಿವನು ಜಗತ್ತು ಎಂಬ ಭಿನ್ನತ್ವತೋರದ ಅರಿವು-ಮರವು ಸಹ ಹೊಳೆಯದ ಅಖಂಡಾನಂದ ರೂಪವನ್ನು ತೋರಿಕೊಡುವನು. ವಾಚಕ ಮಹಾಶಯರೇ, ಈ ತ್ರಿವಿಧ ಲಿಂಗಾನುಸಂಧಾನದಲ್ಲಿ ಮೊದಲು ಪ್ರತಿಪಾದಿಸಿದ ತ್ರಿವಿಧ ಮಾರ್ಗಗಳು ಹ್ಯಾಗೆ ಅಂತರ್ಗತವಾಗಿವೆ ಎಂಬುದು ತಮಗೆ ಈಗ ಸಹಜ ಗೊತ್ತಾಗಿರಬಹುದು.

ಈ ಕಾರಣದಿಂದಲೇ ವೀರಶೈವ ಮತವು ಜಗತ್ತಿನಲ್ಲಿಯ ಮತಗಳ ಉಗಮಸ್ಥಾನವೆಂದು ಹೇಳಲು ಯಾವ ಅನುಮಾನವಿಲ್ಲ. ಇರಲಿ. ಜೀವನು ಶಿವನೊಡನೆ ಸಮರಸವಾಗಲು ತ್ರಿವಿಧ ಮಾರ್ಗಗಳು ಅಗತ್ಯವೆಂದೂ, ಅವು ಈ ಪವಿತ್ರ ವೀರಶೈವ ಧರ್ಮದಲ್ಲಿ ಹೇಗೆ ಅಡಕವಾಗಿರುವವೆಂದೂ ಸಂಕ್ಷಿಪ್ತವಾಗಿ ತಿಳಿಸಿದ್ದಾಯಿತು. ಆದರೆ ಮುಮುಕ್ಷುವಿನ ಸಾಧನೆಯ ಸೌಲಭ್ಯಕ್ಕಾಗಿ ಪರಶಿವನು ಈ ತ್ರಿವಿಧ ಧರ್ಮಗಳನ್ನೇ ಆರು ಸ್ಥಲವಾಗಿ ಶಿವಾಗಮಗಳಲ್ಲಿ ಹೇಳಿರುವನು. ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ಪರೀಕ್ಷೆಯ ಕಾಲವು ವರ್ಷಕ್ಕೆ ಒಂದುಸಾರಿ ಇದ್ದುದು ವಾಡಿಕೆಯಾಗಿದ್ದರೂ, ವಿದ್ಯಾಭಿಮಾನಿಗಳು ಆ ವಿದ್ಯಾಥಿಗಳ ಪ್ರೋತ್ಸಾಹಕ್ಕಾಗಿಯೂ, ಎಚ್ಚರಿಕೆಗಾಗಿಯೂ, ಷಾಣ್ಮಾಸಿಕ ಪರೀಕ್ಷೆಯೊಂದಿಟ್ಟು ವರ್ಷಕ್ಕೆ ಎರಡುಸಾರೆ ಪರೀಕ್ಷೆಯ ಕಾಲವನ್ನು ಗೊತ್ತುಮಾಡುವಂತೆ, ಪ್ರಭುವಿನ ಈ ಆರು ಸ್ಥಲಗಳು ಸಾಧಕನ ಪ್ರೋತ್ಸಾಹಕ್ಕಾಗಿ ಆದ ಮಾರ್ಗಗಳಿರುವವು. ಅವುಗಳ ವಿವರ:—ಭಕ್ತಸ್ಥಲ, ಮಹೇಶಸ್ಥಲ, ಪ್ರಾಸಾದಿಸ್ಥಲ, ಪ್ರಾಣಲಿಂಗಸ್ಥಲ, ಐಕ್ಯಸ್ಥಲ—ಈ ಆರು ಸ್ಥಲಗಳಲ್ಲಿ ಮೂರು ಮಾರ್ಗಗಳ ಸಮಾವೇಶವು ಹ್ಯಾಗಂದರೆ:—

ಭಕ್ತಸ್ಥಲ ಮತ್ತು ಮಹೇಶಸ್ಥಲ ಎಂಬ ಎರಡು ಸ್ಥಳಗಳಲ್ಲಿ ಪರಮಾತ್ಮನಿಗೂ, ಜೀವನಿಗೂ ಭಿನ್ನತ್ವದ ಭಾವನೆ ಇರುವದರಿಂದಲೂ ನೈಷ್ಠಿಕ ಭಕ್ತಿಯೇ ಮುಖ್ಯಾಂಗವಾಗಿರುವದರಿಂದಲೂ, 'ತಸ್ಯೇವಾಹಂ' ಎಂಬ ದ್ವೈತ ಮತವು ಇವುಗಳಲ್ಲಿ ಅಂತರ್ಗತವಾಗುವದು. ಇನ್ನು ಪ್ರಸಾದಿಸ್ಥಲ, ಪ್ರಾಣಲಿಂಗಸ್ಥಲಗಳಲ್ಲಿ ಮುಮುಕ್ಷುವಿಗೆ ಪರಮಾತ್ಮನು ವಿಶ್ವದಲ್ಲಿ ಮತ್ತು ಜೀವರಲ್ಲಿ ಚೈತನ್ಯರೂಪವಾಗಿ ವ್ಯಾಪಿ

ಸಿರುವನೆಂಬದಾಗಿಯೂ, ತನ್ನ ಹೃದಯದಲ್ಲಿ ಸೂಕ್ಷ್ಮರೂಪವಾಗಿದ್ದು ಮನಸ್ಸಿಗೆ ಗೋಚರಿಸುವನೆಂಬ ಭಾವನೆಯಿಂದ ಲಿಂಗಾಯತ ಮನಸ್ಸುಳ್ಳವನಿರುವದರಿಂದ 'ತವೈವಾಹಂ' ಎಂಬ ವಿಶಿಷ್ಟಾದ್ವೈತ ಮತವು ಇವುಗಳಲ್ಲಿ ಅಡಕವಾಗುವದು. ಇನ್ನು ಶರಣಸ್ಥಲ ಐಕ್ಯ ಸ್ಥಲಗಳಲ್ಲಿ ಮುಮುಕ್ಷುವಿಗೆ, ಪರಮಾತ್ಮನು ಬೇರೆ, ತಾನು ಬೇರೆ ಎಂಬ ಭಾವನೆ ಇಲ್ಲದೆ ಉರಿಗೊಂಡ ಕರ್ಪುರದಂತೆ, ಭ್ರಮರ-ಕೀಟ ನ್ಯಾಯದಂತೆ ಏಕರೂಪವಾಗಿ ಪರಶಿವನೇ ತಾನು, ತಾನೇ ಪರಶಿವನಾಗುವದರಿಂದ 'ತ್ವಮೇವಾಹಂ' ಎಂಬ ಅದ್ವೈತ ಸಿದ್ಧಾಂತವು ಇವುಗಳಲ್ಲಿ ಅಡಕವಾಗುವುದು. ಈ ತ್ರಿವಿಧ ಮಾರ್ಗಗಳು ಷಟಸ್ಥಲಗಳಲ್ಲಿ ಒಳ್ಳೇ ವಿಸ್ತಾರವಾಗಿ ನಿರೂಪಿಸಲ್ಪಟ್ಟಿವೆ. ಈ ಷಟಸ್ಥಲದ ವಿವರಣೆಗಾಗಿಯೇ ಎಷ್ಟೋ ಉದ್ಗ್ರಂಥಗಳು ಪ್ರಾಚೀನ ಕಾಲದಿಂದಲೂ ಪ್ರಸಿದ್ಧವಾಗುತ್ತಲಿವೆ. ಪ್ರಕೃತ ಇಲ್ಲಿಯ ಉದ್ದೇಶವು ಷಟಸ್ಥಲಗಳಲ್ಲಿ ಈ ತ್ರಿವಿಧ ಮಾರ್ಗಗಳು ಅಂತರ್ಗತವಾಗಿವೆ ಎಂಬುವದೊಂದನ್ನೇ ತೋರಿಸುವದಿದ್ದದ್ದರಿಂದ ಅದೊಂದುದ್ದೇಶವನ್ನೇ ಅಲ್ಪ ಮಟ್ಟಿಗೆ ವಿವರಿಸಿದೆ. ಅಸ್ತು.

ಈ ಕಾರಣದಿಂದಲೇ ವೀರಶೈವಮತದ ವೈಶಿಷ್ಟ್ಯವು ಉಳಿದ ಮತಗಳಿಗಿಂತಲೂ ಮಿಗಿಲಾಗಿರುವದು. ಎಷ್ಟೋ ಮತಗಳು ಜಗತ್ತಿನಲ್ಲಿ ವಿಸ್ತಾರವಾಗಿದ್ದರೂ ಅವುಗಳೆಲ್ಲವು ಈ ಉದಾತ್ತ ವೀರಶೈವ ಮತಾಂಗಗಳೇ ಎಂದು ಧಾರಾಳವಾಗಿ ಹೇಳಬಹುದು. ಆದರೆ ಇದಕ್ಕೆ ಕೆಲವರು ಎಲ್ಲ ಮತತತ್ವಗಳುಂಟಾದನಂತರವೇ ಅವುಗಳನ್ನು ಕ್ರೋಢೀಕರಿಸಿ ಈ ವೀರಶೈವ ಮತವನ್ನುಂಟು ಮಾಡಿರಬಾರದೇಕೆಂದು ಆಕ್ಷೇಪಣೆ ಮಾಡಬಹುದು. ಆದರೆ ಸುಮಾರು ೩ ಸಾವಿರ ವರ್ಷಗಳ ಹಿಂದೆ ಪಾಶ್ಚಿಮಾತ್ಯ ದೇಶದಲ್ಲಿಯ ಪ್ರಸಿದ್ಧ ಧಾರ್ಮಿಕನಾದ ಸಾಲೋಮನ್ನನೆಂಬ ಯಹುದೀ ರಾಜನಿಗೆ ಈ ವೀರಶೈವರ ಷಟಸ್ಥಲವು ಅರ್ಥಾತ್ ಪ್ರಣವ ರಹಿತವಾದ ಷಟ್ಕೋಣವು ಆತನ ಮುದ್ರಿಕೆಯಾಗಿತ್ತು. ಅದು ಆತನಿಗೆ ಯಾವರೀತಿಯಿಂದ ದೊರಕಿರಬಹುದೆಂಬ ಸಂಗತಿಯು ಇದೀಗ ವೀರಶೈವ ವಿದ್ಯಾಲಯ ಆಲಮಟ್ಟ ಈ ಸಂಸ್ಥೆಯಿಂದ ಹೊರಟ ಆರ್ಯತೇಜವೆಂಬ ಗ್ರಂಥದಲ್ಲಿಯ ವಿದ್ಯಾಲಯದ ಗುರುತು ಎಂಬ ವಿಷಯವನ್ನು ನೋಡಿದರೆ ತಿಳಿಯುವುದಲ್ಲದೆ ಇನ್ನೂ ಅನೇಕ ಉದಾಹರಣೆಗಳು ದೊರೆಯುವವು. ಈ ಉದಾಹರಣೆಗಳಿಂದ ವೀರಶೈವ ಮತವು ಅತಿ ಪ್ರಾಚೀನವೆಂದೂ, ಇದರಲ್ಲಿರುವ ಒಂದೊಂದು ತತ್ವಗಳನ್ನೇ ಸ್ವೀಕರಿಸಿ ಸರ್ವ ಮತಗಳುಂಟಾಗಿರುವದೆಂದೂ ಊಹಿಸಬಹುದಾಗಿದೆ. ಇವಲ್ಲದೆ ಎಲ್ಲ ಮತಗಳಿಗಿಂತ ವೀರಶೈವ ಮತದಲ್ಲಿರುವ ಇನ್ನೊಂದು ವಿಶೇಷವೇನಂದರೆ 'ಅದ್ವೈತಾನುಭವವನ್ನು ಪಡೆದವನು ಪುನಃ ದ್ವೈತ ಸ್ಥಿತಿಗೆ ಬರುತ್ತಲಿರುವನೆಂದು ಇಲ್ಲಿಯವರೆಗೆ ಆದ ಜ್ಞಾನಿಗಳ ಚರಿತ್ರೆಯ ಮೇಲಿಂದ ಕಲ್ಪಿಸಬಹುದಾಗಿದೆ. ಪೂರ್ಣ ನಿರ್ವಿಕಲ್ಪ ಸಮಾಧಿಷ್ಟರಾದ ರಾಮಕೃಷ್ಣ ಪರಮಹಂಸರು ಸಹ ಎಂಥ ಐಕ್ಯಾನುಭವಿಯೂ ಕೂಡಾ ೨೧ ದಿವಸಗಳಿಗಿಂತ ಹೆಚ್ಚಿಗೆ ಮಾಯಾಂಶವನ್ನು ಬಿಟ್ಟೇ ಜಗತ್ತಿನಲ್ಲಿರಲಾರನೆಂದು ಅನುಭವದಿಂಧ ಹೇಳಿದ್ದಾರೆ. ಎಂಥ ಬ್ರಹ್ಮಜ್ಞಾನಿಯೂ ಸಹ ಕ್ಷಣವಾದರೂ ದ್ವೈತಸ್ಥಿತಿಗೆ ಬಂದರೇನೇ ಜಗದುದ್ಧಾರವಾಗುವದು. ಪರಂತು ಈ ದ್ವೈತಸ್ಥಿತಿಯಲ್ಲಿ ಸಾಕಾರ ಮೂರ್ತಿಯೇ ಉಪಾಸಕನಾಗಿರಬೇಕಾದುದರಿಂದ ಉಳಿದ ಮತಗಳಲ್ಲಿ ಇದರ ಸೌಲಭ್ಯವಿಲ್ಲ. ಈ ವೀರಶೈವ ಮತದಲ್ಲಿ ಮಾತ್ರ ದೇಹವಿರುವವರೆಗೂ ಸಗುಣ ಮೂರ್ತಿಯನ್ನು ಅಂದರೆ ಇಷ್ಟಲಿಂಗವನ್ನು ಧರಿಸುವ ಪದ್ಧತಿ ಇರುವದರಿಂದ ಈ ಮತದ ಮಹತ್ವವು ಹೆಚ್ಚಿಗೆ ಒಡೆದು ಕಾಣುವಂತಿದೆ. ಇರಲಿ.

ಸಾರಾಂಶ ರೂಪವಾಗಿ ತಿಳಿಸುವದೇನಂದರೆ, ಈ ಮತವು ಪ್ರಾಚೀನವೇ ಇರಲಿ, ಅರ್ವಾಚೀನವೇ ಇರಲಿ, ಇದರಲ್ಲಿ ಜಗತ್ತಿನಲ್ಲಿರುವ ಸರ್ವಮತಗಳ ಮಾರ್ಗಗಳು ಅಡಕವಾಗಿರುವದರಿಂದಲೂ, ಸಾಧನೆಯ ಕ್ರಮವು ಸುಲಭವಾಗಿರುವದರಿಂದಲೂ, ಯಾವ ಮಾರ್ಗದ ಧರ್ಮಾನುಭವವನ್ನು ಪಡೆಯಬೇಕೆಂದವನಿಗೂ ಸಹ ಇದರಲ್ಲಿ ನಿಜವಾದ ಸಮಾಧಾನವನ್ನು ಹೊಂದಲೂ ಅವಕಾಶವಿದೆ. ಆದ್ದರಿಂದಲೇ ಈ ಮತವು ಸರ್ವಾಂಗ ಪೂರ್ಣವಾದ ಧರ್ಮವೆಂದು ಪುನಃ ಪ್ರಾರಂಭದ ವಾಕ್ಯವನ್ನೆತ್ತಿ ಈ ಲೇಖವನ್ನು ಪೂರೈಸುವೆನು.

ಓಂ ಶಾತಿಃ ಓಂ ಶಾಂತಿಃ

## ವೀರಶೈವ ಬ್ರಾಹ್ಮಣ್ಯ ಸಿದ್ಧಾಂತವು.

**ಲೇಖಕ:-ಅಮರನಾಥಶಾಸ್ತ್ರಿ, ಬನ್ನಿಗೊಳಮಠ.**

೧. ಪ್ರ॥ ವೀರಶೈವರು ಬ್ರಾಹ್ಮಣರೆಂದರೆ ಈ ಬ್ರಾಹ್ಮಣ್ಯವು ನಿಮ್ಮ ದೇಹಕ್ಕೆ ಸಂಬಂಧಿಸಿರುವದೇನು?

ಉ॥ ದೇಹಕ್ಕೆ ಬ್ರಾಹ್ಮಣ್ಯವಿಲ್ಲ; ತಂದೆತಾಯಿಗಳ ದೇಹಗಳು ಸುಡಲ್ಪಟ್ಟರೆ ಬ್ರಹ್ಮಹತ್ಯದೋಷ ಪ್ರಾಪ್ತವಾದೀತು.

೨. ಪ್ರ॥ ಮತ್ತೇನು ಜೀವಕ್ಕೆ ಹೊಂದಿರುವದೋ?

ಉ॥ ಅಲ್ಲ, ಜೀವದಿಂದ ಕೂಡಿದ ಸರ್ವ ಜಂತುಗಳಿಗೂ ಬ್ರಾಹ್ಮಣ್ಯವು ಸ್ಥಿರವಾದೀತು.

೩. ಇಲ್ಲವೆ ಜಾತಿಗೆ ಬಂದಿರುವದೋ?

ಉ॥ ನಿನ್ನ ಮತದಂತೆ ಜಾತಿಗೆ ಬ್ರಾಹ್ಮಣ್ಯವೆಂದರೆ—ಶ್ಲೋ॥ ಚಂಡಾಲಾಜಾಯತೇಸೂತಃ, ಸೂತಾದ್ದಸ್ಯುರ್ಹಿಜಾ

ಯತೇ || ಚಂಡಾಲನಿಂದ ಸೂತಮುನಿಯೂ, ಸೂತನಿಂದ ದಸ್ಯುಮುನಿಯೂ ಹುಟ್ಟಿರುತ್ತಾರೆ; ಮತ್ತು ಋಷ್ಯಶೃಂಗನು ಚಿಗರಿಯ ಮಗನು; ಕಣ್ವನು ನವಿಲಿನ ಮಗನು; ಅಗಸ್ತ್ಯ, ವಸಿಷ್ಠರಿಬ್ಬರೂ ಊರ್ವಶಿಯ ಮಕ್ಕಳು; ಸೋಮಶ್ರವ ಮುನಿಯು ಸರ್ಪದ ಮಗನು; ಅಶ್ವಿನೀದೇವತೆಗಳಿಬ್ಬರೂ ಕುದುರೆಯ ಮಕ್ಕಳು. ಹೀಗೆಯೇ ದೇವತೆಗಳ ಮತ್ತು ಋಷಿಗಳ ಹುಟ್ಟುವಿಕೆಯು. ಹೀಗೆ ಮಹಾಭಾರತದ ಆದಿಪರ್ವದಲ್ಲಿ ವ್ಯಾಸರನ್ನು ಕುರಿತು ಪರಾಶರ ಮುನಿಯ ವಾಕ್ಯವಿರುವದು. ನೋಡು! ಜಾತಿರಹಿತರಾದ ಅಗಸ್ತ್ಯ, ವಸಿಷ್ಠ ಮುಂತಾದವರಿಗೆ ಬ್ರಾಹ್ಮಣ್ಯವೇ ಇಲ್ಲದಂತಾಗುವದು. ಅವರಿಗೆ ಬ್ರಾಹ್ಮಣ್ಯವಿಲ್ಲವಾದರೆ ಭಾರದ್ವಾಜ ವಸಿಷ್ಠ ಮುಂತಾದ ಗೋತ್ರಗಳೇ ಇಲ್ಲವಾದಿತು. ಕರಣ, ಜಾತಿ ಮುಂತಾದ ಪಂಚಸೂತಕ ರಹಿತರಾದ ವೀರಶೈವರು ಜಾತಿಗೆ ಬ್ರಾಹ್ಮಣ್ಯವೆಂದು ಹೇಳುವದಿಲ್ಲಾ.

**೪. ಪ್ರ|| ಹಾಗಾದರೆ ವರ್ಣಕ್ಕೆ ಬ್ರಾಹ್ಮಣ್ಯವೆನ್ನುವಿರೇನು ?**

ಉ|| ವರ್ಣಕ್ಕೆ ಬ್ರಾಹ್ಮಣ್ಯವಿಲ್ಲಾ. ಬ್ರಾಹ್ಮಣೋಸ್ಯಮುಖಮಾಸೀದ್ಬಾಹೂರಾಜನ್ಯಃ ಕೃತಃ ಊರೂತದಸ್ಯಯದ್ವೈಶ್ಯಃಪದ್ಭ್ಯಾ ಶೂದ್ರೋಅಜಾಯತ್ || ಎಂಬ ಶುಕ್ಲ ಯಜುರ್ವೇದ ವಾಕ್ಯದಂತೆ ಪರಶಿವನ ಶರೀರದಿಂದತ್ಪನ್ನರಾದ ಶೂದ್ರ ಮುಂತಾದ ವರ್ಣಗಳಿಗೂ ಬ್ರಾಹ್ಮಣ್ಯವನ್ನು ಹೇಳಬೇಕಾದೀತು.

**೫. ಪ್ರ ಅಥವಾ ಧರ್ಮಕ್ಕೆ ಹೇಳುವಿರೇನು ?**

ಉ|| ಧರ್ಮಕ್ಕೆ ಬ್ರಾಹ್ಮಣ್ಯವಿಲ್ಲಾ; ಆಹಾರ, ನಿದ್ರಾ, ಮೈಥುನಾದಿ ಧರ್ಮಗಳು ಪಶುಗಳಿಗಾದರೂ ಉಂಟು. ಆ ಪಶುಗಳಿಗೂ ಬ್ರಾಹ್ಮಣ್ಯವು ಸಂಘಟಿಸಬೇಕಾದೀತು.

**೬. ಪ್ರ|| ಇಲ್ಲವೇ ಕರ್ಮಕ್ಕೆ ಬ್ರಾಹ್ಮಣ್ಯವೋ ?**

ಉ|| ಉಪನಯನ (ಮುಂಜಿ) ಮೊದಲಾದ ಕರ್ಮವು ಕ್ಷತ್ರಿಯಾದಿಗಳಿಗೂ ಇರುತ್ತದೆ. ಅವರಿಗೂ ಬ್ರಾಹ್ಮಣತ್ವ ಸಿದ್ಧವಾದೀತು. ಜ್ಞಾನ ಕ್ರಿಯಾನಿರತರಾದ ವೀರಶೈವರು ಕರ್ಮಕ್ಕೆ ಬ್ರಾಹ್ಮಣ್ಯವೆನ್ನುವದಿಲ್ಲ.

**೭. ಪ್ರ|| ಯಾವದಕ್ಕೂ ಇಲ್ಲವಾದರೆ ನಿಮ್ಮ ಪಾಂಡಿತ್ಯಕ್ಕೆ ಸಾಧಿಸು ವಿರೇನು ?**

ಉ|| ಪಾಂಡಿತ್ಯಕ್ಕೆ ಬ್ರಾಹ್ಮಣ್ಯವಿಲ್ಲಾ. ಕ್ಷತ್ರಿಯಾದಿಗಳಿಗೂ ಅಭ್ಯಾಸಬಲದಿಂದ ಸಕಲ ಶಾಸ್ತ್ರಗಳಲ್ಲೂ ಪಾಂಡಿತ್ಯವು ದೊರೆಯುತ್ತದೆ. ಅವರಿಗೂ ಬ್ರಾಹ್ಮಣ್ಯ ಪ್ರಸಂಗ ಒದಗುವದು.

**೮. ಪ್ರ|| ಹಾಗಾದರೆ ನಿಮ್ಮ ಧಾರ್ಮಿಕತನಕ್ಕೆ ಹೇಳುವಿರೇನು ?**

ಉ|| ಧಾರ್ಮಿಕತನಕ್ಕೆ ಬ್ರಾಹ್ಮಣ್ಯವಿಲ್ಲಾ; ಕ್ಷತ್ರಿಯಾದಿಗಳೂ ಯಜ್ಞ ಮೊದಲಾದ ಧರ್ಮದಲ್ಲಿ ಆಸಕ್ತರಾಗುವರು. ಅವರಿಗೂ ಬ್ರಾಹ್ಮಣ್ಯವು ಪ್ರಾಪ್ತವಾದೀತು.

**೯. ಪ್ರ|| ಇಷ್ಟರಲ್ಲಿ ಬ್ರಾಹ್ಮಣ್ಯವಿಲ್ಲೆಂದು ಹೇಳಿದ್ದಾಯಿತು ; ಆದರೆ ಬ್ರಾಹ್ಮಣತ್ವಕ್ಕೆ ಯಜ್ಞೋಪವೀತ (ಜನಿವಾರ) ವು ಮುಖ್ಯ ಚಿಹ್ನವು. ಅದಿಲ್ಲದೆ ವೀರಶೈವರ ಬ್ರಾಹ್ಮಣ್ಯವು ಹೇಗೆ ಸಿದ್ಧಿಸುವದು ?**

ಉ|| ನಿನ್ನ ವಾಕ್ಯದಂತೆ ಬ್ರಾಹ್ಮಣತ್ವಕ್ಕೆ ಯಜ್ಞೋಪವೀತವು ಮುಖ್ಯ ಚಿಹ್ನವು; ಆ ಯಜ್ಞೋಪವೀತವೇ ಲಿಂಗವು. ಹೇಗೆಂದರೆ-"ಯಜ್ಞೋಪವೀತಂ ಪರಮಂ ಪವಿತ್ರಂ" ಎಂಬ ಮಂತ್ರದಲ್ಲಿ 'ಯಜ್ಞೋವೈವಿಷ್ಣುಃ' ಎಂಬ ವೇದವಕ್ಯಾನುಸಾರವಾಗಿ ಯಜ್ಞ ಅಂದರೆ ವಿಷ್ಣುನಾಮಕವಾದ ಪೀಠಕ್ಕೆ, ಉಪ-ಸಾಮೀಪ್ಯದಿಂದ, ವಿ-ವಿಶೇಷದಿಂದ- ಇತಂ-ಸುತ್ತುಗಟ್ಟಲ್ಪಟ್ಟದ್ದು ಯಜ್ಞೋಪವೀತಂ ಶಿವಲಿಂಗವೆಂದರ್ಥವು.

ರಾ|| ವಿಷ್ಣುವು ಶಿವನ ಶಕ್ತಿಯಾದ್ದರಿಂದಲೂ ಶಿವನಿಗೆ ಶಕ್ತಿಯೇ ಪೀಠವಾದ್ದರ ದೆಸೆಯಿಂದಲೂ ಯಜ್ಞೋಪವೀತ ಶಬ್ದವು ಲಿಂಗ ಪರವು. ಈ ಬ್ರಹ್ಮೋಪನಿಷನ್ಮಂತ್ರದ ಅರ್ಥವನ್ನು ಅನುಸರಿಸಿ ಕಾರಣಾಗಮದಲಿ—

ಶ್ಲೋ|| ತದಾಹೂಯ ಮುನೀಂದ್ರೃಷ್ಟ್ವಾಭಿಷಿಕ್ತ್ವಾಂ ಮುನಿಪುಂಗವಾಃ|
ಭಸ್ಮರುದ್ರಾಕ್ಷನಿಷ್ಠಾತಾಃ ಸ್ಫಾಟಿಕಂ ಶೈಲಜಂತುವಾ ||
ಶಿವವಿಷ್ಣುಮಯಂ ಲಿಂಗಂ ತ್ರಿವೃತ್ಸೂತ್ರಂ ಸನಾತನ
ಯಜ್ಞೋಪವೀತಂ ಪರಮಂ ಪವಿತ್ರಂ ಶ್ರದ್ಧಯಾಸಹಾ ||
ಕರಾಬ್ಜ ಪೀಠೇ ಪೀಠೇ ವಾಭಜಧ್ವಂ ಶೃತಿಕೋವಿದಾಃ |
ಇತ್ಯುಕ್ತ್ವಾಭಗವಾನ್ ಬ್ರಹ್ಮಾ ಸತ್ಯಲೋಕಮಗಚ್ಛತ್ ||

ಟೀ|| ಬ್ರಹ್ಮನು ಮುನಿಗಳನ್ನು ಕರೆದು ಹೇಳಿದ್ದೇನಂದರೆ—ಎಲೈ ಶೃತಿಕೋವಿದರಾದ ಮುನಿಗಳೇ, ಯಜ್ಞೋಪವೀತನಾಮಕವೂ ಮೂವತ್ತಾರು ತತ್ವಗಳಿಗೆ ಶ್ರೇಷ್ಠವೂ, ಮಂಗಲಕರವೂ, ಶಿವವಿಷ್ಣುಗಳಿಬ್ಬರ ಪ್ರಾಚುರ್ಯವೂ, ತ್ರಿವೃತ್ಸೂತ್ರನಾಮಕವೂ, (ಅಂದರೆ ತ್ರಿ-ಮೂರುಸಂಖ್ಯೆಯ ಸ್ಥೂಲಸೂಕ್ಷ್ಮಕಾರಣ ದೇಹದ ಅಭಿಮಾನಿಗಳಾದ ವಿಶ್ವ, ತೈಜಸ, ಪ್ರಾಜ್ಞನಾಮಕ, ಜೀವಾತ್ಮ, ಅಂತರಾತ್ಮ, ಪರಮಾತ್ಮರೂ, ವೃತ್- ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಾಖ್ಯವಾದ ಆವರಣಗಳೂ ಇವುಗಳುಳ್ಳ, ಸೂತ್ರಂ-ಮಣಿಗಳ ಸಮೂಹದಲ್ಲಿ ವ್ಯಾಪಿಸಿರುವ ದಾರದಂತೆ ಸರ್ವ ವ್ಯಾಪಕವಾದ ಜ್ಯೋತಿರ್ಮ ಮಹಾಲಿಂಗವೆಂರ್ಥವು) ಈ ಸನಾತನವಾದ ಲಿಂಗವನ್ನು ಕರಪೀಠದಲ್ಲಿ ಅಥವಾ ಬಾಹ್ಯಪೀಠದಲ್ಲಿ ಪೂಜಿಸಿರಿ ಎಂದು ಹೇಳಿ ಸ್ವಸ್ಥಾನಕ್ಕೆ ಗಮಿಸಿದನು. ಮತ್ತು-

ಶ್ಲೋ|| ಸಂಸ್ಯೂತತತ್ವಾತ್ಸಮಸ್ತೇಷು ವಸ್ತುಷ್ವಪಿತು ಸಂತತಂ |
ಸೂಚನಾತ್ಪರಮೇಶಸ್ಯ ಸೂತ್ರಂ ಲಿಂಗಮಿತೀರಿತಂ ||

ಟೀ|| ಸಮುಸ್ತ ವಸ್ತುಗಳಲ್ಲಿ ವ್ಯಾಪಿಸಿದ್ದರಿಂದಲೂ, ಶಿವನನ್ನು ಸೂಚಿಸುವುದರಿಂದಲೂ ಸೂತ್ರವು ಲಿಂಗವೆಂದು ಹೇಳಲ್ಪಟ್ಟಿತು. ಹೀಗೆಂಬ ಪ್ರಕಾಶಕನ ಉಕ್ತಿಯಿಂದಲೂ ಯಜ್ಞೋಪವೀತವೆಂದರೂ ಸೂತ್ರವೆಂದರೂ ಲಿಂಗಪರವೇ ಇರುವದು. ಈ ಯಜ್ಞೋಪವೀತ (ಲಿಂಗ) ವನ್ನು ಧರಿಸಿರುವ ವೀರಶೈವರ ಬ್ರಾಹ್ಮಣ್ಯವು ಸ್ವಭಾವಸಿದ್ಧವಿರುವದು.

**೧೦. ಪ್ರ|| ನೀವು ಹೇಳಿದಂತೆ ಯಜ್ಞೋಪವೀತ (ಲಿಂಗ) ಧಾರಿಗಳಾದ್ದರಿಂದ ವೀರಶೈವರು ಬ್ರಾಹ್ಮಣರೆಂದರೆ ಅಗಸ, ಕ್ಷೌರಿಕ ಮೊದಲಾಗಿ ಲಿಂಗಧಾರಿಗಳಾಗಿರುವರು; ಇವರಿಗೂ ಬ್ರಾಹ್ಮಣ್ಯವು ಸಂಘಟಿಸುವದು. ಈ ಅತಿ ವ್ಯಾಪ್ತಿ ದೋಷಕ್ಕೆ ಏನು ಹೇಳುವೆ?**

ಉ|| ಸಾವಧಾನದಿಂದ ಕೇಳು: ಪ್ರಾಕೃತ ಬ್ರಾಹ್ಮಣರು ಧರಿಸುವ ಯಜ್ಞೋಪವೀತ (ಜನಿವಾರ) ವನ್ನು ಶೂದ್ರ ಮುಂತಾದ ವರ್ಣದವರು ಧರಿಸುತ್ತಿದ್ದರೂ ಉಪನಯನ ಮುಂತಾದ ವಿಶೇಷ ಸಂಸ್ಕಾರವಿಲ್ಲದ್ದರಿಂದ ಷಟ್ಕರ್ಮ ಪಂಚ ಯಜ್ಞ ಮುಂತಾದವುಗಳಿಗೆ ಯೋಗ್ಯರಾಗದಿರುವಂತೆ ಕನಿಷ್ಠ ವರ್ಣ ಮುಂತಾಗಿ ಲಿಂಗಧಾರಿಗಳಾಗಿದ್ದರೂ ಭಕ್ತ್ಯಾಷ್ಟಾವರಣ ಪಂಚಾಚಾರ, ಶಿವದೀಕ್ಷಾ ಸಂಸ್ಕಾರ, ಶಿವಾಗಮಪಠನ, ಗುರುಪೀಠಾಧಿಕಾರಿತ್ವ ಮುಂತಾದವುಗಳಿಗೆ ಅಯೋಗ್ಯರಾದ ಕಾರಣ ಹೆಣ್ಣು ಆಮೆಯು (ತಾಂಬೇಲು) ಕೆಚ್ಚಲದಾಕಾರವಾಗಿದ್ದರೂ ಕ್ಷೀರಪಾನವು ದೊರೆಯದಂತೆ ಅನ್ಯರಿಗೆ ಬ್ರಾಹ್ಮಣ್ಯವು ಎಂದೂ ಪ್ರಾಪ್ತಿಯಾಗುವುದಿಲ್ಲ.

**೧೧. ಪ್ರ|| ವೀರಶೈವರು ಯಜ್ಞೋಪವೀತ (ಲಿಂಗ) ಧಾರಿಗಳಾದರೂ ಪಂಚಯಜ್ಞ, ಸಂಧ್ಯಾವಂದನ ಮುಂತಾದ ವೈದಿಕಕರ್ಮದ ಅನುಷ್ಠಾನವಿಲ್ಲದಿರುವುದರ ದೆಸೆಯಿಂದ ಬ್ರಾಹ್ಮಣ್ಯವು ಹೇಗೆ ಸಮಂಜಸವಾಗುವದು?**

ಉ|| ಏಕಾಗ್ರಚಿತ್ತನಾಗು: ಮನುಷ್ಯರಲ್ಲಿ ವಿಶುದ್ಧರೆಂತಲೂ, ಪ್ರಾಕೃತರೆಂತಲೂ ಎರಡು ವಿಧವಾಗಿರುವುದು. ಅವರಲ್ಲಿ ಶಿವಸಂಸ್ಕಾರ ಉಳ್ಳವರೇ ಶುದ್ಧರು; ಇತರ ಜನರು ಪ್ರಾಕೃತರೆನಿಸುವರು. ವರ್ಣ, ಆಶ್ರಮ, ಮುಂತಾದ ಧರ್ಮಗಳ ವ್ಯವಸ್ಥೆಯೂ ಎರಡು ಪ್ರಕಾರವಾಗಿರುವದು. ಆ ಶಿವ ಸಂಬಂಧವಾದ ಧರ್ಮವು ಸಂಕ್ಷೇಪದಿಂದ ಸಂಗ್ರಹಿಸಿ ಹೇಳಲ್ಪಡುತ್ತದೆ. ಹೀಗೆ ಆರಂಭಿಸಿ, ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನ ಇವು ಐದು ಕ್ರಮೋಕ್ತವಾಗಿರುವವು. ಶಿವನ ಸೇವೆಗೋಸುಗ ದೇಹವನ್ನು ಶೋಷಿಸುವದು ತಪಸ್ಸು; ಕೃಛ್ರಚಾಂದ್ರಾಯಣ ಮುಂತಾದ ತಪಸ್ಸು ಸಮ್ಮತವಲ್ಲ. ಶಿವಾರ್ಚನೆಯೇ ಕರ್ಮವು; ಬಾಹ್ಯವಾದ ಯಜ್ಞ ಮುಂತಾದ ಕರ್ಮವು ಹೇಳಲ್ಪಡುವದಿಲ್ಲ. ಪಂಚಾಕ್ಷರಾಭ್ಯಾಸ ಅಥವಾ ಪ್ರಣವಾಭ್ಯಾಸ ಶ್ರೀ ರುದ್ರಾಧ್ಯಯನ ಮುಂತಾದುದರ ಅಭ್ಯಾಸವು ಜಪವೆನಿಸುವದು; ಶಿವನರೂಪ ಮುಂತಾದ ಚಿಂತನೆಯೇ ಧ್ಯಾನವು; ಆತ್ಮ ಮುಂತಾದ ಚಿಂತನೆಯು ಕಾರಣವಿಲ್ಲ. ಶಿವಾಗಮಗಳ ಅರ್ಥಜ್ಞಾನವೇ ಜ್ಞಾನವು; ಅನ್ಯವಾದ ಅರ್ಥವನ್ನು ತಿಳಿಯುವುದು ಯೋಗ್ಯವಲ್ಲ. ಹೀಗೆ ಐದು ಪ್ರಕಾರ ಶಿವಯಜ್ಞವು ಹೇಳಲ್ಪಟ್ಟರುವುದು. ಈ ಐದು ಯಜ್ಞದಿಂದ ಶಿವನನ್ನು ಉತ್ಕೃಷ್ಟ ಭಕ್ತಿಪೂರ್ವಕವಾಗಿ ಪೂಜಿಸುವಾತನೇ ಭಕ್ತನೆನಿಸುವನು. ಒಳಗೆ ಯಾವಾಗಲೂ ಪ್ರಕಾಶಿಸುವ ಜ್ಞಾನವೆಂಬ ಸೂರ್ಯನ ಉಪಾಸನೆಯನ್ನು ಮನಃಪೂರ್ವಕವಾಗಿ ಮಾಡುತ್ತಿರುವುದೇ ಸಂಧ್ಯಾವಂದನೆಯೆಂದು ವೀರಶೈವರು ತಿಳಿಯುತ್ತಾರೆ. ಸತ್ಯ, ಕ್ಷಮೆ, ದಯಾ, ಶುಚಿತ್ವ, ನಿಯಮ, ಮೃದುತ್ವ, ತಪಸ್ಸು, ತ್ಯಾಗ, ಬ್ರಹ್ಮಚರ್ಯ, ಸಂತೋಷವೃತ್ತಿ, ಸರಳಸ್ವಭಾವ-ಈ ಹನ್ನೊಂದು ಧರ್ಮಗಳು ಭಕ್ತರ ಶುಭವಾದ ಬಯಕೆಯಲ್ಲಿ ಹೇಳಲ್ಪಟ್ಟರುವವು. (ಇವೆಲ್ಲಕ್ಕೂ ಸುಪ್ರಭೇದಾಗಮದಲ್ಲಿಯ ಪ್ರಮಾಣವನ್ನು ನೋಡು) ಹೀಗೆ ಶಿವಾರ್ಚನೆ ಮುಂತಾದವುಗಳಿಗೇನೆ ಪಂಚಯಜ್ಞ, ಸಂಧ್ಯಾವಂದನೆ ಮುಂತಾಗಿ ಹೇಳಲ್ಪಟ್ಟದ್ದರಿಂದ ಆ ವೈದಿಕ ಕರ್ಮಗಳನ್ನಾಚರಿಸುವ ವೀರಶೈವರು ಬ್ರಾಹ್ಮಣರೆಂಬುದು ಸಮಂಜಸವು.

**೧೨. ಪ್ರ|| ನೀವು ವೈದಿಕ ಕರ್ಮಗಳನ್ನು ಆಚರಿಸುವಿರಾದರೆ—**

ಶ್ಲೋ|| ಜನ್ಮನಾಜಾಯತೇಶೂದ್ರಃ ಕರ್ಮಣಾಜಾಯತೇದ್ವಿಜಃ |
ವೇದಾಭ್ಯಾಸೇನ ವಿಪ್ರಸ್ಸ್ಯಾದ್ಬ್ರಹ್ಮವಿದ್ಬ್ರಾಹ್ಮಣೋ ಭವೇತ್||

**ಎಂಬ ಮಹಾಭಾರತದ ಉಕ್ತಿಯಂತೆ ಜನ್ಮದಿಂದ ಶೂದ್ರನಾಗಿ ಹುಟ್ಟಲ್ಪಡುತ್ತಾನೆ; ಕರ್ಮದಿಂದ ದ್ವಿಜನೆನಿಸುವನು. ವೇದಾಭ್ಯಾಸದಿಂದ ವಿಪ್ರನಾಗುವನು; ಬ್ರಹ್ಮಜ್ಞಾನದಿಂದ ಬ್ರಾಹ್ಮಣನೆನಿಸುವನು. ಹೀಗಿದ್ದು ನಿಮಗೆ ಉಪನಯನ (ಮುಂಜಿ) ಕರ್ಮದ್ವಾರಾ ದ್ವಿಜತ್ವವಿಲ್ಲದ್ದರಿಂದ ಶ್ರೀ ರುದ್ರಪಠನ ಮುಂತಾದ ವೈದಿಕಕರ್ಮದಲ್ಲಿ ಹೇಗೆ ಅಧಿಕಾರವುಂಟಾಗುವದು?**

ಉ|| ನಿನ್ನ ಮತದಂತೆ ಉಪನಯನ ಕರ್ಮವು ವೀರಶೈವರಿಗೆ ಕಾರಣವಿಲ್ಲಾ. ಯಾತಕ್ಕಂದರೆ—

ಶ್ಲೋ|| ರುದ್ರೋಭೂತ್ವಾಯಜೇದುದ್ರಂ ನಾರುದ್ರೋ-
ರುದ್ರಮರ್ಚಯೇತ್ ||

ಟೀ|| ತಾನು ರುದ್ರನಾಗಿ ರುದ್ರಮೂರ್ತಿ ಲಿಂಗವನ್ನು ಪೂಜಿಸತಕ್ಕದ್ದು; ರುದ್ರನಾಗದೇ ರುದ್ರನನ್ನು ಪೂಜಿಸತಕ್ಕದ್ದಲ್ಲಾ. ಹೀಗೆಂಬ ಪ್ರಮಾಣದಿಂದ ರುದ್ರನನ್ನು ಆರಾಧಿ

ಸುವ ಯೋಗ್ಯತೆಯನ್ನುಂಟುಮಾಡುವುದೇ ವೀರಶೈವರಿಗೆ ಅವಶ್ಯವಾಗಿ ಮಾಡತಕ್ಕ ಶಿವದೀಕ್ಷೆಗೆ ಪ್ರಯೋಜನವಾದಕಾರಣ ಪೂರ್ವಜೀವಭಾವದ ಮಾಂಸಪಿಂಡವನ್ನು ಕಳೆದು ಶಿವಸ್ವರೂಪದ ಮಂತ್ರಪಿಂಡವಂ ನೆಲೆಗೊಳಿಸುವ ಆ ಶಿವದೀಕ್ಷಾ ಸಂಸ್ಕಾರ ಬಲದಿಂದಲೇ ದ್ವಿಜತ್ವವು ಪ್ರಾಪ್ತವಾಗಿ ಶ್ರಿ ರುದ್ರ ಪಠನ ಮುಂತಾದ ವೈದಿಕ ಕರ್ಮದಲ್ಲಿ ಅಧಿಕಾರತ್ವವು ಸಿದ್ಧಿಸುವುದು.

ಇದಕ್ಕೆ ಪ್ರಮಾಣ-ಗಾರುಡಪುರಾಣದಲ್ಲಿ—

ಶ್ಲೋ॥ ವಂಶಾವಳಿಪ್ರಯಾತಾನಾಂ ಲಿಂಗಧಾರಣಶಾಲಿನಾಂ ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವವಿದ್ಯತೇ ॥
ನಮಕೇಚಮಕೇ ಪಂಚಬ್ರಹ್ಮಮಂತ್ರಾದಿ ವೈದಿಕೇ ।
ತೇಷಾಮೇವಾಧಿಕಾರೋಽಸ್ತಿ ಶಿವದೀಕ್ಷಾಪ್ರಭಾವತಃ ॥

ಟೀ॥ ಶಿವಭಕ್ತರ ವಂಶಾವಳಿಯನ್ನನುಸರಿಸಿ ಬಂದಂಥ ಲಿಂಗಧಾರಣದಿಂದೊಪ್ಪುವ ಜ್ಞಾನಿಗಳಾದ ಶಿವಭಕ್ತರಿಗೆ ಶೂದ್ರತ್ವವು ಯಾವಾಗ್ಲೂ ಇಲ್ಲಾ. ನಮಕ, ಚಮಕ, ಪಂಚಬ್ರಹ್ಮ ಮಂತ್ರ ಮುಂತಾದ ವೈದಿಕ ಕರ್ಮದಲ್ಲಿ ಅವರಿಗೆ ಶಿವದೀಕ್ಷೆಯ ಪ್ರಭಾವದ ದೆಸೆಯಿಂದಲೇ ಅಧಿಕಾರವಿರುತ್ತದೆ. ಕಾರಣ, ವೀರಶೈವರಿಗೆ ಉಪನಯನ (ಮುಂಜಿ) ವನ್ನು ಹೊರತಾದರೂ ಶಿವದೀಕ್ಷೆಯಿಂದಲೇ ದ್ವಿಜತ್ವವು ಸ್ವತಸ್ಸಿದ್ಧವಾಗಿರುವುದು. ಇನ್ನು ಪ್ರಾಕೃತ ಬ್ರಾಹ್ಮಣ ಕುಮಾರನಿಗೆ ಉಪನಯನವಾಗದಿದ್ದಲ್ಲಿ ಶೂದ್ರತ್ವವು, ಅಪ್ರಾಕೃತ ಬ್ರಾಹ್ಮಣನಾದ ವೀರಶೈವ ಕುಮಾರನಿಗಾದರೋ ಉಪನಯನವಾಗದಿದ್ದಲ್ಲಿಯೂ ಬ್ರಾಹ್ಮಣ್ಯವೆನ್ನುವ ಈ ವಿಷಯವು ವಿಚಾರಣೀಯವಾಗಿರುವುದು.

೧೩. ಪ್ರ॥ ನೀವು ಬ್ರಾಹ್ಮಣರಾದರೆ ಪ್ರಾಕೃತ ಬ್ರಾಹ್ಮಣರಿಗೆ ಭಾರದ್ವಾಜ ಮುಂತಾದ ಋಷಿಗೋತ್ರಗಳಿರುವಂತೆ ನಿಮಗೆ ಯಾವ ಋಷಿಗೋತ್ರಗಳಿರುವವು?

ಉ॥ ಏಕಾಗ್ರಚಿತ್ತನಾಗು : ಶಂಕರಸಂಹಿತೆಯಲ್ಲಿ—

ವೃ॥ ಯದಾಯದಾಪ್ರಾಣಿಶಿವೈಕ್ಯಭಾಜಾಂ ।
ಹಾನಿರ್ಭವೇದ್ಭೂಮಿತಲೇ ಗಣೇಶಾಃ ॥
ತದಾತದಾಮರ್ತ್ಯಕುಲೇವತೀರ್ಯ ।
ಸಂಭೂಯಕುರ್ವಂತಿಹಿ ಧರ್ಮಸಂಸ್ಥಾಂ ॥

ಟೀ॥ ಲಿಂಗಾಂಗಸಾಮರಸ್ಯರೂಪಧರ್ಮಗಳಿಗೆ ಆವಾಗ ಆವಾಗ ಗ್ಲಾನಿಯು ಉಂಟಾಗುವದೋ, ಆ ಸಮಯದಲ್ಲಿ ಗಣೇಶ್ವರರು ಮರ್ತ್ಯಕುಲಮಧ್ಯದಲ್ಲಿ ಅವತರಿಸಿ ಧರ್ಮಸ್ಥಾಪನೆಯನ್ನು ಮಾಡುತ್ತಾರೆಂಬ ಪ್ರಮಾಣದಿಂದಲೂ ಮತ್ತು ಸ್ವಾಯಂಭುವಾಗಮದಲ್ಲಿ—

ಶ್ಲೋ॥ ಕೃತಾದ್ಯುಗಚತುಷ್ಕೇತೇ ಪಂಚಾರಾಧ್ಯಾ ಯಥಾವಿಧಿ ।
ಮಮಪಂಚಮುಖೋದ್ಭೂತಾಸ್ಸಂಸ್ಥಾಪ್ಯಕಲಶಾಭುವಿ ॥
ದೀಕ್ಷಾಂಕೃತ್ವಾಮಹಾದೇವಿ ಪಂಚಮಾನಾಂ ನಗಾತ್ಮಜೇ ।
ಕಲೌತದ್ವಂಶಜಾತಾನಾಂ ದೀಕ್ಷಾನುಗ್ರಹಕಾರಣಾತ್ ॥
ನಿಧಾಯ ನಿಜಶಿಷ್ಯಾಂಶ್ಚ ಪುನಸ್ತೇಮಾಂ ಸಮಾಗತಾಃ ॥

ಟೀ॥ ಕೃತಾದಿ ನಾಲ್ಕು ಯುಗಗಳಲ್ಲಿ ಧರ್ಮಸ್ಥಾಪನೆಗೋಸ್ಕರ ನನ್ನ ಪಂಚಮುಖದಿಂದ ಉದ್ಭೂತರಾದ ಪಂಚಾಚಾರ್ಯರು ಭೂಮಿಯಲ್ಲಿ ಯಥಾವಿಧಿಯಾಗಿ ಸದ್ಯೋಜಾತಾದಿ ಪಂಚಕಲಶಗಳನ್ನಿಟ್ಟು, ತಮ್ಮ ಶಿಷ್ಯರಿಗೆ ದೀಕ್ಷಾಸಂಸ್ಕಾರವನ್ನು ಮಾಡಿ, ಪುನಃ ತಮ್ಮ ವಂಶೀಯರಿಗೆ ದೀಕ್ಷೆಯನ್ನು ಮಾಡುವದಕ್ಕಾಗಿ ಅವರನ್ನು ಭೂಲೋಕದಲ್ಲಿಯೇ ಬಿಟ್ಟು ತಾವು ಸ್ವಮತಸ್ಥಾಪನೆಯನ್ನು ಮಾಡಿ, ಅನಂತರ ನನ್ನನ್ನೇ ಹೊಂದುವರೆಂದು ಪಾರ್ವತಿಗೆ ಪರಮೇಶ್ವರನು ಹೇಳಿರುವನು. ಇದೇ ಮೊದಲಾಗಿ ಪಂಚಾಚಾರ್ಯರ ಅವತಾರಕ್ಕೂ, ಅವರ ಶಿಷ್ಯರ ಗೋತ್ರ, ಸೂತ್ರ, ಪ್ರವರ ಮುಂತಾದವುಗಳಿಗೆ ಸ್ವಾಯಂಭುವಾಗಮದಲ್ಲಿ ಘಂಟಾಘೋಷವಾಗಿ ಹೇಳಲ್ಪಟ್ಟದ್ದರ ದೆಸೆಯಿಂದಲೂ, ಆ ಪಂಚಾಚಾರ್ಯರ ಐದು ಪೀಠಗಳು— ಕಾಶಿ, ಹಿಮಾಲಯ, ಶ್ರೀಶೈಲ, ರಂಭಾಪುರೀ, ಉಜ್ಜಯಿನೀ ಇವುಗಳಲ್ಲಿ ಸುಪ್ರಸಿದ್ಧವಾಗಿ ಅನಾದಿ ಯುಗಾರಂಭದಿಂದಲೂ ರಾರಾಜಿಸುತ್ತಿರುವದರಿಂದಲೂ ಮತ್ತು 'ಬ್ರಾಹ್ಮಣೋಸ್ಯ ಮುಖಮಾಸೀತ್' ಎಂಬ ಶುಕ್ಲ ಯಜುರ್ವೇದ ವಾಕ್ಯಾನುಸಾರವಾಗಿ ಪರಶಿವನ ಮುಖದಿಂದ ಉದ್ಭೂತರಾದ ಘಂಟಾಕರ್ಣಾದಿ ಆಚಾರ್ಯರುಗಳಲ್ಲಿ ಬ್ರಾಹ್ಮಣತ್ವಕ್ಕೆ ಸ್ವಭಾವಸಿದ್ಧವಿದ್ದು ಅವರ ವಂಶೋದ್ಭವರಾದ ವೀರಶೈವಲಿಂಗೀಬ್ರಾಹ್ಮಣರಿಗೆ ಪ್ರಾಕೃತ ಬ್ರಾಹ್ಮಣರಂತೆ ಋಷಿಗೋತ್ರವಾಗದೆ ಆ ಪಂಚಾಚಾರ್ಯರ ಗೋತ್ರಸೂತ್ರಾದಿಗಳೇ ಸಿದ್ಧವಾಗಿರುತ್ತವೆ.

೧೪. ಪ್ರ॥ ವೀರಶೈವರ ಬ್ರಾಹ್ಮಣ್ಯಕ್ಕೆ ವೇದ, ಆಗಮ, ಸ್ಮೃತಿ, ಪುರಾಣಗಳಲ್ಲಿ ಪ್ರಾಮಾಣ್ಯವೆಲ್ಲಿರುವದು ?

ಉ॥ ನಿನ್ನ ಪ್ರಶ್ನೆಗೆ ನಿಗಮಾಗಮಾದಿಗಳಲ್ಲಿ ಅನಂತ ಪ್ರಾಮಾಣ್ಯಗಳಿದ್ದರೂ ವಿಸ್ತರ ಭಯದ ದೆಸೆಯಿಂದ ಸಂಕ್ಷೇಪವಾಗಿ ವಿವರಿಸುವೆನು ಕೇಳು. ಮಹಾಭಾರತದ ಅನುಶಾಸನಿಕ ಪರ್ವದಲ್ಲಿ—

ಶ್ಲೋ॥ ಕಿಮಾಹುರ್ಭರತಶ್ರೇಷ್ಠ ವಿಪ್ರಾಃಪಾತ್ರಂ ಸನಾತನಂ ।
ಲಿಂಗಿನಂ ಬ್ರಾಹ್ಮಣಂಚೈವ ಬ್ರಾಹ್ಮಣಂಚಾಪ್ಯಲಿಂಗಿನಂ ॥

ಟೀ॥ ಭರತಶ್ರೇಷ್ಠನಾದ ಭೀಷ್ಮನೇ, ವಿಪ್ರರು ಸನಾತನವಾದ ಲಿಂಗೀಬ್ರಾಹ್ಮಣನನ್ನು ಸತ್ಪಾತ್ರವನ್ನಾಗಿ ಹೇಳುವರೋ ಅಥವಾ ಸನಾತನವಾದ ಅಲಿಂಗೀಬ್ರಾಹ್ಮಣನನ್ನು ಸತ್ಪಾತ್ರವನ್ನಾಗಿ ಹೇಳುವರೋ ?

ಹೀಗೆ ಧರ್ಮರಾಜನಿಂದ ಕೇಳಲ್ಪಡುತ್ತಿರಲಿಕ್ಕೆ—

ಶ್ಲೋ॥ ಸದ್ವೃತ್ತಿಮಪಿ ವಿಜ್ಞಾಯಲಿಂಗಿನೇ ಚೇತರಾಯಚ ।
ದೇಯಮಾಹುರ್ಮಹಾರಾಜ ಉಭಾವೇತೌತಪಸ್ವಿನೌ ॥

ಟೀ|| ಎಲೈ ಧರ್ಮರಾಜನೇ, ಸದ್ವೃತ್ತಿಯನ್ನಾದರೂ ತಿಳಿಮ ಲಿಂಗಿಬ್ರಾಹ್ಮಣನಿಗೆ ಅಥವಾ ಅಲಿಂಗಿ ಬ್ರಾಹ್ಮಣನಿಗೆ ಕೊಡತಕ್ಕದ್ದನ್ನಾಗಿ ಹೇಳುವರು. ಇವರಿಬ್ಬರೂ ತಪಸ್ವಿಗಳು. ಹೀಗೆ ಹೇಳಲ್ಪಟ್ಟದೆ. ಮತ್ತು ಜಾಬಾಲೋಪನಿಷತ್ತಿನಲ್ಲಿ-

ರುದ್ರೇಣಾತ್ತಮಶ್ನಂತಿ ರುದ್ರೇಣಪೀತಂಪಿಬಂತಿ ರುದ್ರೇಣಾ ಘ್ರಾತಂಜಿಘ್ರಂತಿ ತಸ್ಮಾದ್ಬ್ರಾಹ್ಮಣಾಃ ಪ್ರಶಾಂತಮನಸೋ ನಿರ್ಮಾಲ್ಯಮೇವ ಭಕ್ಷಯಂತಿ ನಿರ್ಮಾಲ್ಯಮೇವಾಶ್ನೀಯಾತ್ ನಿರ್ಮಾಲ್ಯಮೇವ ನೀಷೇವೇತ್ ||

ಟೀ|| ವಿಶೇಷ ಶಾಂತಮನಸ್ಸಿನವರಾದ ಲಿಂಗೀಬ್ರಾಹ್ಮಣರು ರುದ್ರನಿಂದ ಭುಂಜಿಸಲ್ಪಟ್ಟದ್ದನ್ನು ಭುಂಜಿಸುತ್ತಾರೆ. ರುದ್ರನಿಂದ ಪಾನಮಾಡಲ್ಪಟ್ಟದ್ದನ್ನು ಪಾನಮಾಡುತ್ತಾರೆ. ರುದ್ರನಿಂದ ಘ್ರಾಣಿಸಲ್ಪಟ್ಟದ್ದನ್ನು ಘ್ರಾಣಿಸುತ್ತಾರೆ. ಆದ್ದರಿಂದ ನಿರ್ಮಾಲ್ಯವನ್ನೇತಿನ್ನತಕ್ಕದ್ದು ; ನಿರ್ಮಾಲ್ಯವನ್ನೇ ಸೇವಿಸತಕ್ಕದ್ದು.

ಈ ವಾಕ್ಯವನ್ನೇ ಅನುಸರಿಸಿ ಸ್ಕಾಂದಪುರಾಣದಲ್ಲಿ—

ಶ್ಲೋ|| ರುದ್ರಭುಕ್ತಂತು ಭುಂಜೀಯಾದ್ರುದ್ರಪೀತಂಪಿಬಂತಿಚ |
ರುದ್ರಾಘ್ರಾತಂ ಸದಾಜಿಘ್ರೇದಿತಿ ಜಾಬಾಲಿಕೀಶ್ರುತಿಃ ||
ಶ್ರೀಷ್ವಾಶ್ಯಾಂತಾಶ್ಚರುದ್ರೇಣ ಭುಕ್ತಮೇವಹಿ ಭುಂಜತೇ|
ಘ್ರಾತಮೇವಹಿ ಜಿಘ್ರಂತಿ ಗೀತಮೇವ ಪಿಬಂತಿಚ ||
ನಿರ್ವಿಕಲ್ಪಧಿಯಾಶಂಭು ಭುಕ್ತೋಚ್ಛಿಷ್ಟಾನ್ನ ಪಾನಕಂ |
ಯೋಭುಂಕ್ತೇ ಸ ಗಣಾಧೀಶೋ ಯಾವಜ್ಜೀವಂ ಪ್ರತಿಜ್ಞಯಾ ||

ತಾ|| ನಿರ್ವಿಕಲ್ಪಬುದ್ಧಿಯಿಂದ ಯಾವಾತನು ಪ್ರತಿಜ್ಞಾಪೂರ್ವಕವಾಗಿ ಜೀವಿಸಿರುವ ಪರ್ಯಂತ ಶಿವನ ನಿರ್ಮಾಲ್ಯವನ್ನು ಭುಂಜಿಸುತ್ತಾನೆಯೋ ಆತನೇ ಗಣಾಧೀಶನಾಗುವನು.

ಇದೇ ಸ್ಕಾಂದವಾಕ್ಯ ಮುಂತಾಗಿ ಶೈವಸಂಹಿತಾದಿ ಗ್ರಂಥಗಳಲ್ಲಿಯೂ ಹೇಳಲ್ಪಟ್ಟಿರುವದು. ಮತ್ತು—

ತ್ವಂದೇವೇಷುಬ್ರಾಹ್ಮಣೋಸ್ಯಹಂ ಮನುಷ್ಯೇಷು ಬ್ರಾಹ್ಮಣಃ |
ಬ್ರಾಹ್ಮಣೋವೈಬ್ರಾಹ್ಮಣಮುಪಧಾವತ್ಯುಪಧಾವಾಮ್ಯುಪಧಾವಾಮಿ ||

ಟೀ|| ಹೇ ಶಿವನೇ, ದೇವರುಗಳ ಮಧ್ಯದಲ್ಲಿ ನೀನು ಬ್ರಾಹ್ಮಣನು ; ಮನುಷ್ಯರುಗಳಲ್ಲಿ ನಿನ್ನ ಭಕ್ತನಾದ ನಾನು ಬ್ರಾಹ್ಮಣನು. ಬ್ರಾಹ್ಮಣನು ಬ್ರಾಹ್ಮಣನನ್ನು ಹೊಂದುತ್ತಾನೆ; ನಾನು ನಿನ್ನನ್ನು ಬಾರಿಬಾರಿಗೂ ಹೊಂದುವೆನು ಎಂಬ ಸಾಮವೇದದ ಪ್ರಪದ ಮಂತ್ರಾನುಸಾರವಾಗಿ ಪರಾಶರಪುರಾಣದಲ್ಲಿ—

ಶ್ಲೋ|| ಬ್ರಾಹ್ಮಣೋಭಗವಾನ್ ರುದ್ರಸ್ಸರ್ವೇಷಾಮುತ್ತಮೋತ್ತಮಃ |
ಬ್ರಹ್ಮಭಾವೋಹಿ ರುದ್ರಸ್ಯ ಬ್ರಾಹ್ಮಣ್ಯಂ ನೈವಹೇತುಜಂ ||
ಬ್ರಾಹ್ಮಣೋವೈ ಸದಾಲೋಕೇ ಬ್ರಾಹ್ಮಣಂಚೋಪಧಾವತಿ|
ಮಹಾಬ್ರಾಹ್ಮಣಮೀಶಾನಮುಪಧಾವೇತನೇತರಂ ||

ಟೀ|| ಸರ್ವರಿಗೆ ಉತ್ತಮೋತ್ತಮನೂ, ಭಗವಂತನೂ ಆದ ರುದ್ರನು ಬ್ರಾಹ್ಮಣನು ; ರುದ್ರನೇ ಪರಬ್ರಹ್ಮವು ; ರುದ್ರನಿಗೆ ಬ್ರಾಹ್ಮಣ್ಯವು ಕಾರಣದಿಂದ ಬಂದದ್ದಲ್ಲ. ಲೋಕದಲ್ಲಿ ಬ್ರಾಹ್ಮಣನಾದವರು ಯಾವಾಗಲೂ ಬ್ರಾಹ್ಮಣನನ್ನು ಹೊಂದುತ್ತಾನೆ. ಕಾರಣ ಮಹಾಬ್ರಾಹ್ಮಣನಾದ ಶಿವನನ್ನು ಹೊಂದತಕ್ಕದ್ದು ; ಅನ್ಯನನ್ನು ಹೊಂದತಕ್ಕದ್ದಲ್ಲ. ಮತ್ತು ವಾತುಲಾಗಮದಲ್ಲಿ—

ಶ್ಲೋ|| ರುದ್ರಏವ ಸದಾಸಾಕ್ಷಾದ್ಬ್ರಾಹ್ಮಣೋ ಬ್ರಹ್ಮಭಾವತಃ |
ಬ್ರಾಹ್ಮಣೈಃಪರಿತಸ್ತಸ್ಮಾದ್ಬ್ರಾಹ್ಮಣೋ ರುದ್ರಏವಹಿ ||

ಟೀ|| ರುದ್ರನೇ ಸಾಕ್ಷಾತ್ ಪರಬ್ರಹ್ಮವಾದ್ದರಿಂದ ಬ್ರಾಹ್ಮಣನು. 'ಬ್ರಾಹ್ಮಣಾನಾಂಶಿವೋ ದೇವಃ' ಎಂಬಂತೆ ಬ್ರಾಹ್ಮಣರಿಂದ ಪರಿಸಲ್ಪಟ್ಟದ್ದರ ದೆಸೆಯಿಂದಲೂ ಬ್ರಾಹ್ಮಣನು.

ದೇವೇಷ್ವೇಕೋ ಬ್ರಾಹ್ಮಣಸ್ತ್ವತ್ತದ್ಭಕ್ತೋನೃಷು ಬ್ರಾಹ್ಮಣಃ ದೇವತೆಗಳಲ್ಲಿ ಶಿವನೊಬ್ಬಾತನೇ ಬ್ರಾಹ್ಮಣನು ; ಮನುಷ್ಯರಲ್ಲಿ ಆತನ ಭಕ್ತನೇ ಬ್ರಾಹ್ಮಣನು. ಹೀಗೆಂಬುವ ವಜ್ರಸೂಚಿ ಪರಮಹಂಸಾಚಾರ್ಯರ ವಾಕ್ಯ ಮುಂತಾಗಿ ಶಿವಭಕ್ತರಾದ ವೀರಶೈವರು ಬ್ರಾಹ್ಮಣರು. ಮತ್ತು ಗೌತಮಸ್ಮೃತಿಯಲ್ಲಿ—

ಶ್ಲೋ|| ಮುಖೇ ಮಂತ್ರೋಹೃದಿಧ್ಯಾನಂ ಮಸ್ತಕೇ ಲಿಂಗಧಾರಣಂ |
ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣ ಲಕ್ಷಣಂ ||

ಟೀ|| ಮುಖದಲ್ಲಿ ಪಂಚಾಕ್ಷರೀ ಮಂತ್ರವು, ಹೃದಯದಲ್ಲಿ ಶಿವಧ್ಯಾನವು, ಮಸ್ತಕದಲ್ಲಿ ಲಿಂಗಧಾರಣೆಯು, ಮತ್ತು ಶಿಖೆಯು, ಕಂಠದಲ್ಲಿ ರುದ್ರಾಕ್ಷವು, ಲಲಾಟದಲ್ಲಿ ಭಸ್ಮತ್ರಿಪುಂಡ್ರವು ಇವುಗಳೆಲ್ಲವೂ ಬ್ರಾಹ್ಮಣರ ಲಕ್ಷಣವು. ಈ ಸ್ಮೃತಿ ಪ್ರಮಾಣದಿಂದಲೂ 'ಬ್ರಾಹ್ಮಣೋಸ್ಯ ಮುಖಮಾಸೀತ್' ಎಂಬ ಶುಕ್ಲ ಯಜುರ್ವೇದ ವಾಕ್ಯವನ್ನನುಸರಿಸಿ ವಿರಾಡ್ ಬ್ರಹ್ಮನಾದ ಪರಶಿವನ ಪಂಚಮುಖದಿಂದ ಹುಟ್ಟಿದ ಘಂಟಾಕರ್ಣ ಮುಂತಾದ ಪಂಚಾಚಾರ್ಯರ ಗೋತ್ರ ಸೂತ್ರಾನುವರ್ತಿಗಳೂ ಶಿವದೀಕ್ಷಾಸಂಪನ್ನರೂ, ಶಿವಪ್ರಸಾದವನ್ನು ಭುಂಜಿಸುವವರೂ, ಶಿವೈಕಪರಾಯಣರೂ, ಲಿಂಗಧಾರಣ ಮುಂತಾದ ಷಟ್ಕರ್ಮನಿರತರೂ ಆದ ವೀರಶೈವರು ಬ್ರಾಹ್ಮಣರೆಂಬುವದು ವೇದ, ಆಗಮ, ಪುರಾಣ, ಸ್ಮೃತಿ ಮುಂತಾದ್ದರಲ್ಲಿ ಸುಪ್ರಸಿದ್ಧವಾಗಿದೆ.

**೧೫. ಪ್ರ|| ನೀವು ಹೇಳಿದಂತೆ ವೀರಶೈವರು ಬ್ರಾಹ್ಮಣರೆಂದು ಶಾಸ್ತ್ರ ರೂಢಿಯಿದ್ದರೆ ಲೌಕಿಕರೂಢಿಯಲ್ಲಿ ನಿಮಗೆ ಬ್ರಾಹ್ಮಣರೆಂದು ಯಾಕೆ ಪ್ರಚಾರವಿಲ್ಲ ?**

ಉ|| ಒಳ್ಳೇದು, ಲೌಕಿಕರೂಢಿಯನ್ನು ಲಕ್ಷಕ್ಕೆ ತಂದೆಯಾ? ಲೌಕಿಕರೂಢಿಯಲ್ಲಿ ಮದ್ದು ಗುಣಿಕೆಯ ಗಿಡಕ್ಕೆ ಕಾಂಚನವೆಂದು ಹೆಸರೂ, ಕಪ್ಪೆಗೆ ಹರಿಯೆಂಬ ಹೆಸರಾದರೂ

ಹೇಗೆ ಬಂದಿರುವದೋ, ತತ್ವವಾದಿಗಳಲ್ಲದವರಿಗೆ ತತ್ವವಾದಿಗಳೆಂಬುವವಾದರೂ ಹೇಗೋ, ಹಾಗೆಯೇ ಶಿವಜ್ಞಾನ ರಹಿತರಾದವರಿಗೆ ಬ್ರಾಹ್ಮಣನಾಮವು ರೂಢಿಯಲ್ಲಿ ಬಂದಿದ್ದರೂ ಆ ನಾಮವು 'ಹೆಸರಿಗೆ ಹಾಲಪ್ಪಾ ಕುಡಿಯಲಿಕ್ಕೆ ಮಜ್ಜಿಗೆಯಿಲ್ಲ' ಎನ್ನುವ ಲೋಕಗಾಥೆಯಂತೆ ಹಾಸ್ಯಾಸ್ಪದವಾಗದಿರಲಾರದು. ಆದರೆ ರಾಜನಾಮಾಂಕಿತ ಪುರುಷನು ಆ ನಾಮಮಾತ್ರಕ್ಕೆ ಯೋಗ್ಯನಾಗಿ, ಆ ರಾಜಪಟ್ಟಾಭಿಷೇಕಕ್ಕೆ ಯೋಗ್ಯನಾಗಲಾರನೋ, ಹಾಗೆ ಶಿವಭಕ್ತವಾಚಕನಾದ ಬ್ರಾಹ್ಮಣ ನಾಮವು ಶಿವಭಕ್ತಹೀನರಿಗೆ ಶಬ್ದಮಾತ್ರವೇ ಇರುವದು. 'ತತ್ಪರಬ್ರಹ್ಮಸಏಕೋರುದ್ರಸ್ಸ ಭಗವಾನ್ ಮಹೇಶ್ವರಸ್ಸಮಹಾದೇವಃ' ಎಂಬ ವೇದೋಕ್ತಿಯಂತೆ ಶಿವನೇ ಪರಬ್ರಹ್ಮವು. ಬ್ರಹ್ಮಾಚರತಿ ಬ್ರಾಹ್ಮಣಃ' ಆ ಶಿವಭಕ್ತನೇ ಮನುಷ್ಯರಲ್ಲಿ ಬ್ರಾಹ್ಮಣನು. ಇವೇ ಮುಂತಾದ ವೇದಾಗಮಾದಿ ಪ್ರಮಾಣಗಳಿಂದ ಶಾಸ್ತ್ರದಲ್ಲಿ ವಿದ್ವದ್ರೂಢಿಯಿಂದ ಶಿವಭಕ್ತರಿಗೆ ಬ್ರಾಹ್ಮಣತ್ವವು ಪ್ರಸಿದ್ಧವಿದ್ದರೂ ಈಗಿನ ಸ್ಥಿತಿಯಲ್ಲಿ ವೀರಶೈವ ಜನರು ತಮ್ಮ ಕೃಷಿ ವಾಣಿಜ್ಯಾದಿ ವೃತ್ತಿಯನ್ನೇ ಜಾತಿಯನ್ನಾಗಿ ಹೇಳುವರು. ಆದರೆ ಮುಂಗೈಯಲ್ಲಿ ಮಣಿಮಯವಾದ ಕನ್ನಡಿ ಯಿರಲು ಬೇರೆ ಕನ್ನಡಿಯನ್ನು ತೋರಿಸುವ ಶ್ರಮವೇತಕ್ಕೆ ಎನ್ನುವಂತೆ ವೀರಶೈವರ ಬ್ರಾಹ್ಮಣ್ಯವು ವಿದ್ವದ್ರೂಢಿಯಿಂದ ಶಾಸ್ತ್ರದಲ್ಲಿ ಪ್ರಸಿದ್ಧವಿದ್ದು ಲೌಕಿಕ ರೂಢಿಯನ್ನು ತೋರಿಸುವಿರಾದರೂ ಅಪ್ರಾಸಂಗಿಕವು.

೧೯. ಪ್ರ॥ 'ವೀರಶೈವೀಯಸಮಯಾಆತ್ಮಾ ಶ್ರಮಪುರಸ್ಸರಾಃ' ಎಂಬಂತೆ ಶಿವಭಕ್ತರು ಸ್ವಾಭಾವಿಕವಾಗಿ ಜಾತಿ, ವರ್ಣ, ಆಶ್ರಮಗಳನ್ನು ಮೀರಿದವರೆಂದು ಹೇಳುತ್ತಿದ್ದು ಬ್ರಾಹ್ಮಣರೆಂದರೆ ಪರಸ್ಪರ ವಾಕ್ಯಕ್ಕೆ ವಿರೋಧವುಂಟಾಗುವದಲ್ಲವೇ ? ಇದಕ್ಕೆ ಸಮಾಧಾನವೇನು ?

ಉ॥ 'ತ್ವಂದೇವೇಷುಬ್ರಾಹ್ಮಣೋಽಸಿ' ಎಂಬ ಸಾಮವೇದದ ಪ್ರಸದಮಂತ್ರವೇ ಮುಂತಾಗಿ ವೇದಾಗಮಪುರಾಣಾದಿಗಳಲ್ಲಿ ಸುಪ್ರಸಿದ್ಧವಾಗಿ ದೇವಮಧ್ಯದಲ್ಲಿ ಶಿವನು ಬ್ರಾಹ್ಮಣನಾದರೂ ಬ್ರಾಹ್ಮಣತ್ವಾಭಿಮಾನವನ್ನು ಬಿಟ್ಟು ಮಾದಾರಚನ್ನನೆಂಬ ಭಕ್ತನೊಡನೆ ಉಂಡನು ; ಕಣ್ಣಪ್ಪನ ಪ್ರಸಾದವನ್ನು ಸ್ವೀಕರಿಸಿದನು. ಈ ಮೇರೆಗೆ ನಾನಾಪ್ರಯತ್ನದಿಂದ ಶಿವನು ತನ್ನ ಭಕ್ತರನ್ನು ಅನುಸರಿಸುತ್ತಾನೆ, 'ತದ್ಭಕ್ತೋನೃಷು ಬ್ರಾಹ್ಮಣಃ' ಎನ್ನುವಂತೆ ಆತನ ಭಕ್ತರಾದ ಬಸವೇಶ್ವರಾದಿ ಪ್ರಮಥಪುಂಗವರು ಬ್ರಾಹ್ಮಣರಾಗಿದ್ದರೂ ಜಾತಿಯ ಅಭಿಮಾನವನ್ನು ಬಿಟ್ಟು 'ಮದ್ಭಕ್ತೋಽಹಮಮಾಧಿಕಃ' ಎಂಬ ಆಗಮದಲ್ಲಿಯ ಶಿವವಚನವನ್ನು ಅಂಗೀಕರಿಸಿ, ಶಿವನಾಗಮಾರ್ಯ, ಕಕ್ಕಾರ್ಯ, ಮಾದಾರದೂಡಾರ್ಯ ಮೊದಲಾದ ಶಿವಭಕ್ತಮಹಿಮರ ಪ್ರಸಾದಸ್ವೀಕಾರವನ್ನು ಮಾಡಿರುವರು. ಕಾರಣ, ವೀರಶೈವರು ಪ್ರಾಕೃತಜಾತಿಯಿಂದ ಬ್ರಾಹ್ಮಣರೆನಿಸದೆ 'ಬ್ರಹ್ಮಜ್ಞಾನೇನ ಬ್ರಾಹ್ಮಣಃ' ಎಂಬುಕ್ತಿಯಂತೆ ಪರಬ್ರಹ್ಮವಾದ ಶಿವಜ್ಞಾನದಿಂದ ಬ್ರಾಹ್ಮಣರೆನ್ನುವದು ಸರ್ವಸಮ್ಮತವು. ಬಹಳ ವಿಸ್ತಾರದಿಂದೇನು ? ಭೂಮಿಯಲ್ಲಿ ಕ್ರಿಮಿಗಳಿಗಿಂತಲೂ ಕೀಟಗಳು ಬುದ್ಧಿಯಿಂದ ಹೆಚ್ಚೆನಿಸಿರುವವು ; ಅವುಗಳಿಗಿಂತಲೂ ಪಕ್ಷಿಗಳು; ಅವುಗಳಿಗಿಂತಲೂ ಪಶುಗಳು ; ಅವುಗಳಿಗಿಂತ ಮನುಷ್ಯರು; ಅವರುಗಳಿಗಿಂತ ಉಪನಯನವನ್ನು ಹೊಂದಿರುವರು. ಅವರಿಗಿಂತ ವೇದಾಧ್ಯಯನವನ್ನು ಮಾಡಿದವರು; ಅವರಿಗಿಂತ ಯಜ್ಞವಿಧಾನವನ್ನು ಬಲ್ಲವರು; ಅವರಿಗಿಂತ ಯಜ್ಞವನ್ನು ಮಾಡಿದವರು; ಅವರೊಳಗೆ ಸನ್ಯಾಸಿಗಳು; ಅವರಿಗಿಂತ ಸಹಜಜ್ಞಾನವುಳ್ಳವರು; ಅವರಿಗಿಂತ ಶಿವಪೂಜಕರು; ಅವರಿಗಿಂತ ಲಿಂಗಾಂಗಿಗಳು; ಅವರೊಳಗೆ ಭಕ್ತಾದಿ ಐಕ್ಯಾಂತವಾದ ಷಟ್‌ಸ್ಥಲಗಳಲ್ಲಿ ಜ್ಞಾನವುಳ್ಳ ನಿರಾಭಾರಿಯು. ಆ ನಿರಾಭಾರಿಯಾದ ಜಂಗಮಮೂರ್ತಿಯೇ ವಂದಿಸಿಕೊಳ್ಳುವದಕ್ಕೂ ಪೂಜಿಸಿಕೊಳ್ಳುವುದಕ್ಕೂ ಯೋಗ್ಯನು. ಎಲೈ ಷಣ್ಮುಖನೇ, ಆ ನಿರಾಭಾರಿ ಜಂಗಮಮೂರ್ತಿಯ ಮಹತ್ವವನ್ನು ಬಹಳವಾಗಿ ಹೇಳುವದರಿಂದ ಪ್ರಯೋಜನವೇನು? ಆತನೇ ನಾನಾಗಿರುವೆನೆಂದು ಶಿವನು ಷಣ್ಮುಖನಿಗೆ ಹೇಳಿರುವನು. ಇದಕ್ಕೆ ಪ್ರಮಾಣ:—ಸ್ಕಾಂದಪುರಾಣದಲ್ಲಿ—

ಶ್ಲೋ॥ ಕ್ರಿಮಿಕೀಟಪತಂಗೇಭ್ಯಃಪಶವಃಪ್ರಜ್ಞಯಾಧಿಕಾಃ।
ಪಶುಭ್ಯೋಪಿನರಾಶ್ಶ್ರೇಷ್ಠಾಸ್ತೇಷುಶ್ರೇಷ್ಠಾದ್ವಿಜಾತಯಃ॥
ದ್ವಿಜಾತಿಷ್ವಧಿಕಾವಿಪ್ರಾವಿಪ್ರೇಷುಕ್ರತುಬುದ್ಧಯಃ।
ಕ್ರತುಬುದ್ಧಿಷುಕರ್ತಾರಸ್ತೇಭ್ಯಸ್ಸನ್ಯಾಸಿನೋಽಧಿಕಾಃ॥
ತೇಭ್ಯೋವಿಜ್ಞಾನಿನಃಶ್ರೇಷ್ಠಾಸ್ತೇಷುಶಂಕರಪೂಜಕಾಃ।
ತೇಷುಶ್ರೇಷ್ಠಾಮಹಾಭಾಗಮಮಲಿಂಗಾಂಗಸಂಗಿನಃ॥
ಲಿಂಗಾಂಗಸಂಗಿಷ್ವಧಿಕಃಷಟ್ಸ್ಥಲಜ್ಞಾನವಾನ್‌ಪುಮಾನ್।
ಸವಂದ್ಯಸ್ಸರ್ವದಾಪೂಜ್ಯಸ್ಸಂಸಾರವಿಜಿಗೀಷುಭಿಃ।
ಬಹುದೋಕ್ತೇನಕಿಂವತ್ಸಸಏವಾಯಂನಸಂಶಯಃ॥

ಇದರಿಂದಲೂ ಮತ್ತು—

ಶ್ಲೋ॥ ಅಷ್ಟಾದಶಾನಾಂವರ್ಣಾನಾಂಶ್ರೇಷ್ಠೋಮಾಹೇಶ್ವರೋ ಜನಃ॥

ಹದಿನೆಂಟು ಪ್ರಕಾರದ ಜಾತಿಗಳ ಮಧ್ಯದಲ್ಲಿ ಮಾಹೇಶ್ವರ ಜನವೇ ಶ್ರೇಷ್ಠವು. ಇವೇ ಮುಂತಾದ ವಚನಪ್ರಾಮಾಣ್ಯದದೆಸೆಯಿಂದಲೂ ಪ್ರಾಣಿಗಳ ಮತ್ತು ವರ್ಣಗಳ ತಾರತಮ್ಯದಲ್ಲಿಯಾದರೂ ಮಾಹೇಶ್ವರ ಮುಂತಾದ ಪದವಾಚ್ಯರಾದ ವೀರಶೈವರಿಗೇನೇ ಸರ್ವೋತ್ಕೃಷ್ಟವಾದ ಅಪ್ರಾಕೃತ ಬ್ರಾಹ್ಮಣ್ಯವೆಂಬುದು ಸಿದ್ಧಾಂತವು.

# ವೀರಶೈವ ಪಂಚಪೀಠಗಳು.

ವೀರಶೈವ ಮತವು ವೈದಿಕವೂ ಅನಾದಿಯೂ ಆದದ್ದು ಎಂಬುದಕ್ಕೆ ಆ ಮತವನ್ನು ಲೋಕದಲ್ಲಿ ಸ್ಥಾಪಿಸಿದ ಪೂರ್ವಾಚಾರ್ಯರ ಚರಿತ್ರೆಗಳೇ ಪ್ರಮಾಣಗಳಾಗಿವೆ. ವೀರಶೈವಾಗಮಗಳರೀತ್ಯಾ ಈ ಆಚಾರ್ಯರು ಐವರು. ಆದುದರಿಂದಲೇ ಅವರಿಗೆ ಪಂಚಾಚಾರ್ಯರೆಂದೂ, ಅವರು ಸ್ಥಾಪಿಸಿದ ಗುರುಪೀಠಗಳಿಗೆ ಪಂಚಾಚಾರ್ಯ ಪೀಠಗಳು ಅಥವಾ ಪಂಚಸಿಂಹಾಸನಗಳು ಎಂದೂ ಶಾಸ್ತ್ರಗಳಲ್ಲಿಯೂ ಲೋಕದಲ್ಲಿಯೂ ಪ್ರಸಿದ್ಧಿಯಿರುವುದು.

ಈ ಆಚಾರ್ಯರಕಾಲವು ಅತ್ಯಂತಪ್ರಾಚೀನವಾದುದಾಗಿರುತ್ತೆ. ಇವರು ನಾಲ್ಕು ಯುಗಗಳಲ್ಲಿಯೂ ಬೇರೆ ಬೇರೆ ನಾಮಗಳಿಂದ ಅವತರಿಸಿ ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿದರು. ಈ ವಿಷಯವು ಶಿವಾಗಮಗಳಲ್ಲಿ ಈರೀತಿಯಾಗಿ ಉಲ್ಲೇಖಿಸಲ್ಪಟ್ಟದೆ:—

"ಏಕಾಕ್ಷರೋದ್ವ್ಯಕ್ಷರಶ್ಚ ತ್ರ್ಯಕ್ಷರಶ್ಚತುರಕ್ಷರಃ |
ಪಂಚಾಕ್ಷರಃಕೃತಯುಗೇ ಪಂಚನಾಮಾನಿ ಪಾರ್ವತಿ||
ಏಕವಕ್ತ್ರೋದ್ವಿವಕ್ತ್ರಶ್ಚ ತ್ರಿವಕ್ತ್ರಶ್ಚತುರಾನನಃ |
ಪಂಚವಕ್ತ್ರಶ್ಚ ತ್ರೇತಾಯಾಂ ಪಂಚನಾಮಾನಿಪಾರ್ವತಿ||
ರೇಣುಕೋದಾರುಕಶ್ಚೈವ ಘಂಟಾಕರ್ಣಶ್ಚ ಧೇನುಕಃ |
ವಿಶ್ವಕರ್ಣೇತಿನಾಮಾನಿ ದ್ವಾಪರೇ ಮೇನಕಾತ್ಮಜೇ ||
ರೇವಣೋಮರುಲಶ್ಚೈಕೋರಾಮಃ ಪಂಡಿತಏವಚ |
ವಿಶ್ವಾರಾಧ್ಯೇತಿನಾಮಾನಿ ಕಲೌ ಪರ್ವತನಂದಿನೀ"
[ಸುಪ್ರಬೋಧಾಗಮ]

"ಶ್ರೀಮದ್ರೇವಣಸಿದ್ಧಸ್ಯ ಕೊಲ್ಲಿಪಾಕಿ ಪುರೋತ್ತಮೆ |
ಸೋಮೇಶಲಿಂಗಾಜ್ಜನನ ಮಾವಾಸಂ ಕದಲೀಪುರೇ ||
ತದ್ವನ್ಮರುಲಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ |
ಸಿದ್ಧೇಶಲಿಂಗಾಜ್ಜನನಂ ಸ್ಥಾನಮುಜ್ಜಯಿನೀಪುರೇ ||
ದ್ರಾಕ್ಷಾರಾಮಾಖ್ಯಸುಕ್ಷೇತ್ರೇರಾಮನಾಥಾಖ್ಯಲಿಂಗತಃ
ಏಕೋರಾಮಸ್ಯ ಜನನಮಾವಾಸಸ್ತು ಹಿಮಾಲಯೇ ||
ಕಾಶ್ಯಾಂ ವಿಶ್ವೇಶ್ವರೇಲಿಂಗೇ ವಿಶ್ವಾರಾಧ್ಯಸ್ಯಸಂಭವಃ|
ಸ್ಥಾನಂ ಶ್ರೀ ಕಾಶಿಕಾಕ್ಷೇತ್ರೇಶೃಣುಪಾರ್ವತಿಸಾದರಂ||
ಕೃತಾದ್ಯುಗಚತುಷ್ಕೇತೇ ಪಂಚಾರಾಧ್ಯಾಯಥಾವಿಧಿ |
ಮಮ ಲಿಂಗಮುಖೋದ್ಭೂತಾ ಲೋಕವಿಶ್ರುತಕೀರ್ತಯಃ || [ಸ್ವಯಂಭುವಾಗಮ]

ಶ್ರೀಮತ್ಪಂಚಾಚಾರ್ಯರು ಕೃತಯುಗದಲ್ಲಿ ಏಕಾಕ್ಷರ ಶಿವಾಚಾರ್ಯ, ದ್ವ್ಯಕ್ಷರ ಶಿವಾಚಾರ್ಯ, ತ್ರ್ಯಕ್ಷರ ಶಿವಾಚಾರ್ಯ, ಚತುರಕ್ಷರ ಶಿವಾಚಾರ್ಯ, ಪಂಚಾಕ್ಷರ ಶಿವಾಚಾರ್ಯ ಎಂಬ ಹೆಸರುಗಳನ್ನು ಧರಿಸಿ ಅವತರಿಸಿದರು; ತ್ರೇತಾಯುಗದಲ್ಲಿ ಏಕವಕ್ತ್ರ ಶಿವಾಚಾರ್ಯ, ದ್ವಿವಕ್ತ್ರ ಶಿವಾಚಾರ್ಯ, ತ್ರಿವಕ್ತ್ರ ಶಿವಾಚಾರ್ಯ, ಚತುರ್ವಕ್ತ್ರ ಶಿವಾಚಾರ್ಯ, ಪಂಚವಕ್ತ್ರ ಶಿವಾಚಾರ್ಯರೆಂಬ ಹೆಸರುಗಳನ್ನು ಧರಿಸಿಕೊಂಡು ಅವತರಿಸಿದರು; ದ್ವಾಪರಯುಗದಲ್ಲಿ ರೇಣುಕ ಶಿವಾಚಾರ್ಯ, ದಾರುಕಶಿವಾಚಾರ್ಯ, ಘಂಟಾಕರ್ಣ ಶಿವಾಚಾರ್ಯ, ಧೇನುಕಕರ್ಣ ಶಿವಾಚಾರ್ಯ, ವಿಶ್ವಕರ್ಣ ಶಿವಾಚಾರ್ಯರೆಂಬ ಹೆಸರುಗಳನ್ನು ಧರಿಸಿ ಅವತರಿಸಿದರು; ಕಲಿಯುಗದಲ್ಲಿ ರೇವಣಸಿದ್ಧ ಶಿವಾಚಾರ್ಯ, ಮರುಲಸಿದ್ಧ ಶಿವಾಚಾರ್ಯ, ಏಕೋರಾಮ ಶಿವಾಚಾರ್ಯ, ಪಂಡಿತಾರಾಧ್ಯ ಶಿವಾಚಾರ್ಯ, ವಿಶ್ವಾರಾಧ್ಯ ಶಿವಾಚಾರ್ಯರೆಂಬ ಹೆಸರುಗಳನ್ನು ಧರಿಸಿಕೊಂಡು ಅವತರಿಸಿದರು. ನಾಲ್ಕು ಯುಗಗಳಲ್ಲಿಯೂ ಕೊಲ್ಲಿಪಾಕಿ, ಸೋಮನಾಥ, ವಟವೃಕ್ಷ ಸಿದ್ಧೇಶ್ವರ, ಕೇದಾರ ಕ್ಷೇತ್ರದ ರಾಮನಾಥ, ಶ್ರೀಶೈಲ ಮಲ್ಲಿಕಾರ್ಜುನ, ಕಾಶೀ ವಿಶ್ವನಾಥ ಈ ಲಿಂಗಗಳಲ್ಲಿ ಅವರು ಅವತರಿಸಿದರು. ಹಾಗೂ ಈ ಮತದ ಪರಿಪಾಲನಕ್ಕೋಸ್ಕರ ರಂಭಾಪುರೀ, ಉಜ್ಜಯಿನೀ, ಹಿಮಾಲಯ, ಶ್ರೀ ಶೈಲ, ಕಾಶೀಕ್ಷೇತ್ರಗಳಲ್ಲಿ ಧರ್ಮಪೀಠಗಳನ್ನು ಸ್ಥಾಪಿಸಿದರು ("ಸುಪ್ರಬೋಧಾಗಮ" "ಸ್ವಯಂಭುವಾಗಮ")

ಈ ಮೊದಲಾದ ಪ್ರಮಾಣಗಳು ಆಗಮಾದಿಗಳಲ್ಲಿ ದೊರೆಯುವುದರಿಂದ ಆಚಾರ್ಯರ ಕಾಲವು ಆಗಮಗಳ ಕಾಲಕ್ಕಿಂತಲೂ ಹಿಂದಿನದಾಗಿರಬೇಕು. ಹಾಗೆಯೇ ಅವರು ಭೂಲೋಕದಲ್ಲಿ ಸ್ಥಾಪಿಸಿದ ಮತದ ಕಾಲವಾದರೂ ಅತಿಪ್ರಾಚೀನವೇ ಆಯಿತು:

ಈ ಬಗ್ಗೆ ಅನೇಕ ವೈದಿಕ ಆಧಾರಗಳಲ್ಲದೆ ಚಾರಿತ್ರಿಕ (ಐತಿಹಾಸಿಕ) ಆಧಾರಗಳೂ ಬಹಳವಾಗಿ ದೊರೆಯುವುವು. ಆ ಚಾರಿತ್ರಿಕ ಆಧಾರಗಳೆಲ್ಲವನ್ನೂ ಉಲ್ಲೇಖಿಸುವುದೆಂದರೆ ಅದೇ ಒಂದು ಪ್ರತ್ಯೇಕ ಗ್ರಂಥದ ವಿಷಯವು. ಪ್ರಕೃತದಲ್ಲಿ ಆಯಾ ಪೀಠದ ಸಂಬಂಧವಾದ ಕೆಲವು ವಿಷಯಗಳನ್ನು ಮಾತ್ರ ಈ ಕೆಳಗೆ ಉಲ್ಲೇಖಿಸಿದೆ.

## ಶ್ರೀ ರಂಭಾಪುರೀ ಸಂಸ್ಥಾನ.

ಈ ಪೀಠವು ಮೈಸೂರು ದೇಶದ ಕಡೂರು ಡಿ|| ನರಸಿಂಹರಾಜಪುರದ ತಾ|| ರಂಭಾಪುರಿ (ಬಾಳೆಹೊನ್ನೂರು) ಎಂಬೆಡೆಯಲ್ಲಿ ವಿರಾಜಮಾನವಾಗಿದೆ. ಈ ಮಠದ ಆದಿಗುರುಗಳೂ, ವೀರಶೈವ ಮತಸ್ಥಾಪನಾಚಾರ್ಯರಲ್ಲಿ ಅತ್ಯಂತ ಪ್ರಸಿದ್ಧರೂ ಆದ ಶ್ರೀ ಜಗದ್ಗುರು ರೇಣುಕ ಶಿವಾಚಾರ್ಯರು ಕೊಲ್ಲಿಪಾಕಿ ಶ್ರೀ ಸೋಮೇಶ್ವರಲಿಂಗದಿಂದ ಅವತರಿಸಿ ಮಲಯಾದ್ರಿಯ ಮಧ್ಯದಲ್ಲಿ ತಮ್ಮ ಪೀಠವನ್ನು ಸ್ಥಾಪಿಸಿದರು. ಇವರು ಲೋಕ ಪ್ರಸಿದ್ಧನಾದ ಅಗಸ್ತ್ಯಮಹರ್ಷಿಗೆ ಷಟ್‌ಸ್ಥಲಮಾರ್ಗವನ್ನು ಉಪದೇಶಿಸಿ, ಅವನಿಗೆ ಲಿಂಗಧಾರಣೆ ಮಾಡಿದರೆಂಬದಕ್ಕೆ ಸಾಕಾದಷ್ಟು ಕಾರಣಗಳಿವೆ. ಇವರು ಪೂರ್ವಸಮುದ್ರತೀರದಲ್ಲಿರುವ ರಾಮೇಶ್ವರದಲ್ಲಿ ಕೆಲಕಾಲವಿದ್ದು, ಬಳಿಕ ಚೋಳ ದೇಶದ ರಾಜಧಾನಿಯಾದ ಕಾಂಚೀನಗರಕ್ಕೆ ಬಂದು, ಅನೇಕ ಮಹತ್ವಗಳನ್ನು ತೋರಿಸಿ, ಶಿವಧರ್ಮವನ್ನು ದೃಢಗೊಳಿಸಿದರು. ತದನಂತರ ಲಂಕೆಗೆ ಹೋಗಿ ಲಂಕಾಧಿಪತಿಯಾದ ವಿಭೀಷಣನ ಪ್ರಾರ್ಥನಾನುಸಾರವಾಗಿ ಏಕಕಾಲದಲ್ಲಿಯೇ ಮೂರು ಕೋಟ ಲಿಂಗರೂಪಗಳನ್ನು ಧಾರಣಮಾಡಿ ಅವನ ಸಂಕಲ್ಪವನ್ನು ಪೂರೈಸಿದರು. ಅದೇ ಪ್ರಕಾರ ಅನಂತ ಲೀಲೆಗಳನ್ನು ತೋರಿಸುತ್ತಾ ಪಂಪಾ, ಶ್ರೀಶೈಲ, ಕಾಶೀ, ಹಿಮಾಲಯ ಮುಂತಾದ ಕ್ಷೇತ್ರಗಳನ್ನು ತಮ್ಮ ದರ್ಶನದಿಂದ ಪುನೀತಮಾಡಿ ಕೊನೆಗೆ ತಮ್ಮ ಮಹಿಮಾಪ್ರಭಾವದಿಂದ ರುದ್ರಮುನೀಶ್ವರನೆಂಬ ತೇಜೋಮಯ ಗುರುಮೂರ್ತಿಯನ್ನು ಭೂಗರ್ಭದಿಂದವತಾರಮಾಡಿಸಿ, ತಮ್ಮ ಅಧಿಕಾರವನ್ನವರಿಗೊಪ್ಪಿಸಿ, ತಾವು ಮತ್ತೆ ಕೊಲ್ಲಿಪಾಕಿಯ ಸೋಮನಾಥ ಲಿಂಗದಲ್ಲಿ ಐಕ್ಯವಾದರು. ಈ ವಿಷಯವು ಅನೇಕ ಗ್ರಂಥಗಳಲ್ಲಿ ಉಲ್ಲೇಖವಾಗಿದೆ. ಈ ರುದ್ರಮುನೀಶ್ವರರ ತರುವಾಯ ಮುಕ್ತಿಮುನೀಶ್ವರ ಶಿವಾಚಾರ್ಯರು, ದಿಗಂಬರಮುನೀಶ್ವರ ಶಿವಾಚಾರ್ಯರು ಇವರೇ ಮೊದಲಾಗಿ ೧೧೮ ಮಂದಿ ಸ್ವಾಮಿಗಳಾಗಿರುತ್ತಾರೆ. ಶ್ರೀ ರೇಣುಕ ಶಿವಾಚಾರ್ಯರು ಬ್ರಹ್ಮಸೂತ್ರಗಳಿಗೂ ಶಿವಸೂತ್ರಗಳಿಗೂ ಭಾಷ್ಯಗಳನ್ನು ಬರೆದಿರುವ ವಿಷಯವು ಅನೇಕ ಗ್ರಂಥಗಳಿಂದ ತಿಳಿಯಬರುತ್ತದೆ. ಈ ಪೀಠದಲ್ಲಿ ಅತ್ಯಂತ ಪ್ರಾಚೀನವಾದ ನಾಲ್ಕಾರು ಶಿಲಾಶಾಸನಗಳು ಉಪಲಬ್ಧವಿದ್ದು, ಅದರಲ್ಲೊಂದು ಶಾಸನವು ಶ್ರೀರಾಮರಕಾಲದ್ದಿರಬಹುದೆಂದು ಅದರಲ್ಲಿರುವ ಕೆಲವು ಚಿಹ್ನೆಗಳಿಂದ ಕಂಡುಬರುತ್ತದೆ. ಹಾಗೂ ಸುಮಾರು ೧೨೦೦ ವರ್ಷಗಳ ಪೂರ್ವದ ಒಂದು ತಾಮ್ರಶಾಸನವನ್ನು ಮೈಸೂರು ಗೌವರ್ನಮೆಂಟ್ ಓರಿಯಂಟಲ್ ಲೈಬ್ರರಿಯ ಆರ್ಚಲಾಜಿಕಲ್ ಡಿಪಾರ್ಟ್‌ಮೆಂಟಿನವರು ಶೋಧನೆಯ ನಿಮಿತ್ತವಾಗಿ ಮಠದಿಂದ ತೆಗೆದುಕೊಂಡಿರುತ್ತಾರೆ. ಶಾಸನವು ತಮಿಳು ಭಾಷೆಯಲ್ಲಿರುವುದು. ಇದರ ವಿಷಯದಲ್ಲಿನ ಶೋಧಗಳನ್ನೂ ವಿವರವನ್ನೂ ಸರಕಾರದವರೇ ಪ್ರಕಟಿಸಲಿರುವರು.

ಈ ಪೀಠವು ಅತ್ಯಂತ ಘೋರಾರಣ್ಯದಲ್ಲಿರುತ್ತದೆ. ಈ ಪೀಠವಿರುವ ಸ್ಥಾನಕ್ಕೆ ಈಗಲೂ ಮಲಯಪರ್ವತವೆಂಬ ಹೆಸರು ಪ್ರಸಿದ್ಧವಿದೆ. ಪೀಠಕ್ಕೆ ಸಮೀಪದಲ್ಲಿಯೇ ಅಗಸ್ತ್ಯಮಹರ್ಷಿಗಳ ಆಶ್ರಮವೂ ಇರುವುದು.

ಈ ಪೀಠಾಧೀಶ್ವರರಿಂದ ಪ್ರಸಿದ್ಧರಾದ ಶ್ರೀ ಶಂಕರಾಚಾರ್ಯರಿಗೆ ಚಂದ್ರಮೌಳೀಶ್ವರಲಿಂಗವು ಪ್ರಾಪ್ತವಾಯಿತೆಂಬ ವಿಷಯದಲ್ಲಿ ಅನೇಕ ಉಲ್ಲೇಖನಗಳಿದ್ದು ಈ ವಿಷಯವನ್ನೇ ತೋರಿಸುವ ಲಿಂಗಪ್ರದಾನರೂಪವಾದ ಒಂದು ಶಿಲಾಚಿತ್ರವೂ ಕೂಡಾ ಸದ್ಯ ಮಠದಲ್ಲಿ ವಿರಾಜಮಾನವಾಗಿರುವುದು.

ಈ ಪೀಠವು ಪೂರ್ವದಲ್ಲಿ ಈಗಿರುವ ಸ್ಥಾನದಲ್ಲಿರದೆ ಬೇರೆ ಸ್ಥಾನದಲ್ಲಿತ್ತು. ಕೆಳದಿಯ ಅರಸರಲ್ಲೊಬ್ಬನಾದ ಬೂದಿಬಸವಪ್ಪನಾಯಕನೆಂಬುವನು ಕಾರಣಾಂತರದಿಂದ ಅದನ್ನು ಸುಡಿಸಿಹಾಕಿದನು. ಗುರುಪೀಠದ ಮೇಲೆ ದ್ರೋಹಮಾಡಿದ್ದಕ್ಕಾಗಿ ಇವನಿಗೆ ಅನೇಕ ತೊಂದರೆಗಳು ಪ್ರಾಪ್ತವಾದವು. ಆಮೇಲೆ ಅವನು ಪಶ್ಚಾತ್ತಾಪಪಟ್ಟು ಮತ್ತೆ ಗುರುಸನ್ನಿಧಿಯನ್ನು ಸೇರಿ ಅವರ ಕ್ಷಮೆಯನ್ನು ಹೊಂದಿ ಸುಖಿಯಾಗಿ, ಈಗಿರುವ ಪೀಠವನ್ನು ತಾನೇ ಕಟ್ಟಿಸಿಕೊಟ್ಟಿರುತ್ತಾನೆ. ಈ ಬಗ್ಗೆ ಸಂಸ್ಥಾನದಲ್ಲಿ ಅನೇಕ ಆಧಾರಗಳಿರುವುವು.

ಈ ಪೀಠದ ಅಧಿಕಾರಿಗಳಲ್ಲಿ ಎಷ್ಟೋ ಜನ ಮಹಾತಪಸ್ವಿಗಳಾಗಿಹೋಗಿದ್ದಾರೆ. ಈ ಪೀಠದ ಯೋಗ್ಯತೆಯನ್ನೂ ಮಹತ್ವವನ್ನೂ ತಿಳಿದು ಮೈಸೂರು ಸರಕಾರದವರು ಗೌರವಾಸ್ಪದಗಳಾದ ಅನೇಕ ಬಿರುದು ರಹದಾರಿಗಳನ್ನು ಪೀಠಕ್ಕೆ ದಯಪಾಲಿಸಿರುತ್ತಾರೆ.

# ಶ್ರೀ ಮ ದು ಜ್ಜ ಯಿ ನೀ  ಸ ಂ ಸ್ಥಾ ನ.

ಈ ಸಂಸ್ಥಾನದ ಪ್ರಾಚೀನ ಪೀಠವು ಬಳ್ಳಾರಿಡಿಸ್ಟ್ರಿಕ್ಟು ವಿಖ್ಯಾತರಾದ ಶ್ರೀ ದಾರುಕಾಚಾರ್ಯರು ಸ್ಥಾಪಿಸಿದರು. ಕೊಟ್ಟೂರು ತಾಲ್ಲೋಕಿನಲ್ಲಿರುವುದು. ಈ ಗುರುಪೀಠವನ್ನು ಈ ಪೀಠವು ಅತ್ಯಂತ ಪುರಾತನವಾದದ್ದು. ಈಗಿರುವ ಮಠವು



ಶ್ರೀಮದುಜ್ಜಯಿನಿ ಸಂಸ್ಥಾನದ ಮಹಾದ್ವಾರ

ಕ್ರಿಸ್ತಶಕ ೨ನೇ ಶತಮಾನದಲ್ಲಿದ್ದ ಓರ್ವ ಪಾಂಡ್ಯರಾಜ ಗಳೂ ಕೂಡಾ ಅನೇಕವಾಗಿವೆ. ಈ ಪೀಠದ ಮಹತ್ವದ ನಿಂದ ಕಟ್ಟಿಸಲ್ಪಟ್ಟತೆಂಬುದಕ್ಕೆ ಒಂದು ಶಿಲಾಲೇಖವು ಮತ್ತು ಪ್ರಾಚೀನತ್ವದ ಬಗ್ಗೆ ಪಾಂಡ್ಯರಾಜನ ಶಿಲಾಲೇ ದೊರೆತಿದೆ. ಇತ್ತೀಚಿನ ಶಿಲಾಲೇಖಗಳೂ ತಾಮ್ರಶಾಸನ ಖವೂ ಪೀಠದ ಕಟ್ಟಡವೂ ಸಾಕ್ಷಿಗಳಾಗಿವೆ.



ಶ್ರೀಮದುಜ್ಜಯಿನೀ ಸಂಸ್ಥಾನದ ದೃಶ್ಯ.

## ಶ್ರೀ ಕೇದಾರ ಸಂಸ್ಥಾನ.

ಹಿಮವತ್ಪರ್ವತದ ಕೇದಾರವೆಂಬೆಡೆಯಲ್ಲಿ ಈ ಪ್ರಸಿದ್ಧ ಪೀಠವಿರುವುದು. ಈ ಪೀಠವು ಅತ್ಯಂತ ಮಹತ್ವದ್ದು ಮತ್ತು ಪ್ರಾಚೀನವಾದುದು ಎಂಬುದಕ್ಕೆ ಅನೇಕ ಆಧಾರಗಳಿವೆ. ದ್ವಾಪರಯುಗದಲ್ಲಿದ್ದು ಲೋಕಪ್ರಸಿದ್ಧನಾದ ವ್ಯಾಸಮಹರ್ಷಿಯು ಈ ಪೀಠಸ್ಥಾಪಕರಾದ ಶ್ರೀ ಘಂಟಾಕರ್ಣಶಿವಾಚಾರ್ಯರಿಂದ ಶಿವಸಿದ್ಧಾಂತೋಪದೇಶವನ್ನು ಪಡೆದು ಮುಕ್ತನಾದನು. ಇದನ್ನು ವ್ಯಾಸಮಹರ್ಷಿಯೇ ತನ್ನಿಂದ ರಚಿಸಲ್ಪಟ್ಟ ಸ್ಕಾಂದಪುರಾಣಾಂತರ್ಗತ ಕಾಶೀಕಾಂಡದಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ. ಈ ಪೀಠವು ಪಾಂಡವರ ಕಾಲದಲ್ಲಿತ್ತೆಂಬ ಬಗ್ಗೆ ಅದೇ ಸ್ಕಾಂದಪುರಾಣದ ಕೇದಾರಕಾಂಡದಲ್ಲಿ ಉಲ್ಲೇಖವಿದೆ. ಅಂದ ಮೇಲೆ ಈ ಪೀಠವು ವ್ಯಾಸಮಹರ್ಷಿಗಳ ಕಾಲದಲ್ಲಿ ಅಂದರೆ ದ್ವಾಪರಯುಗದಲ್ಲಿ ಇತ್ತೆಂಬುದು ಸ್ಪಷ್ಟವಾಗುವುದು.

ಸದ್ಯಕ್ಕೆ ಪೀಠದಲ್ಲಿ ೩೦೦ರ ಮೇಲೆ ಸ್ವಾಮಿಗಳ ಪಟ್ಟಾವಳಿಯು ದೊರೆಯುತ್ತಿದೆ. ಒಬ್ಬೊಬ್ಬ ಸ್ವಾಮಿಗಳ ಜೀವಮಾನವನ್ನು ಕಮ್ಮಿಯೆಂದರೆ ೨೦ ವರುಷಗಳೆಂದು ಇಟ್ಟುಕೊಂಡರೂ, ಪೀಠಸ್ಥಾಪನೆಯಾಗಿ ಆರುಸಹಸ್ರ ವರುಷಗಳಾಗಿರಬೇಕೆಂದು ಸಿದ್ಧಿಸುತ್ತದೆ. ಅಲ್ಲದೆ ಈ ಪೀಠದ ಪ್ರಾಚೀನತ್ವದ ಬಗ್ಗೆ ದೇವನಾಗರಿಯಲ್ಲಿ ಬರೆದ ಅನೇಕ ಶಿಲಾಲೇಖನಗಳೂ ತಾಮ್ರಶಾಸನಗಳೂ ಉಪಲಬ್ಧವಿವೆ. ಶ್ರೀಕರಭಾಷ್ಯವನ್ನು ಬರೆದ ಶ್ರೀಪತಿ ಪಂಡಿತನು ಈ ಪೀಠದ ಶಿಷ್ಯನಾಗಿದ್ದನೆಂದು ಆತನು ಬರೆದ ಭಾಷ್ಯದಿಂದಲೇ ಗೊತ್ತಾಗುತ್ತದೆ. ಈ ಪೀಠದಲ್ಲಿ ಕಲಿಯುಗದಾದಿಯಲ್ಲಿ ಅವತಾರಮಾಡಿದ ಏಕೋರಾಮಶಿವಾಚಾರ್ಯರು ಬ್ರಹ್ಮಸೂತ್ರಗಳ ಮೇಲೆ ಅಧಿಕರಣಭಾಷ್ಯವೆಂಬ ಹೆಸರಿನಿಂದ ಶಕ್ತಿವಿಶಿಷ್ಟಾದ್ವೈತ ಬೋಧಕವಾದ ಒಂದು ಭಾಷ್ಯವನ್ನು ಬರೆದಿರುವುದು ಶ್ರೀಕರಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಈ ಪೀಠಕ್ಕೆ ಹಿಮಾಲಯದ ಟೆಹರಿರಾಜ್ಯದ ಮಹಾರಾಜರು ಮುಖ್ಯಶಿಷ್ಯರಾಗಿರುತ್ತಾರೆ. ಅಲ್ಲದೆ ಉದಯಪುರ, ಜಂಬು (ಕಾಶ್ಮೀರ) ಮೊದಲಾದ ೧೧ ಜನ ರಾಜರು ಪ್ರತಿವರುಷ ಕಾಣಿಕೆಯನ್ನು ಅರ್ಪಿಸುತ್ತಾರೆ. ಈಗ್ಗೆ ೫೦ ವರುಷಗಳ ಪೂರ್ವದಲ್ಲಿ ಈಪೀಠಕ್ಕೆ ೯೭೬ ಗ್ರಾಮಗಳು ಜಹಗೀರಾಗಿದ್ದವು. ಇತ್ತೀಚೆಗೆ ೬೩೫ ಗ್ರಾಮಗಳು ಕೈತಪ್ಪಿ, ಈಗ ೧೪೧ ಗ್ರಾಮಗಳು ಮಾತ್ರ ಪೀಠದ ಆಡಳಿತಕ್ಕೆ ಒಳಪಟ್ಟಿರುತ್ತವೆ. ಈ ಪೀಠದ ಮಹಾಸ್ವಾಮಿಗಳು ಟೆಹರಿರಾಜ್ಯದಲ್ಲಿ ಬ್ರಾಹ್ಮಣಾದಿ ಚತುರ್ವರ್ಣಗಳವರಿಗೂ ಬಹಿಷ್ಕಾರಾದಿ ದಂಡನ ಖಂಡನ ಪ್ರಾಯಶ್ಚಿತ್ತಗಳನ್ನು ನಡೆಯಿಸುತ್ತಾರೆ. ಲೋಕಪ್ರಸಿದ್ಧವಾದ ದ್ವಾದಶಜ್ಯೋತಿರ್ಲಿಂಗಗಳಲ್ಲೊಂದಾದ ಕೇದಾರೇಶ್ವರದೇವಾಲಯವು ಈ ಪೀಠದ ಆಧಿಪತ್ಯಕ್ಕೇ ಒಳಪಟ್ಟಿರುತ್ತದೆ. ಬ್ರಿಟಿಷ್ ಸರಕಾರದವರೂ ಸಹಾ ಈ ಪೀಠಕ್ಕೆ ಬಹಳ ಗೌರವವನ್ನು ಕೊಡುತ್ತಿದ್ದಾರೆ. ಹಿಂದೂಸ್ಥಾನದಲ್ಲೆಲ್ಲಾ ಇವರು ಬೇಕಾದಷ್ಟು ಕತ್ತಿ, ಕಠಾರಿ, ಬಂದೂಕು, ರಿವಾಲ್ವರ್ ಮುಂತಾದುವುಗಳನ್ನು ಉಪಯೋಗಿಸಬಹುದೆಂದು ವೈಸ್ರಾಯರವರು ರಹದಾರಿಯನ್ನು ದಯಪಾಲಿಸಿರುತ್ತಾರೆ. ಅಲ್ಲದೆ ಬ್ರಿಟಿಷ್‌ರಾಜ್ಯದಲ್ಲೆಲ್ಲಾ ಅಡ್ಡಪಲ್ಲಕ್ಕಿ ಮೊದಲಾದ ೭೨ ಬಿರುದುಗಳನ್ನು ಉಪಯೋಗಿಸುವ ರಹದಾರಿಯೂ ಉಂಟು.

ಆ ಪ್ರಾಂತದ ಕೆಲಜನ ಸ್ಮಾರ್ತರು ಈ ಪೀಠವನ್ನು ತಮ್ಮ ಸ್ವಾಧೀನಪಡಿಸಿಕೊಳ್ಳಬೇಕೆಂಬ ದುರುದ್ದೇಶದಿಂದ ಈ ಪೀಠವು ವೀರಶೈವರದಲ್ಲವೆಂದೂ, ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟದ್ದೆಂದೂ ವ್ಯಾಜ್ಯವನ್ನು ತಂದಿದ್ದರು. ಈ ವ್ಯಾಜ್ಯವು ಬಹುದಿನ ನಡೆದು ಅಂತ್ಯದಲ್ಲಿ ಅಲಹಾಬಾದ್ ಕೋರ್ಟಿನಲ್ಲಿ ಈ ಪೀಠವು ಶಂಕರಾಚಾರ್ಯರಿಗಿಂತ ಎಷ್ಟೋ ವರುಷಗಳ ಪೂರ್ವದಲ್ಲಿದ್ದುದೆಂದೂ, ಇದು ಜಂಗಮರಿಗೆ ಸೇರಿದ್ದೆಂದೂ ತೀರ್ಮಾನಿಸಿರುತ್ತಾರೆ. ಇದು ವೀರಶೈವ ಮತದ ಪ್ರಾಚೀನತ್ವಕ್ಕೆ ಅತ್ಯಂತ ಮಹತ್ವವಾದ ಆಧಾರವಾಗಿದೆ.

## ಶ್ರೀ ಶ್ರೀಶೈಲ ಸಂಸ್ಥಾನ.

ಈ ಪೀಠವು ಕರ್ನೂಲ್ ಜಿಲ್ಲಾ ನಂದಿಕೊಟಕೂರ ತಾಲ್ಲೋಕಿನ ವಾಯುವ್ಯ ಮೂಲೆಯಲ್ಲಿ ಭಯಂಕರವಾದ ಅರಣ್ಯ ಮಧ್ಯದಲ್ಲಿರುವ ಸಾಲಾಮಲೆ ಪರ್ವತದ ಶಾಖೆಯಲ್ಲಿರುವುದು. ಮಠವಿರುವ ನಾಗಲೂಟಿ ಗ್ರಾಮಕ್ಕೂ ಮಲ್ಲಿಕಾರ್ಜುನ ದೇವಾಲಯವಿರುವ ಪರ್ವತಶಿಖರಕ್ಕೂ ೨೫ ಮೈಲಿಗಳ ಕಾಡುದಾರಿಯಿರುವುದು. ನಾಗಲೂಟಿಯ ಸುತ್ತಲೂ ಮತ್ತು ಪರ್ವತದ ಸಾನುವಿನಲ್ಲಿಯೂ ಅನೇಕಾನೇಕ ಮಂಟಪ, ಮಹಾದ್ವಾರ, ಹಾಳುದೇಗುಲಗಳು ಕಾಣುವದರಿಂದ ಪೂರ್ವದಲ್ಲಿ ಅಲ್ಲೊಂದು ವೈಭವಶಾಲಿಯಾದ ನಗರವಿದ್ದಿರಬೇಕೆಂದು ತೋರುತ್ತದೆ.

ಈ ಗುರುಪೀಠವನ್ನು ಕಲಿಯುಗದ ಆದಿಯಲ್ಲಿ ಶ್ರೀ ಜಗದ್ಗುರು ಪಂಡಿತಾರಾಧ್ಯರು ಶ್ರೀ ಶೈಲಕ್ಷೇತ್ರದಲ್ಲಿ ಸ್ಥಾಪನೆ ಮಾಡಿದರು. ಈ ಆಚಾರ್ಯರು ಅವತರಿಸಿದ ಮಲ್ಲಿಕಾರ್ಜುನ ಲಿಂಗದ ದೇವಾಲಯವು ಅನಾದಿಕಾಲದಿಂದ ಇವರ ಸ್ವಾಧೀನ

ವಲ್ಲಿಯೇ ಇತ್ತು. ಯಾವ ಕಾರಣದಿಂದಲೋ ಈಗ್ಗೆ ೫೦-೬೦ ವರುಷಗಳ ಪೂರ್ವದಲ್ಲಿ ಸ್ಮಾರ್ತಮತೀಯ ಪುಷ್ಪಗಿರಿ ಮಠದವರ ಸ್ವಾಧೀನಕ್ಕೆ ಸೇರಿರುವದು. ಸದ್ಯ ಇದರ ವಿಚಾರವು ಕರ್ನೂಲ್ ಕೋರ್ಟಿನಲ್ಲಿ ನಡೆಯುತ್ತಲಿದೆ.

ಲೋಕಪ್ರಸಿದ್ಧನಾದ ಸಾನಂದಮಹರ್ಷಿಯು ಈ ಪೀಠದ ಶಿಷ್ಯನಾಗಿದ್ದನು. ಈ ವಿಷಯವು ವ್ಯಾಸೋಕ್ತ ಸ್ಕಾಂದ ಪುರಾಣಾಂತರ್ಗತ ಶ್ರೀಶೈಲಕಾಂಡದಲ್ಲಿ ಚನ್ನಾಗಿ ವಿವರಿಸಲ್ಪಟ್ಟದೆ. ಈ ಪೀಠಸ್ಥಾಪಕರಾದ ಜಗದ್ಗುರು ಪಂಡಿತಾರಾಧ್ಯರು ಬ್ರಹ್ಮಸೂತ್ರಗಳ ಮೇಲೂ ಭಾಷ್ಯವನ್ನು ಬರೆದಿದ್ದರೆಂಬುದು, ಬಸವಪಂಡಿತಾರಾಧ್ಯರಿಂದ ಬರೆಯಲ್ಪಟ್ಟ ಉಪನಿಷದ್ಭಾಷ್ಯದಲ್ಲಿ ಉಲ್ಲೇಖಿಸಲ್ಪಟ್ಟದೆ. ಹಾಗೂ ಈ ಪೀಠಪರಂಪರೆಯವರು ಮಹಾನಾರಾಯಣೋಪನಿಷತ್, ಆನಂದವಲ್ಲಿ, ಭೃಗುವಲ್ಲಿ, ಪುರುಷಸೂಕ್ತ ಮೊದಲಾದವುಗಳಿಗೆ ಉತ್ತಮವಾದ ಭಾಷ್ಯಗಳನ್ನು ಬರೆದಿದ್ದಾರೆ. ಈ ಗ್ರಂಥಗಳು ಈಗ್ಗೆ ೬೦ ವರ್ಷಗಳ ಪೂರ್ವ ಆಂಧ್ರಾಕ್ಷರಗಳಿಂದ ಸಂಸ್ಕೃತಭಾಷೆಯಲ್ಲಿ ಮದ್ರಾಸಿನಲ್ಲಿ ಮುದ್ರಿಸಲ್ಪಟ್ಟಿರುವುವು. ಈ ಪೀಠದ ಪ್ರಾಚೀನತ್ವದ ಬಗ್ಗೆ ಶ್ರೀಶೈಲ, ಕಾವಲಿ, ಸಿದ್ಧಾಪುರ ಮೊದಲಾದ ಸ್ಥಾನಗಳಲ್ಲಿ ಶಿಲಾಶಾಸನಗಳು ಹೇರಳವಾಗಿ ದೊರೆಯುತ್ತವೆ.

## ಶ್ರೀ ಕಾಶೀ ಸಂಸ್ಥಾನ.

ಶ್ರೀ ಕಾಶೀಕ್ಷೇತ್ರದಲ್ಲಿರುವ ಜಗದ್ಗುರು ವಿಶ್ವಾರಾಧ್ಯರ ಧರ್ಮಪೀಠವು ಜಂಗಮವಾಡಿ ಮಠವೆಂಬ ಹೆಸರಿನಿಂದ ಪ್ರಸಿದ್ಧವಿರುತ್ತದೆ. ಈ ಪೀಠದ ಸ್ಥಾಪಕರಾದ ವಿಶ್ವಾರಾಧ್ಯರ ಅವತಾರಕ್ಕೆ ಕಾರಣೀಭೂತವಾದ ಶ್ರೀ ವಿಶ್ವನಾಥಲಿಂಗದ ದೇವಾಲಯವು ಸಹಾ ಆರಂಭದಿಂದ ಇವರ ಸ್ವಾಧೀನದಲ್ಲಿತ್ತು. ಔರಂಗಜೇಬನ ಕಾಲದಲ್ಲಿ ಪ್ರಾಚೀನ ವಿಶ್ವನಾಥದೇವಾಲಯವು ನಷ್ಟವಾದುದೇ ಅದು ಇವರ ಕೈ ತಪ್ಪಿ ಹೋಗಲಿಕ್ಕೆ ಕಾರಣವಾಯಿತು. ಈಗಿರತಕ್ಕ ವಿಶ್ವನಾಥದೇವಾಲಯವು ಇಂದೂರು ಸಂಸ್ಥಾನದ ಮಹಾರಾಣಿ ಅಹಲ್ಯಾಬಾಯಿಯವರಿಂದ ನೂತನವಾಗಿ ಕಟ್ಟಿಸಲ್ಪಟ್ಟು ಸ್ಮಾರ್ತರ ವಶಕ್ಕೆ ಕೊಡಲ್ಪಟ್ಟಿತು.

ಈ ಪೀಠದ ಪ್ರಾಚೀನತೆಯ ಬಗ್ಗೆ ಅನೇಕ ದಾನಶಾಸನಗಳು ದೊರೆಯುತ್ತವೆ. ವಿಕ್ರಮ ಸಂವತ್ ೬೩೧ ಕಾರ್ತೀಕ ಶುದ್ಧ ದೇವೋತ್ಥಾನಏಕಾದಶಿಯದಿನ ಮಹಾರಾಜನಾದ ಜಯನಂದನೆಂಬ ನರೇಶನು ಜಂಗಮಪುರವೆಂಬ ಗ್ರಾಮವನ್ನು ಈ ಪೀಠದ ಗೋವುಗಳ ಪರಿಪಾಲನೆಗಾಗಿ ದಾನಕೊಟ್ಟಿರುವ ಶಾಸನವು ಈಗಲೂ ಮಠದಲ್ಲಿದೆ. ಅರ್ಥಾತ್ ಈ ದಾನಶಾಸನವನ್ನು ಕೊಟ್ಟು ಇಂದಿಗೆ ಸುಮಾರು ೧೩೫೨ ವರುಷಗಳಾದವು.

ಈ ಪೀಠದ ಶಾಖಾಮಠವೊಂದು ನೇಪಾಳದ ಭಾಗಗಾಂ ಎಂಬ ಗ್ರಾಮದಲ್ಲಿ ಈಗಲೂ ಇದೆ. ಆ ಮಠದಲ್ಲಿ ವಿಕ್ರಮಸಂವತ್ ೬೯೨ (ಕ್ರಿಸ್ತ ಶಕ ೬೩೯) ನೆಯ ವರ್ಷದ ಜ್ಯೇಷ್ಠ ಶುದ್ಧ ಅಷ್ಟಮಿಯಲ್ಲಿ ಬರೆಯಲ್ಪಟ್ಟ ದೇವನಾಗರೀಲಿಪಿಯ ಒಂದು ಸಂಸ್ಕೃತಶಾಸನವಿರುವುದು. ಈ ಶಿಲಾಶಾಸನದಲ್ಲಿ ಗಂಗಾದೇವಿಯೆಂಬ ಹೆಂಡತಿಯಿಂದಲೂ ತ್ರೈಲೋಕಮಲ್ಲ, ತ್ರಿಭುವನಮಲ್ಲ ಎಂಬಿಬ್ಬರು ಮಕ್ಕಳಿಂದಲೂ ಕೂಡಿದ ವಿಶ್ವಮಲ್ಲನೃಪತಿಯೆಂಬ ನೇಪಾಳದ ಮಹಾರಾಜನು, ತಾನು ಮೊದಲು ಶಿವಭಕ್ತನಿದ್ದು, ಯಾವದೋ ಕಾರಣದಿಂದ ಶಿವಭಕ್ತಿಯಿಂದ ದೂರನಾದೆನೆಂದೂ, ಶ್ರೀ ಮಲ್ಲಿಕಾರ್ಜುನಸ್ವಾಮಿಗಳೆಂಬುವರು ನೇಪಾಳಕ್ಕೆ ದಯಮಾಡಿಸಿ ತನ್ನನ್ನು ಪುನಃ ಶಿವಭಕ್ತನನ್ನಾಗಿ ಮಾಡಿದರೆಂದೂ ಹೇಳಿಕೊಂಡಿರುವನು. ಹಾಗೂ ತನ್ನ ವಂಶದ ಮೂಲಪುರುಷನಾದ ಜಯರುದ್ರಮಲ್ಲದೇವನೆಂಬುವನು ಶಿವಭಕ್ತನಾಗಿದ್ದು ಈ ಮಠದ ವಿನಿಯೋಗಕ್ಕಾಗಿ ಅನೇಕ ಭೂಸ್ಥಿತಿಯನ್ನು ದಾನಕೊಟ್ಟಿದ್ದನೆಂದೂ, ಪುನಃ ತಾನು ಕೂಡ ಇಂತಿಷ್ಟು ಜಮೀನುಗಳನ್ನು ಮಠದ ವಿನಿಯೋಗಕ್ಕಾಗಿ ಅರ್ಪಿಸಿದ್ದೇನೆಂದೂ ಉಲ್ಲೇಖಿಸಿದ್ದಾನೆ. ಈ ಶಿಲಾಶಾಸನವನ್ನು ಬರೆದುಕೊಟ್ಟು ಇಂದಿಗೆ ೧೨೯೩ ವರ್ಷಗಳಾಗುವವು. ಈ ಶಾಸನವನ್ನು ಬರೆದುಕೊಟ್ಟ ವಿಶ್ವಮಲ್ಲನೃಪತಿಯ ಕಾಲವೇ ಇಷ್ಟು ಪ್ರಾಚೀನವಾಗಿರುವಾಗ ಅವನ ಮೂಲಪುರುಷನಾದ ಜಯರುದ್ರಮಲ್ಲ ದೇವನ ಕಾಲವು ಅದಕ್ಕಿಂತ ಅತ್ಯಂತ ಪ್ರಾಚೀನವಾಗಿಯೇ ಇರಬೇಕು. ಸದ್ಯ ನೇಪಾಲದಲ್ಲಿರುವ ಜಂಗಮವಾಡಿ ಮಠವು ಅತ್ಯಂತ ವೈಭವ ಸ್ಥಿತಿಯಲ್ಲಿದೆ.

ಕಾಶಿಯಲ್ಲಿರುವ ಈ ಧರ್ಮಪೀಠಕ್ಕೆ ಅನೇಕ ಹಿಂದೂ ರಾಜರು ದಾನಶಾಸನಗಳನ್ನು ಕೊಟ್ಟಿರುವುದಲ್ಲದೆ, ಮೊಗಲಾಯ ಚಕ್ರವರ್ತಿಗಳಾದ ಬಾಬರ್, ಅಕ್ಬರ್, ಹುಮಾಯೂನ್, ಜಹಂಗೀರ್, ಔರಂಗಜೇಬ ಮೊದಲಾದವರೂ ಸಹಾ ಅನೇಕ ದಾನಶಾಸನಗಳನ್ನು ಬರೆದುಕೊಟ್ಟಿರುವರು. ಇವು ಅರಬ್ಬೀ ಭಾಷೆಯಲ್ಲಿ ಬರೆಯಲ್ಪಟ್ಟಿರುವುವು. ಈ ಮೊಗಲ್ ಚಕ್ರವರ್ತಿಗಳ ೧೫-೨೦ ದಾನಶಾಸನಗಳು ಸದ್ಯದಲ್ಲಿ ಮಠದಲ್ಲಿಯೇ ಇವೆ. ಹಿಂದೂ ಧರ್ಮದ ಪರಮ ವೈರಿಯಾಗಿದ್ದ ಔರಂಗಜೇಬನು ಈ ಪೀಠವನ್ನು ನಾಶಮಾಡುವ ಉದ್ದೇಶದಿಂದ ದಂಡೆತ್ತಿಕೊಂಡು ಬಂದಾಗ, ಶ್ರೀ ಜಗದ್ಗುರು ಮಲ್ಲಿಕಾರ್ಜುನಸ್ವಾಮಿಗಳೆಂಬುವರು ವಿಶೇಷವಾದ ಮಹಿಮೆಯನ್ನು ತೋರಿಸಲು ಔರಂಗಜೇಬನು ಗತಗರ್ವನಾಗಿ ತನಗುಂಟಾದ ಯಾವತ್ತೂ ಪ್ರಾಯಶ್ಚಿತ್ತಗಳನ್ನು ಉಲ್ಲೇಖಿಸಿ ಒಂದು ಶಾಸನವನ್ನು ಬರೆದುಕೊಟ್ಟಿದ್ದಾನೆ. ಅದರಲ್ಲಿರುವ ವಿಷಯವು ಪೀಠದ ಗೌರವಕ್ಕೆ ಅತ್ಯಂತ ಮಹತ್ವದ್ದಾಗಿದೆ.

ಈ ಮಠದಲ್ಲಿರುವ ಗುರುಪೀಠಕ್ಕೆ ಜೋಡಿಸಿರುವ ಶಿಲೆಯು ನಾಲ್ಕು ಸಾವಿರ ವರ್ಷಗಳ ಪೂರ್ವದ್ದೆಂದು ಬ್ರಿಟಿಷ್ ಶಿಲ್ಪಶಾಸ್ತ್ರಜ್ಞರು ಶೋಧಿಸಿ ನಿರ್ಣಯಮಾಡಿದ್ದಾರೆ. ಈ ಪೀಠಕ್ಕೆ ೨೬ ಗ್ರಾಮುಗಳು ಉಂಬಳಿಯಾಗಿರುವುದಲ್ಲದೆ, ಕಾಶೀಕ್ಷೇತ್ರದಲ್ಲಿ ೩೦೦ ಮನೆಗಳಿಂದ ಕೂಡಿದ ಮಾನಸ ಸರೋವರವೂ, ೯೦೦ ಮನೆಗಳಿಂದ ಕೂಡಿದ ಜಂಗಮವಾಡಿ ಮೊಹಲ್ಲೆಯೂ ಉಂಬಳಿಯಾಗಿವೆ.



ಶ್ರೀ ೧೦೮ ಜಗದ್ಗುರು ಶ್ರೀ ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು.

ಈ ಪೀಠದಲ್ಲಿ ಸದ್ಯ ವಿರಾಜಿಸುವ ಮಹಾಸ್ವಾಮಿಗಳ ಗುರುಗಳಾದ ಶ್ರೀ ಜಗದ್ಗುರು ರಾಜೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳವರು ಪರಮ ತಪೋಸಿಧಿಗಳಾಗಿದ್ದುದರಿಂದ ಆಗಿನ ಕಾಲದ ಭಾರತೀಯ ಮುಖಂಡರು ಹಿಂದೂಸ್ಥಾನದ ಯೋಗಿಮಂಡಲದಲ್ಲಿ ಅವರಿಗೆ ಅಗ್ರಸ್ಥಾನವನ್ನು ಕೊಟ್ಟು, ಇವರ ಭಾವಚಿತ್ರವನ್ನು ಯೋಗಿಮಂಡಲದ ಮೊದಲನೇ ಸ್ಥಾನದಲ್ಲಿ ಸೇರಿಸಿದ್ದಾರೆ. ಅಲ್ಲದೆ ೧೯೧೧ ನೆಯ ಇಸ್ವಿಯಲ್ಲಿ ಜಾರ್ಜ ಸಾರ್ವಭೌಮರಿಗೆ ಪಟ್ಟಾಭಿಷೇಕವಾಗುವ ಸಮಯದಲ್ಲಿ ಹಿಂದೂಸ್ಥಾನದಲ್ಲಿ ಪ್ರಸಿದ್ಧಕ್ಷೇತ್ರವೆನಿಸಿರುವ ಕಾಶಿಕ್ಷೇತ್ರದಲ್ಲಿ ಒಬ್ಬ ಮಹನೀಯರ ಉತ್ಸವವಾಗಬೇಕೆಂದು ಇಂಡಿಯಾಸರ್ಕಾರದವರು ನಿಶ್ಚಯಿಸಿದಪ್ರಕಾರ ಕಾಶೀಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧರೆನಿಸಿರುವ ಈ ಪೀಠದಮಹಾಸ್ವಾಮಿಗಳವರ ಉತ್ಸವವನ್ನೇಸರ್ಕಾರದವರು ಅಸಾಧಾರಣವಾದ ವೈಭವದಿಂದ ನೆರವೇರಿಸಿದರು. ಈ ವಿಷಯಗಳು ವೀರಶೈವರಿಗೆ ಕೇವಲ ಗೌರವಾಸ್ಪದವಾದವುಗಳೇ ಸರಿ.

ಕಾಶ್ಯಾಂ ವಿಸ್ತರಿತಂ ಯೇನ ವೀರಶೈವ ಮತಂ ಪರಂ ||
ದಯಾಳುಃಶಿವಯೋಗೀಚ ಸೋಽಯಂ ರಾಜೇಶ್ವರೋಯಮಿಃ ||

# ಪಂಚ ಪೀಠಾಧಿಪತಿಗಳು.

ಶ್ರೀ ೧೦೮ ಜಗದ್ಗುರು ವೀರಸಿಂಹಾಸನಾಧೀಶ್ವರ

## ಶಿವಾನಂದರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳವರು.

ರಂಭಾಪುರೀ ಸಂಸ್ಥಾನ.

ಶ್ರೀ ರಂಭಾಪುರೀ ಸಿಂಹಾಸನವು ಈಗ ಕೆಲವು ವರ್ಷಗಳಿಂದ ಪೀಠಾಧಿಪತಿಗಳಿಲ್ಲದಿದ್ದು ಸುಮಾರು ೨||ವರ್ಷಗಳ ಕೆಳಗೆ ಈ ಸಿಂಹಾಸನಕ್ಕೆ ವಟುಗಳನ್ನು ಆರಿಸುವ ಚುನಾವಣೆ ನಡೆಯಿತು. ಈ ಚುನಾವಣೆಗೆ ಬೇರೆಬೇರೆ ಪ್ರಾಂತಗಳ ಅನೇಕಮಂದಿ ವಿದ್ಯಾವಂತರು ಅಭ್ಯರ್ಥಿಗಳಾಗಿದ್ದರು. ಈ ಅಭ್ಯರ್ಥಿಗಳಲ್ಲಿ ಪೀಠಾರೋಹಣಕ್ಕೆ ಯೋಗ್ಯರೂ ದಕ್ಷರೂ ಆಗಿರತಕ್ಕವರನ್ನು ಆರಿಸಲೋಸುಗ ಮೈಸೂರು ಸರ್ಕಾರದವರಿಂದ ಒಂದು ಸಭೆ ನಿಯಮಿಸಲ್ಪಟ್ಟದ್ದಿತು. ಈ ಸಭೆಯ ಒಪ್ಪಿಗೆ ಪ್ರಕಾರ ಮಹಾಸ್ವಾಮಿಯವರು ಈಗೆ ಎರಡು ವರ್ಷಗಳ ಹಿಂದೆ ಪೀಠಾರೋಹಣ ಮಾಡಿದರು. ಮಹಾಸ್ವಾಮಿಯವರ ವಯಸ್ಸು (ಸುಮಾರು ೩೫) ಚಿಕ್ಕ



ದಾದರೂ ಘನವಾದ ಪಂಡಿತರಾಗಿದ್ದಾರೆ.

ಕಲ್ಕತ್ತಾ ನಗರದ ಗೌರ್ನಮೆಂಟು ಸಂಸ್ಕೃತ ಕಾಲೇಜಿನಲ್ಲಿ ವ್ಯಾಕರಣತೀರ್ಥ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಲ್ಲದೆ, ಕನ್ನಡ, ಸಂಸ್ಕೃತ, ಆಂಧ್ರ, ಹಿಂದೀ, ಮರಾಠೀ ಭಾಷೆಗಳನ್ನು ಚನ್ನಾಗಿ ಅರಿತವರಾಗಿರುತ್ತಾರೆ. ದಯಾಳುಗಳು, ಶಾಂತಸ್ವಭಾವಿಗಳು, ಮತ್ತು ಸಮಾಜೋದ್ಧಾರ ವಿಷಯದಲ್ಲಿ ತುಂಬಾ ಆಸಕ್ತಿಯುಳ್ಳವರು. ಇಷ್ಟರಲ್ಲಿಯೇ ಮೈಸೂರು ನಗರದಲ್ಲಿ ಒಂದು ದೊಡ್ಡ ಸಂಸ್ಕೃತ ಕಾಲೇಜನ್ನು ಸ್ಥಾಪನ ಮಾಡುವ ಉದ್ದೇಶವುಳ್ಳವರಾಗಿದ್ದಾರೆ. ಈ ಮಹನೀಯರಿಂದ ವೀರಶೈವ ಸಮಾಜಕ್ಕೆ ಇನ್ನೂ ಅನೇಕ ಧರ್ಮಕಾರ್ಯಗಳಾಗತಕ್ಕುವಿವೆ.

## ಶ್ರೀ ೧೦೮ ಜಗದ್ಗುರು ಸದ್ಧರ್ಮ ಸಿಂಹಾಸನಾಧೀಶ್ವರ

# ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು.

### ಉಜ್ಜಯಿನೀ ಸಂಸ್ಥಾನ.

ಚಿತ್ರದುರ್ಗದ ಡಿಸ್ಟ್ರಿಕ್ಟಿನ ಬಂಗಾರನಾಯಕನ ಹಳ್ಳಿಯು ಇವರ ಜನ್ಮಸ್ಥಲ. ಇವರು ಪಟ್ಟಕ್ಕೆ ಬಂದು ಸುಮಾರು ೨೪ ವರುಷಗಳಾದವು.



ಇವರು ಪರಮ ತಪಸ್ವಿಗಳು. ಇವರು ಪೀಠಾರೋಹಣ ಮಾಡಿದಂದಿನಿಂದ ಉಜ್ಜಯಿನೀ ಪೀಠವು ದೇಶದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿತು. ಇವರು ಪಂಚ ಪೀಠಗಳ ಉನ್ನತಿಯ ಬಗ್ಗೆ ಅವಿಶ್ರಾಂತ ಶ್ರಮವಹಿಸಿರುವರು. ಇವರ ಆಶೀರ್ವಾದ ಬಲದಿಂದ ಧನ ನಿಧಿಯು ಶೇಖರಿಸಲ್ಪಟ್ಟು ಮದ್ರಾಸು ವೀರಶೈವ ವಿದ್ಯಾವರ್ಧಕಸಂಘವು ಬಳ್ಳಾರಿಯಲ್ಲಿ ಸ್ಥಾಪಿಸಲ್ಪಟ್ಟಿತು. ಸಂಸ್ಕೃತ ವಿದ್ಯಾರ್ಥಿಗಳಿಗೋಸ್ಕರ ೫೦ ಸಹಸ್ರ ರೂಪಾಯಿಗಳ ನಿಧಿಯನ್ನು ಸೇರಿಸಿ ಶ್ರೀ ಜಗದ್ಗುರು ದಾರುಕಾಚಾರ್ಯ ಪಾಠಶಾಲೆಯನ್ನು ಕೊಟ್ಟೂರಲ್ಲಿ ಸ್ಥಾಪಿಸಿರುತ್ತಾರೆ. ಮೈಸೂರಿನಲ್ಲಿ ಸ್ಥಾಪಿಸಬೇಕೆಂದಿರುವ ವೀರಶೈವ ಸಂಸ್ಕೃತ ಕಾಲೇಜಿಗಾಗಿ ರಂಭಾಪುರೀ ಪೀಠದ್ಯಅಧಿಕಾರ ಸಮಯದಲ್ಲಿ ೧೧ ಸಹಸ್ರ ರೂಪಾಯಿಗಳನ್ನು ವಾಗ್ದಾನ ಮಾಡಿ, ಅದರಲ್ಲಿ ಅಧಿಕಾಂಶವನ್ನು ಆಗಲೇ ಪ್ರದಾನ ಮಾಡಿರುತ್ತಾರೆ. ಈ ಮಹನೀಯರ ಪ್ರಭಾವದಿಂದ ಇನ್ನೂ ಅನೇಕ ಕಾರ್ಯಗಳು ನೆರವೇರತಕ್ಕುವಿರುತ್ತವೆ.

ಶ್ರೀ ೧೦೮ ಜಗದ್ಗುರು ವೈರಾಗ್ಯ ಸಿಂಹಾಸನಾಧೀಶ್ವರ

## ನೀಲಕಂಠಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು.

ಶ್ರೀ ಹಿಮವತ್ ಕೇದಾರ ಸಂಸ್ಥಾನ.

ಈ ಮಹಾಸ್ವಾಮಿಗಳು ಪೂರ್ವಾಶ್ರಮದಲ್ಲಿ ಧಾರವಾಡ ಪ್ರಾಂತದ ಕಲ್ಲೇದೇವರು ಎಂಬ ಗ್ರಾಮದಲ್ಲಿ ಜನಿಸಿದರು. ಈಗ ಮಹಸ್ವಾಮಿಯವರ ವಯಸ್ಸು ಸುಮಾರು ೩೪. ಕನ್ನಡ, ಸಂಸ್ಕೃತ, ಇಂಗ್ಲೀಷ್, ಮರಾಠಿ, ಹಿಂದೀ, ಪಹಡಿ ಈ ಯಾವತ್ತೂ ಭಾಷೆಗಳನ್ನು ಚನ್ನಾಗಿ ಬಲ್ಲವರಾಗಿದ್ದಾರೆ. ಯೋಗಶಾಸ್ತ್ರದ ರಹಸ್ಯವನ್ನು ಚನ್ನಾಗಿ ಅರಿತವರು.



ಈ ಮಹಾಸ್ವಾಮಿಗಳು ಪೀಠಾರೋಹಣ ಮಾಡಿ ಸುಮಾರು ಆರು ವರ್ಷಗಳಾದವು. ತತ್ಪೂರ್ವ ಮಠವು ಅತ್ಯಂತ ಹೀನಾವಸ್ಥೆಯಲ್ಲಿದ್ದು ಸಂಸ್ಥಾನಕ್ಕೆ ೭೫ ಸಹಸ್ರ ರೂಪಾಯಿಗಳ ಸಾಲವಾಗಿತ್ತು. ಅದನ್ನು ಇವರೇ ತೀರಿಸಿ ಪುನಃ ಲಕ್ಷಾಂತರ ರೂಪಾಯಿಗಳ ನಿಧಿಯನ್ನು ಶೇಖರ ಮಾಡಿ, ಹಗಲಿರುಳೂ ವಿದ್ಯೋನ್ನತಿಗಾಗಿ ಪ್ರಯತ್ನಪಡುತ್ತಿದ್ದಾರೆ. ಈ ಸ್ವಾಮಿಗಳವರು ಬಳ್ಳಾರಿ, ಹೊಸಪೇಟೆ, ಸಂಡ್ಯಾಲ; ಸಿರಿಗೇರಿ ಮೊದಲಾದ ಸ್ಥಾನಗಳಲ್ಲಿ ಮಾಹೇಶ್ವರ ವಟುಗಳ ವಿದ್ಯಾರ್ಜನೆಗಾಗಿ ಸಂಸ್ಕೃತಪಾಠಶಾಲೆಗಳನ್ನೇರ್ಪಡಿಸಿದ್ದಾರೆ. ಮದ್ರಾಸ್, ದೆಹಲಿ, ಪ್ರಯಾಗ, ಕಲ್ಕತ್ತಾ, ಕಾಶಿ, ಲಾಹೂರ ಮೊದಲಾದ ಸ್ಥಾನಗಳಲ್ಲಿ ಉಚ್ಚ ತರಗತಿಯ ಆಂಗ್ಲ ಹಾಗೂ ಸಂಸ್ಕೃತ ವಿದ್ಯಾಭ್ಯಾಸಮಾಡುವ ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುತ್ತಿದ್ದಾರೆ. ತಮ್ಮ ಪೀಠದಲ್ಲಿ ಒಂದು ಆಂಗ್ಲೇಯ ಪಾಠಶಾಲೆ ಒಂದು, ಹಿಂದೀ ಪಾಠಶಾಲೆ ಒಂದು, ಸಂಸ್ಕೃತಪಾಠಶಾಲೆ ಇವುಗಳನ್ನು ಏರ್ಪಡಿಸಿರುತ್ತಾರೆ. ಇನ್ನೂ ಇವರ ಕಾಲದಲ್ಲಿ ವೀರಶೈವಮತಕ್ಕೆ ಎಷ್ಟೋ ಉಪಕಾರವಾಗಬೇಕಾಗಿದೆ.

### ಶ್ರೀ ೧೬೮ ಜಗದ್ಗುರು ನಾಗಲೂಟಿ ವೃಷಸಿಂಹಾಸನಾಧೀಶ್ವರ

## ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳವರು.

### ಶ್ರೀ ಶ್ರೀಶೈಲ ಸಂಸ್ಥಾನ.

ಮಹಾಸ್ವಾಮಿಯವರ ವಯಸ್ಸು ಸುಮಾರು ಅರವತ್ತು. ಇವರು ಮಹಾ ತಪಸ್ವಿಗಳು. ಅನಾದಿಕಾಲದಿಂದ ಶ್ರೀಶೈಲದ ಮಲ್ಲಿಕಾರ್ಜುನ ಲಿಂಗ ದೇವಾಲಯವು ಈ ಪೀಠದವರ ಸ್ವಾಧೀನದಲ್ಲಿಯೇ ಇತ್ತು. ಈಗ ಅದು ಕಾರಣಾಂತರ



ದಿಂದ ಸುಮಾರು ೫೦-೬೦ ವರ್ಷಗಳ ಹಿಂದೆ ಸ್ಮಾರ್ತ ಮತೀಯರಾದ ಪುಷ್ಪಗಿರಿ ಮಠದವರ ಸ್ವಾಧೀನಕ್ಕೆ ಸೇರಿಹೋಗಿದೆ. ಸದ್ಯಃ ಇದರ ವಿಚಾರವು ಕರ್ನೂಲ್ ಕೋರ್ಟಿನಲ್ಲಿ ನಡೆಯುತ್ತಿದೆ. ಮಹಾಸ್ವಾಮಿಗಳು ಈಗ್ಗೆ ಗುಂತಕಲ್ಲಿನಲ್ಲಿರುತ್ತಾರೆ.

### ೧೦೮ ಜಗದ್ಗುರು

## ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು.

### ಕಾಶೀ ಸಂಸ್ಥಾನ.

ಈ ಸ್ವಾಮಿಗಳವರು ಸೊಲ್ಲಾಪುರ ಡಿಸ್ಟ್ರಿಕ್ಟ್‌ನಲ್ಲಿ ಜನ್ಮಗ್ರಹಣ ಮಾಡಿದ ಕನ್ನಡಿಗರು. ಈಗ ಮಹಾಸ್ವಾಮಿಯವರ ವಯಸ್ಸು ಸುಮಾರು ೬೫. ತರ್ಕಶಾಸ್ತ್ರದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುತ್ತಾರೆ. ಇವರು ಪೀಠಾರೋ



ಹಣ ಮಾಡಿ ಸುಮಾರು ೨೫ ವರ್ಷಗಳಾಗಿರುವವು. ಇವರು ತಾವು ಅಧಿಕಾರಕ್ಕೆ ಬಂದಮೇಲೆ ಮಠವನ್ನು ಅತ್ಯಂತ ಊರ್ಜಿತಾವಸ್ಥೆಗೆ ತಂದಿರುತ್ತಾರೆ. ನಮ್ಮ ವೀರಶೈವ ಮತದಲ್ಲಿ ಇಲ್ಲಿಯವರೆಗೆ ಎಷ್ಟು ಜನ ಕಾಶಿಯಲ್ಲಿ ಅಭ್ಯಾಸ ಮಾಡಿ ಸಂಸ್ಕೃತ ಪಂಡಿತರಾಗಿರುವರೋ, ಬಹುತೇಕ ಅವರೆಲ್ಲರೂ ಈ ಪೀಠದ ಆಶ್ರಯದಲ್ಲೇ ಅಭ್ಯಾಸ ಮಾಡಿದವರಾಗಿರುತ್ತಾರೆ.



# ಶ್ರೀ ಬಸವೇಶ್ವರ.

## ಬಸವೇಶ್ವರನ ಕೃತಿಗಳು

**ಲೇಖಕರು:—ಶ್ರೀ ಜಗದ್ಗುರು ಜಗದಾಚಾರ್ಯ ಸ್ವಾಮೀ ವಿರೂಪಾಕ್ಷ ವೊಡೆಯರ್, ಚೌಡಯ್ಯ ದಾನಪುರಸಂಸ್ಥಾನ.**

ವೀರಶೈವಧರ್ಮವು ವೇದಾಗಮಗಳಿಂದ ಬಂದ ವೈದಿಕಧರ್ಮವಿರುವುದು. ಉಪನಿಷತ್‌ಕಾಲದಲ್ಲಿ ಈ ಧರ್ಮಪ್ರಚಾರವು ವಿಶೇಷವಾಗಿ ನಡೆದು, ಪೌರಾಣಿಕಕಾಲದಿಂದ ಶಂಕರ, ರಾಮಾನುಜ ಕಾಲಗಳವರೆಗೆ ಪರಧರ್ಮಗಳ ಆಘಾತದಿಂದ ದುರ್ದಶೆಯನ್ನು ಹೊಂದುತ್ತಾ ನಡೆದು, ಹತ್ತನೆಯ ಶತಮಾನದವರೆಗೆ ಪ್ರತಿಭಾಶಾಲಿಗಳೂ ತತ್ವಜ್ಞಶಿರೋಮಣಿಗಳೂ ಆದ ಶ್ರೀಕರಾದಿ ಮಹಾತ್ಮರು ಬ್ರಹ್ಮಸೂತ್ರಾದಿಗಳಿಗೆ ಭಾಷ್ಯಗಳನ್ನು ಬರೆದು, ಲಿಂಗಾಂಗಿ ಧರ್ಮದ ತತ್ವಸಿದ್ಧಾಂತವನ್ನೂ ಉದಾತ್ತವಿಚಾರವನ್ನೂ ಜಗತ್ತಿಗೆ ತೋರ್ಪಡಿಸಿದರು. ಆದರೂ ಧರ್ಮೋನ್ನತಿಗೆ ಸರಿಯಾದ್ದ ಅನುಕೂಲವು ಒದಗದ್ದರಿಂದ ಶ್ರೀಕರಾದ್ಯಾಚಾರ್ಯರಾಗಿಹೋದ ೨೦೦ ವರ್ಷಗಳ ಸುಮಾರಕ್ಕೆ ರಾಜಕೀಯ ಸತ್ವದಿಂದ ಕೂಡಿದ ಬಸವೇಶ್ವರನೆಂಬ ಮಹಾಪುರುಷನ ಉದಯವಾಯಿತು. ಲಿಂಗಾಂಗಿ ಧರ್ಮದ ಶ್ರೇಷ್ಠತ್ವವನ್ನು ತೋರಿಸುವದಕ್ಕಾಗಿಯೇ ಈತನು ಅಲಿಂಗಿ ಬ್ರಾಹ್ಮಣರಲ್ಲಿ ಜನ್ಮವಂತಾಳಿ, ಮುಂದೆ ಲಿಂಗಧಾರಿಯಾದನೆಂಬ ಐತಿಹಾಸಿಕ ವೃತ್ತಾಂತವು ಲಿಂಗಾಂಗಿಗಳ ಗೌರವವನ್ನು ದ್ಯೋತಿಸುತ್ತದೆ. ಉಚ್ಚಕುಲಶೀಲಂಗಳಿಂದ ಕೂಡಿದ ಬಸವೇಶ್ವರನು ತನ್ನ ಪ್ರಭಾವದಿಂದಲೂ, ಉತ್ಸಾಹ, ದೂರದರ್ಶಿತ್ವ, ಸಹನಶೀಲತ್ವ, ಶುದ್ಧಾಚಾರವಿಚಾರಗಳಿಂದಲೂ, ರಾಜನೀತಿ, ಧರ್ಮನೀತಿ, ವ್ಯಾವಹಾರಿಕ, ಬುದ್ಧಿ ಕುಶಲತೆಯಿಂದಲೂ, ಸ್ವದೇಶಾಭಿಮಾನದಿಂದಲೂ, ಆತನ ಕಾಲದ ಬಿಜ್ಜಳರಾಜನ ಮಂತ್ರಿಪದವಂ ಸಂಪಾದಿಸಿ, ಲಿಂಗಾಂಗಿ ಧರ್ಮವನ್ನು ವಿಶೇಷ ಪ್ರಚಾರಮಾಡಿ ಬಹು ಉನ್ನತಿಗೆ ತಂದನೆಂದು ನಿಸ್ಸಂದೇಹವಾಗಿ ಹೇಳಬಹುದು.

ಆದರೆ ರಾಜನು ಜೈನನಿದ್ದಾಗ್ಯೂ ಅವನನ್ನು ಲಕ್ಷ್ಯೀಕರಿಸದೆ ಏನ್ನೋದು ಲಿಂಗಾಂಗಿ ಧರ್ಮದುನ್ನತಿ ಮಾಡಿ ತೋರಿಸಿದನೋ, ಅದರಿಂದ ಧರ್ಮದಲ್ಲೆಲ್ಲರೂ ಅಂದರೆ ರಾಜನಿಂದ ಹಿಡಿದು ಒಬ್ಬ ಚಾಂಡಾಲನ ವರೆಗೂ ಸ್ವತಂತ್ರ ಸಮಾನ ಹಕ್ಕುದಾರರು ಎಂಬುದನ್ನು ಉದಾಹರಣೆಮಾಡಿಕೊಟ್ಟನು. ಅದೇ ಕಿತ್ತಿಯನ್ನೇ ನಮ್ಮಾ ಬ್ರಿಟಿಷ್ ಸಾರ್ವಭೌಮರು ಅಂಗೀಕರಿಸಿದ್ದರಿಂದಲೇ ಇವರ ರಾಜ್ಯವು ಬಹುಕಾಲದವರೆಗೆ ನಡೆಯುವ ಸಂಭವವಿದ್ದು ಬಹು ಸುಖಕರವಾಗಿರುವುದು. ಅಂದರೆ ಧರ್ಮಕ್ಕೆ ಸರಕಾರವು ಬಾಧ್ಯವಲ್ಲವೆಂಬ ಕಾಯಿದೆ ತೋರಿಸಿದವರಲ್ಲಿ ಬಸವೇಶನೇ ಮೊದಲನೆಯವನು. ದುಡ್ಡಿನಾಶೆಗಾಗಿ ಮಂತ್ರಿಪದವನ್ನು ವಹಿಸಿ ಹ್ಯಾಗೆ 'ಹಾಜಿ, ಹಾಜ' ಎಂದು ಕಾಲ ಕಳೆದು ಹೋಗುವರೋ ಮತ್ತು ಶುಕ್ರನೀತಿಯಲ್ಲಿ ಯಾವ ಮಂತ್ರಿಗೆ ರಾಜನು ಹೆದರುವುದಿಲ್ಲವೋ ಅರ್ಥಾತ್ ರಾಜನಲ್ಲಿ ತನ್ನ ಗಾಂಭೀರ್ಯವನ್ನು ಇಟ್ಟುಕೊಂಡಿಲ್ಲವೋ ಆ ಮಂತ್ರಿಯು ಕೇವಲ ವಸ್ತ್ರಾದಿಗಳಿಂದಲಂಕೃತಳಾದ ಸ್ತ್ರೀಯಳ ದಾಸಿಯೆಂದು' ಹೇಳುವಂತೆ ಬಸವೇಶನು ರಾಜನಿಗೆ • ಹೆದರಿ ರಾಜ್ಯಭಾರವನ್ನೆಂದೂ ಮಾಡಲಿಲ್ಲ; ಮತ್ತು ಇದಲ್ಲದೆ—"ಹಿತಂ ರಾಜ್ಞಶ್ಚ ಚಾಹಿತಂ ಯಲ್ಲೋಕಾನಾಂ ತನ್ನ ಕಾರಯೇತ್" ಎಂಬೀ ಶುಕ್ರನೀತಿ ವಚನದಂತೆಯೇ ಪ್ರಜೆಗಳಿಗೆ ಅಹಿತವಾದ ಕಾರ್ಯವನ್ನವನೆಂದೂ ಮಾಡಲಿಲ್ಲ. ಯಾಕೆಂದರೆ ಅವನ ಚರಿತ್ರದಲ್ಲೆಲ್ಲಿಯೂ ಪ್ರಜೆಗಳ ಅಹಿತಕಾರ್ಯದ ಉಲ್ಲೇಖವಿಲ್ಲ. ಅಲ್ಲದೇ ಅವನು ಪ್ರಜಾಹಿತ ಕಾರ್ಯದಲ್ಲಿ ಕೇವಲ ರಾಜಾಜ್ಞೆಯನ್ನು ಸ್ವಪ್ನದಲ್ಲಿಯೂ ಅಪೇಕ್ಷಿಸಿರಲಿಲ್ಲ. ಇದರಿಂದ ಅವನು "ಪ್ರಜಾಪ್ರತಿನಿಧಿಸಭೆ" ಯಿಂದಲೇ ರಾಜ್ಯಕಾರ್ಯ ನಡೆಯಬೇಕೆಂಬಭಿಪ್ರಾಯವುಳ್ಳವನಿದ್ದನು. ಅರ್ಥಾತ್ ಪೌರಾಣಿಕ ಕಾಲದಿಂದ ಲುಪ್ತವಾದ ಪ್ರಜಾ ಸಮ್ಮತಿಪೂರ್ವಕ ರಾಜ್ಯಭಾರವನ್ನು ಪುನಃ ಪ್ರಾರಂಭಮಾಡಿಕೊಟ್ಟನು. ಮತ್ತು ಸಂಬಾಜಿಯು ಸತ್ತನಂತರ ನಾವೇ ಗಾದೀಮಾಲಿಕರೆಂದು ಹೇಳಿ ರಾಜ್ಯವಾಳಿದ ರಾಜದ್ರೋಹಿಗಳಾದ ದುಷ್ಟ ಸ್ವಾರ್ಥಿ ಪೇಶ್ವೆಯರಂತೆ ಬಸವೇಶನು ನಾನೇ ರಾಜನಾಗಬೇಕೆಂಬ ಅಪೇಕ್ಷೆಯುಳ್ಳ ರಾಜದ್ರೋಹಿಯಾಗಿರಲಿಲ್ಲ. ರಾಜ್ಯದ ಸುವ್ಯವಸ್ಥೆಗೆ

ಶಾಸಕನಾದ ರಾಜನೋರ್ವನು ಬೇಕೆಂತಲೇ ಹೇಳುವ ರಾಜಾಭಿಲಾಷಿಯು. ಹಾಗಿರದಿದ್ದಪಕ್ಷದಲ್ಲಿ ಬಿಜ್ಜಳನು ಸತ್ತನೆಂಬ ವಾರ್ತೆಯನ್ನು ಕೇಳಿ ತಾನೇ ರಾಜನೆನಿಸಿಕೊಳ್ಳಲು ಪ್ರಯತ್ನಮಾಡುತ್ತಿದ್ದನು. ಆದರೆ ಅದ, ಅಯೋಗ್ಯವೆಂದು ತಿಳಿದೇ, ಮುಂದೆ ಯೋಗ್ಯ ರಾಜನಿರದ್ದರಿಂದ ರಾಜ್ಯದಲ್ಲಿ ಅಶಾಂತಿಯುಂಟಾದೀತೆಂದು ತಿಳಿದು ಮಂತ್ರಿಪದವನ್ನು ಸಹ ತ್ಯಾಗಮಾಡಿ ಹೊರಟುಹೋದನು.

ಕೆರೆ, ಭಾವಿ, ಅನ್ನಛತ್ರ, ದೇವಾಲಯ, ವೈದ್ಯಾಲಯ, ಆಶ್ರಮ, ಮಠ, ಮಹಾಂತಾದಿ ಕಾರ್ಯಗಳನ್ನು ವಿಪುಲವಾಗಿ ರಚಿಸಿ, ಹಾಗೂ ಪರರಾಷ್ಟ್ರದ ವಿಘಾತವೆಂದಿಗೂ ಬಿಜ್ಜಳನ ರಾಜ್ಯಕ್ಕಾಗಬಾರದೆಂದು ಸೈನ್ಯರಚನಾ ಮೊದಲಾದದ್ದನ್ನು ಬಹು ದಕ್ಷತೆಯಿಂದ ಮಾಡಿದನೆಂಬುವದಕ್ಕೆ ಅವನ ಮಂತ್ರಿಪದಕಾಲದಲ್ಲಿ ಯಾವದೊಂದು ಪರರಾಷ್ಟ್ರದ ಸಂಗಡ ಬಿಜ್ಜಳನ ಯುದ್ಧವಾಗದ್ದೇ ಸಾಕ್ಷಿಯು. ಇದಲ್ಲದೆ ಒಂದು ಲಕ್ಷ ತೊಂಭತ್ತಾರು ಸಾವಿರ ಮಹಾಯೋದ್ಧರುಗಳನ್ನು ಧರ್ಮ ಸಂರಕ್ಷಣೆಗಾಗಿಯೂ, ರಾಜ್ಯಸಂರಕ್ಷಣೆಗಾಗಿಯೂ ಗುಪ್ತರೀತಿಯಿಂದ ಕಾದುಕೊಂಡಿದ್ದನು. ಈ ಯೋದ್ಧರೆಲ್ಲಾ ಬಹುತೇಕ ಸನ್ಯಾಸಿಗಳಿದ್ದು ಇವರು ನಿರಭಿಲಾಷಿಗಳಿದ್ದರು. ಇದರಿಂದ ಅವನ ರಾಜನೀತಿ ಕುಶಲತೆಯು ವ್ಯಕ್ತವಾಗುವುದು. ರಾಷ್ಟ್ರದಲ್ಲಿ ಸರ್ವರೂ ಉದ್ಯೋಗಿಗಳಾಗಬೇಕೆಂಬುವುದೇ ಅವನ ಅಹರ್ನಿಶ ಪ್ರಯತ್ನವು. ಅವನ ಕಾಯ ವಾಙ್ಮಾನಸಗಳೆಲ್ಲಾ ಸ್ವದೇಶಾಭಿಮಾನದಿಂದ ತುಂಬಿ ತುಳುಕುತ್ತಿದ್ದವು. ಸಂಸಾರಿಕ ಸುಖೋತ್ಪಾದನಕ್ಕೆ ಧರ್ಮವೇ ಮೂಲವಾದದ್ದೆಂದು ಇವನು ಬಾಹ್ಯಾಂತರದಲ್ಲಿ ಭಾವಿಸಿ ಧರ್ಮ ಚಳವಳಿಯನ್ನೇ ಮೊದಲು ಎಬ್ಬಿಸಿದನು. ಆಗಿನ ಕೆಲವು ದುಷ್ಟ ಸ್ವಾರ್ಥಿಗಳು ತಮ್ಮ ಸ್ವಾರ್ಥದಲ್ಲಿ ಮದಾಂಧರಾಗಿ, ಅವನ ಆಂತರಿಕ ತತ್ವವನ್ನು ತಿಳಿಯದೇ ಅವನ ದೇಶೋನ್ನತಿಯ ಕಾರ್ಯದಲ್ಲಿ ಬಹು ವಿಘ್ನಗಳನ್ನು ಮಾಡಿದರು. ಆದರೂ ಅವನು ಮಹಾಸತ್ಯಾಗ್ರಹಿಯಾದ್ದರಿಂದ ಅವನದೇ ಜಯಭೇರಿಯು ದಿಗಂತಗಳವರೆಗೂ ಢಣಢಣಾಯವಾಯಿತು. ರಾಷ್ಟ್ರಕಾರ್ಯ ಸುಧಾರಣೆಗಾಗಿ ಅವನು ಮೇಲೆ ಧರ್ಮಸುಧಾರಕನಂತೆ ವ್ಯವಹರಿಸಿ ತನಗೆ 'ಧರ್ಮಸತ್ತಾ' ರಾಜಸತ್ತಾ' ಗಳೆರಡೂ ಅವಗತವಿದ್ದದರಿಂದ ಎರಡನ್ನೂ ಸಾಧಿಸುತ್ತ ಹೋದನು. ಆದರೆ 'ರಾಮದಾಸಾದಿ' ಸಾಮಾನ್ಯರಿಗೆ ರಾಜಸತ್ತೆಯ ಸಾಮರ್ಥ್ಯವಿಲ್ಲದ್ದರಿಂದ 'ಮುಖ್ಯ ಹರಿಕಥಾ ನಿರೂಪಣ | ದುಸರೇ ತೇ ರಾಜಕಾರಣ' ಎಂದು ಬರೇ ಡುಮುಕಿಯನ್ನು ಬಾರಿಸುತ್ತಾ ರಾಜಕೀಯ ವಿಚಾರವನ್ನು ಧರ್ಮನಿಮಿತ್ತದಿಂದ ಕಪಟ ವೇಷಿಗಳಾಗಿ ಬೋಧಿಸಿದರು. ಆದರೆ 'ಸುಡು ಸದಾ ಕಾಪಟ್ಯದಾ ಸ್ನೇಹಮಂ' ಎಂಬ ನೀತಿವಾಕ್ಯವನ್ನನುಸರಿಸಿ ಬಸವೇಶನು ಕಾಪಟ್ಯವಂ ಧರಿಸದೇ ನಿರ್ಭೀತನಾಗಿ ಧರ್ಮನೀತಿ, ರಾಜನೀತಿಯ ಕಿತ್ತಿಗಳನ್ನು ಬಹಿರಂಗದಲ್ಲಿ ಸ್ವತಃ ಆಚರಿಸಿ ತೋರಿಸಿದನು.

ಬಸವೇಶ್ವರನು ರಾಷ್ಟ್ರದ ಐಕ್ಯಕ್ಕೆ ಧರ್ಮವೇ ಮೂಲವೆಂದು ತಿಳಿದು ಧರ್ಮದ ಚಳವಳಿ ಮಾಡಿದನು. ಇತ್ತಲಾಗಿ ದೇಶಾಭಿಮಾನದಿಂದ ರಾಷ್ಟ್ರದಲ್ಲಿ ಒಂದೇ ಧರ್ಮವಾಗಿ ಆ ರಾಷ್ಟ್ರದ ದ್ರವ್ಯವು ಎರಡನೇ ರಾಷ್ಟ್ರಕ್ಕೆ ಹೋಗಕೂಡದೆಂತಲೂ, ಅರ್ಥಾತ್ ಕರ್ಣಾಟಕ ಪ್ರಾಂತದ ದ್ರವ್ಯವು ಮಹಾರಾಷ್ಟ್ರಕ್ಕೆ ಹೋಗಬಾರದೆಂದು ಭಾವಿಸಿದಲ್ಲಿ ಆ ಕರ್ಣಾಟಕ ವಾಸಿಗಳಿಗೆ ಬೇಕಾದ ಪದಾರ್ಥಗಳನ್ನು ತನ್ನ ರಾಷ್ಟ್ರದಲ್ಲಿಯೇ ತಯಾರಿಸಲಿಕ್ಕೆ ಜನರು ಉದ್ಯುಕ್ತರಾಗಿರೆಂದು ಹೇಳಿ ಅವರಿಗೆ ಬೇಕಾದ ಪ್ರೋತ್ಸಾಹ ಕೊಡಲು ಸಿದ್ಧನಾದನು. ಇದರಿಂದ ಪರರಾಷ್ಟ್ರದಪೇಕ್ಷೆಯು ಉಳಿಯದೇ ಹೋಗಿ, ರಾಷ್ಟ್ರದಲ್ಲೆಲ್ಲರೂ ಸಮಯಾನುಸಾರ ಪದಾರ್ಥಗಳ ಅನುಕೂಲತೆಯ ದೆಸೆಯಿಂದ ಚಂಡಾಲನನ್ನು ಸಹ ಬಂಧುವಿನಂತೆ ಭಾವಿಸಲಾರಂಭ ಮಾಡಬೇಕಾಯಿತು. ಇದಕ್ಕಾಗಿ ಬಸವೇಶನು ಮೊದಲು ಚಂಡಾಲನೂ ಸಹ ನನ್ನ ಬಂಧುವೆಂದು ತೋರಿಸಲಿಕ್ಕೆ ಲಿಂಗಧಾರಣವೆಂಬ ಧರ್ಮನಿಮಿತ್ತವಂ ಬಾಹ್ಯದಲ್ಲಿ ತೋರಿಸಿ, ಅವನನ್ನು ತನ್ನಲ್ಲಾವರಿಸಿಕೊಂಡನು. ಆ ಲಿಂಗಧಾರಣ ಮತ್ತು ಸದ್ಬೋಧದಿಂದವನನ್ನು ಪವಿತ್ರಾಚರಣೆಗೆ ಹಚ್ಚಿ ಈ ಚಂಡಾಲನು ಈಶ್ವರ ಪುತ್ರನಾಗಿ, ದೇಶಬಾಂಧವನಾದ್ದರಿಂದ ಇವನ ಬಂಧುತ್ವವು ಚಿರಕಾಲ ಉಳಿಯಬೇಕೆಂಬುದಾಹರಣೆಗಾಗಿ ಶ್ರೇಷ್ಠ ಬ್ರಾಹ್ಮಣರೆಂದು ಹೇಳಿಸಿಕೊಳ್ಳುವವರಲ್ಲಿಯೇ ಶರೀರಸಂಬಂಧ ಮಾಡಿಸಿದನು. ಇವನೇ ಹರಳಯ್ಯನೆಂಬ ಪಂಚಮನು; ಇವನ ಮಗನಿಗೆ ಮಧುವಯ್ಯನೆಂಬ' ಬ್ರಾಹ್ಮಣನ ಮಗಳನ್ನು ಕೊಡಿಸಿದನು. ಅಹಹಾ! ಬಸವೇಶನ ವಿಶ್ವಾತ್ಮ, ವಿಶ್ವಸ್ವರೂಪ, ವಿಶ್ವಕುಟುಂಬಕ್ಕೆ ಬೆಲೆ ಇಲ್ಲ! ಯಾವ ಈಶ್ವರನ ಪುತ್ರರಿಗೆ ಚಂಡಾಲರೆಂದು ಹೆಸರಿಟ್ಟು, ಸ್ವಾರ್ಥಿಗಳು ಅವರನ್ನು ಕಂಡಾಕ್ಷಣಕ್ಕೆ ಸಚೇಲಸ್ನಾನವನ್ನು ಮಾಡುತ್ತಿದ್ದರೋ, ಅಂಥಾ ಸ್ವಾರ್ಥವಿಚಾರವನ್ನು ನಿರ್ಮೂಲಿಸಿ ಜಗತ್ಕಲ್ಯಾಣಮಾಡಿದ ಬಸವೇಶನಿಗೆ ಎಷ್ಟು ಧನ್ಯವಾದಗಳನ್ನರ್ಪಿಸಿದರೂ ಸ್ವಲ್ಪವೇ ಸರಿ! ಈಗ ಬಸು, ಪಟೇಲ ಮೊದಲಾದವರು ಕೌನ್ಸಿಲದಲ್ಲಿ ತಂದಿರುವ ವೈವಾಹಿಕ ಬಿಲ್ಲಗಳಿಂದ ಅವರು ಒಳ್ಳೇ ಉದಾತ್ತವಿಚಾರದಿಂದ ಜನರಲ್ಲಿ ಈ ಬಿಲ್ಲುಗಳನ್ನು ಹೊಸದಾಗಿ ಶೋಧಮಾಡಿರುವರೆಂಬ ಗೌರವಕ್ಕಾಸ್ಪದರಾಗಿರುವರು. ಆದರೆ ಇವತ್ತಿಗೆ ೭೦೦ ವರ್ಷದ ಹಿಂದೆಯೇ ಬಸವೇಶನು ಇಂಥಾ ರಾಷ್ಟ್ರೈಕ್ಯ ಹಿತಕರ ಕೃತಿಗಳನ್ನು ಸಹಜರೀತಿಯಿಂದ ಕೃತಿಯಲ್ಲಿ ತಂದು ತೋರಿಸಿ ಜಗತ್ತಿಗುದಾಹರಣೆ ಮಾಡಿಟ್ಟಿರುವನು.

ಬಸವೇಶನ, ಲಿಂಗಾಂಗಿ ಧರ್ಮದಲ್ಲಿ ಅಂಥಾ ಮಹಿಮಾಶಾಲಿಗಳಾದ ಉಪದೇಶಕರು ಒಂದುವೇಳೆ ಕೆಲವುಕಾಲ ವಿಪುಲವಾಗಿ ಉದಯಿಸದಿದ್ದರೂ, ಧರ್ಮವು ಶಿಥಿಲವಾಗಬಾರದೆಂದು ಅದರ ಕಟ್ಟಡವನ್ನು ಬಹುರೀತಿಯಾಗಿ ಬಂಧಿಸಿದನು. ಹ್ಯಾಗಂದರೆ ಧರ್ಮತತ್ವಗಳನ್ನು ತಿಳಿಸುವದಕ್ಕೂ, ಧರ್ಮದ ಆಚಾರ, ವಿಚಾರ, ವ್ಯಾವಹಾರಿಕ ನ್ಯಾಯ ನಿರ್ಣಯಗಳು ಸಹ ಅನ್ಯರಲ್ಲಿ ಹೋಗದಂತೆಯೂ, ನೀತಿಭ್ರಷ್ಟತೆಯಾಗದಂತೆಯೂ, ಪರಧರ್ಮದ ದುರ್ಬೋಧೆಯಿಂದ ಸ್ವಧರ್ಮತ್ಯಾಗಿಗಳಾಗದಂತೆಯೂ ಪ್ರತಿಬಂಧಮಾಡುವುದಕ್ಕೆ ಮಠಗಳನ್ನು ಬಹಳವಾಗಿ ಅಲ್ಲಲ್ಲಿಗೆ ನಿರ್ಮಿಸಿ, ಅವರಿಂದಲೇ ಧಾರ್ಮಿಕ ವಿಷಯಗಳ ನಿರ್ಣಯವಾಗುವಂತೆಯೂ, ವ್ಯಾವಹಾರಿಕ, ಔದ್ಯೋಗಿಕ, ನ್ಯಾಯನಿರ್ಣಯಕ್ಕಾಗಿಯೂ ಅವುಗಳ ಉನ್ನತಿಯ ಪ್ರೋತ್ಸಾಹಕ್ಕಾಗಿಯೂ ಪ್ರತಿ ಒಂದು ಗ್ರಾಮದಲ್ಲಿ ಶ್ರೇಷ್ಠಿ (ಶೆಟ್ಟಿ), ಬಣಕಾರ, ಪಂಚಾಯತರು ಎಂಬ ಪಂಚಾಯತ ಸಭೆಗಳನ್ನೇರ್ಪಡಿಸಿ, ಇವಕ್ಕೆ ಶ್ರೇಷ್ಠಿ ಬಣಕಾರರೇ ಮುಖ್ಯಾಧಿಕಾರಿಗಳಾಗಿರುವಂತೆಯೂ, ಅವರು ಪಂಚರನುಮತಿಯಂತೆ ನಡೆಯಬೇಕಾಗಿಯೂ ನಿರ್ಣಯಿಸಿದನು. ಆದರೆ ಧಾರ್ಮಿಕ ವಿಷಯ ನಿರ್ಣಯದಲ್ಲಿ ಈ ಶ್ರೇಷ್ಠಿ, ಬಣಕಾರರ ಅಧಿಕಾರವೇನೂ ಇಲ್ಲ. ಧಾರ್ಮಿಕ ವಿಷಯದಲ್ಲಿ ಗುರುವಿನಾಜ್ಞೆಯಂತೆ ನಡೆಯುವುದೇ ಇವರ ಕರ್ತವ್ಯವು. ಧಾರ್ಮಿಕ ನಿರ್ಣಯವೆಲ್ಲಾ ಗುರುವಿನಿಂದಲೇ ತೀರತಕ್ಕದ್ದು. ಆಯಾಯ ಗ್ರಾಮಗಳ



ವೀರಶೈವ ಮತೋದ್ಧಾರಕರೂ, ಕರ್ನಾಟಕ ಭಾಷೋಜ್ಜೀವಕರೂ ಆದ

**ಕಲ್ಯಾಣದ ಶ್ರೀ ಬಸವೇಶ್ವರರು.**

ಲ್ಲಿಯ ಮಠದವರಿಗೆ ಅನುಕೂಲರಾಗಿ ಅವರ ಸೇವಾ ಹಾಗೂ ಸಮಾಜ
ಸೇವಾ ಮಾಡುವ ಉದ್ದೇಶದಿಂದ ಗಣಾಚಾರಿ ಮಠಪತಿ ಎಂಬವರನ್ನು
ನಿಯಮಿಸಿ, ಇನ್ನೂ ಮೇಲಿನ ಪೀಠದವರಿಗೆ ಆಗಾಗ್ಗೆ ಧಾರ್ಮಿಕ
ವೃತ್ತಾಂತಗಳನ್ನು ತಿಳಿಸಲು ಕೆಲವು ಕಾಯಕದಯ್ಯನವರನ್ನು
ನಿಯಮಿಸಿ ಇವರನ್ನು ಆಯಾಯ ಭಾಗದ ಪೀಠಾಧೀಶರ ಅಧೀನ,
ಮಾಡಿದನು. ಇವರು ಎಂಟು ದಿವಸಕ್ಕೊಮ್ಮೆ ಪ್ರತಿಯೊಂದು ಗ್ರಾ
ಮಕ್ಕೂ ತಣಕಿಹಾಕುತ್ತಾ ಆಯಾಯ ಗ್ರಾಮದ ಧಾರ್ಮಿಕಾದಿ
ವೃತ್ತಾಂತಗಳನ್ನು ಪೀಠದವರಿಗೆ ತಿಳಿಸುವರು. ಈ ಕಾಯಕದವರು
ಪೀಠದವರ 'ಡಿಟೆಕ್ಟಿವ್' ಪೋಲೀಸರೆಂದರೂ ಅತಿಶಯೋಕ್ತಿಯಾಗ
ಲಾರದು. ಈ ಕಾಯಕದವರಿಗೆ ಅವರ ಮಹತ್ ಕಾರ್ಯದ ಜಬಾ
ಬದಾರಿಯು ಸಾಧಾರಣದ್ದಿದ್ದಿಲ್ಲ. ಇವರು ತಮ್ಮ ಶರೀರವನ್ನು
ಚುಡಿಸಿ, (ಶಾರೀರಿಕ ತಪಶ್ಚರ್ಯದಿಂದ) ಧರ್ಮೋನ್ನತಿ ಮಾಡುವ
ರಾದ್ದರಿಂದ 'ಕಾಯೇನ ಧರ್ಮೋನ್ನತಿರ್ವಿಧಿಃ ಕ್ರಿಯತೇ ಇತಿ
ಕಾಯಿಕಾಃ' ಎಂಬ ವ್ಯಾಖ್ಯಾನವುಳ್ಳ ನಾಮಕ್ಕರ್ಹರಾಗಿರುವರು.
ದರಒಂದು ಗ್ರಾಮಕ್ಕೆ ಅಂದರೆ ಅಲ್ಲಿಯ ಜನರು ಬಹುತೇಕ ಪರ
ಗ್ರಾಮಕ್ಕೆ ಯಾರೂ ಹೋಗದ ದಿವಸವೆಂದರೆ ಸಂತೆಯದಿವಸವಿದ್ದು
ಆ ದಿವಸವೇ ಇವರು ಆಯಾಯ ಗ್ರಾಮಗಳ ಮುಕ್ಕಾಂ ಮಾಡುತ್ತಾ
ಜನರು ತಮ್ಮ ವ್ಯಾಪಾರ, ಉದ್ಯೋಗ, ಕ್ರಯ-ವಿಕ್ರಯಗಳಿಂದ
ನಿವೃತ್ತರಾಗಿ ದಣಿದು ಸಾಯಂಕಾಲಕ್ಕೆ ತಮ್ಮ ತಮ್ಮ ಮನೆಗೆ ಸೇರಿ
ಆರಾಮ ತೆಗೆದುಕೊಳ್ಳುವ ವೇಳೆಗೆ ದರವಂದು ಮನೆಗೆ ಹೋಗಿ
ಧರ್ಮದ ಮಂಗಲ ವಿಜಯಧ್ವನಿಯುಳ್ಳ ಘಂಟಾನಾದವನ್ನು ಮಾಡು
ವರು. 'ಒಳಗಿದ್ದವರು ಹೊರಗೆ ಬರ್ರಿ' ಎಂದು ಒದರುವದು ಅಮಂ
ಗಲವೆಂದು ತಿಳಿದು, ಈ ಘಂಟಾನಾದದ ಪ್ರಘಾತ ಹಾಕಿದಂತೆ
ಕಾಣುತ್ತದೆ. ಈ ಮಂಗಲ ನಾದವನ್ನು ಕೇಳಿದಾಕ್ಷಣಕ್ಕೆ ಒಳಗಿ
ದ್ದವರೆಲ್ಲರೂ ಹೊರಗೆ ಬಂದು ಆ ಜಂಗಮರ ಪಾದಕ್ಕೆರಗಿ ಧರ್ಮದ
ಆಚಾರ-ವಿಚಾರಪರವಾದ ಕುಶಲಪ್ರಶ್ನಗಳಾಗಿ, ಅವರು ತಪ್ಪುವ
ದನ್ನು ತಿದ್ದಲಿಕ್ಕೆ ಎಚ್ಚರಕೊಟ್ಟು ಜ್ಞಾನಬೋಧಕನೂ, ಧರ್ಮಶಾಸ
ಕನೂ ಆದ ಗುರುವಿನ ನಾಮವನ್ನು ಮರಿಯಬೇಡಿರೆಂದು ಹೇಳಿ
ಅಭಯದಾನವನ್ನು ಕೊಟ್ಟು ಹೊರಟುಹೋಗುವನು. ಇವರ ಈ
ಗುರುನಾಮೋಚ್ಚಾರದ ಕಾರಣವೆಂದರೆ ನೀವು ಧರ್ಮಿಗಳಾಗಿ ನಡೆ
ದಲ್ಲಿ ಆ ಗುರುಗಳು ನಿಮಗೆ ಕಡಕ ಶಾಸನವನ್ನೂ ಮಾಡುವರಲ್ಲದೇ
ಅವರ ಶಾಸನವು ಬಹು ಹೆಚ್ಚಿನದೆಂಬ ಭಯಭಕ್ತಿ ತೋರಿಸುವ
ಉದ್ದೇಶವಿದ್ದು ಹ್ಯಾಗೆ ರಾಜ್ಯದಲ್ಲಿ ಅರಾಜಕತೆಯಾಗಬಾರದೆಂದು
ಮೇಲಿಂದಮೇಲೆ ಬಾದಷಾಹಿ ಶಾಸನವು ನೆನಪಿನಲ್ಲುಳಿಯುವುದ
ಕ್ಕಾಗಿ ಬಾದಶಾಹೀ ಜಾಹೀರನಾಮೆಗಳು ಹಂಚಲ್ಪಡುವವೋ, ಅದ
ರಂತೆಯೇ ಗುರುನಾಮೋಚ್ಚಾರಣೆಯ ಪ್ರಘಾತವಿರುವದು.

ಈ ಕಾಯಕದಯ್ಯನವರು ಗ್ರಾಮಕ್ಕೆ ಬಂದರೆ ಆಯಾಯ
ಪ್ರಾಂತದ ಪೀಠದವರ ಪ್ರತಿನಿಧಿಗಳಾದ ಮಠದವರಲ್ಲೇ ಇಳಿಯತ
ಕ್ಕದ್ದು ಮತ್ತು ಇವರು ಬಿನ್ನಪಗಾರದಿಂದ ಧರ್ಮೋನ್ನತಿ ಮಾಡು
ವಲ್ಲಿ ಕಟಬದ್ಧರಾದ್ದರಿಂದ ಇವರಿಗೆ ಉಪದೇಶಮಾಡಿದ ಪ್ರತಿಯೊಂ
ದು ಮನೆಯವರು ಒಂದೊಂದು ಪೈ ಅಥವಾ ಒಂದೊಂದು ಬಿಲ್ಲಿ
ಯಂತೆ ಕೊಡಬೇಕೆಂದು ನಿಯಮಮಾಡಿದನು. ಬಸವೇಶ್ವರನು
ತಾನು ಸ್ವಯಂಭಕ್ತನೆನಿಸಿ ಗುರುವಿನಾಜ್ಞೆಯನ್ನು ಶಿರಸಾಮನ್ನಿ
ಸುತ್ತಾ ನಡೆದು ಗುರುವಿನ ಮನವನ್ನು ಬಹಳೇ ಮೆಚ್ಚಿಸಿದನು.
ಇವತ್ತಿಗೂ ಆ ದರ್ಜೆಯು ಎಷ್ಟೋಮಟ್ಟಿಗೆ ಕಾಯಂ ಉಳದಿದ್ದು,
ಲಿಂಗಾಂಗಿಧರ್ಮದ ಗುರುಗಳ ಸತ್ತಾ, ಪೂಜ್ಯತೆ, ಆದರಗಳಿದ್ದಷ್ಟು
ಜಗತ್ತಿನಲ್ಲಿಯ ಮತ್ತಿನ್ನಾವ ಜಾತಿಯ ಗುರುಗಳಲ್ಲಿಯೂ ಕಂಡುಬ
ರುವದಿಲ್ಲ. ಅದರೆ ಗುರುವಿನ ಇಷ್ಟು ಮಹತ್ವವನ್ನು ಬೆಳಿಸಲಿಕ್ಕೆ
ಬಸವೇಶನೇ ಆದಿಕಾರಣನು.

ಮೇಲೆ ತೋರಿಸಿದಂತೆ ಕಾಯಕದಯ್ಯನವರು ಗ್ರಾಮಗಳ
ಸ್ಥಿತಿಗಳನ್ನು ಆಗಾಗ್ಗೆ ಮೇಲಿನ ಪೀಠದವರಿಗೆ ತಿಳಿಸುವರು. ಅನಂ
ತರ ಪೀಠದವರು, ಕಾಯಕದವರು ಆ ಗ್ರಾಮಕ್ಕೆ ಹೋಗಿ ಎಲ್ಲಾ
ವಿಚಾರಮಾಡಿ ಬೋಧ ಮಾಡಿದರೋ ಇಲ್ಲೋ ಅಥವಾ ಆ ಗ್ರಾಮ
ಗಳಲ್ಲಿಯ ಹೆಚ್ಚುಕಡಿಮೆ ಸ್ಥಿತಿಗಳನ್ನೇನಾದರೂ ಕಾಯಕದವರು ತಿಳಿ
ಸಿದ್ದರೆ ಅದು ಹೌದೋ ಅಥವಾ ಅಲ್ಲವೋ ಎಂದು ಪೂರ್ಣ ಶೋಧ
ಮಾಡಲಿಕ್ಕೂ ಹೆಚ್ಚು ಕಡಿಮೆ ಅಂದರೆ ಯಾರಾದರೂ ದುರ್ಮಾರ್ಗಿ
ಗಳಾಗಿ ನಡೆಯುತ್ತಿದ್ದಲ್ಲಿ ಅಥವಾ ಮತ್ತೇನಾದರೂ ಧರ್ಮಾಂತ
ರಾದಿ ವಿಪರೀತಸ್ಥಿತಿಗಳಿದ್ದಲ್ಲಿ ಅವುಗಳನ್ನು ವಿಚಾರಿಸಿ, ಅವುಗಳ
ನಿರ್ಮೂಲನಾರ್ಥವಾದ ಉಪದೇಶ ಮಾಡಲಿಕ್ಕೆ ಕಟ್ಟೆ ಕಾಯಕದ
ಯ್ಯನವರೆಂದು ಹೆಸರಿಟ್ಟು (ಇವರು ಘಂಟಿ ಕಾಯಕದವರಿಗಿಂತ ಸ್ವಲ್ಪ
ಹೆಚ್ಚಿನ ಪಹರೆದವರು.) ಅವರನ್ನು ಕಳುಹಿಸುವರು. ಅವರು ಆ
ಗ್ರಾಮಕ್ಕೆ ಹೋಗಿ, ಅಲ್ಲಿಯ ಮಠದವರಿಂದ ಸರ್ವ ವೃತ್ತಾಂತವನ್ನು
ತಿಳಿದುಕೊಂಡು; ಆ ಊರಿನ ಓಣಿಓಣಿಗಳ ಮಧ್ಯದಲ್ಲಿಯ ಒಂದು
ವಿಶಾಲವಾದ ಕಟ್ಟೆಯನ್ನು ಹಿಡಿದು, ಆಸನಹಾಕಿಕೊಂಡು ಕೂತು
ಘಂಟಾನಾದ ಮಾಡಿದರೆಂದರೆ ಆ ಒಣಿಯ ಸಮಸ್ತ ಜನರು ಆ
ಜಂಗಮರ ಸನಿಧಿಗೆ ಬಂದು ನಮಸ್ಕರಿಸಿ ಅವರು ಪರ್ಯಾಯದಿಂದ
ಹೇಳುವ ಉಪದೇಶವನ್ನು ಕೇಳಿ, ಅಂದರೆ ಯಾವನು ಯಾವ
ಧರ್ಮವಿರೋಧ ಕೃತಿಮಾಡುತ್ತಿರುವನೋ ಅವನಿಗೇನೇ ಅವರ
ಉಪದೇಶದ ಮರ್ಮವು ತಗಲಿ ಆ ಪುಣ್ಯ-ಪಾಪ ಫಲವಿಶಿಷ್ಟ ಕರ್ಮ
ದಿಂದ ಜಾಗ್ರತರಾಗುವಂತೆ ಮಾಡಿ, ಗುರುಪೀಠದ ಸನ್ನಿಧಿಗೆ ತೆರಳು
ವರು. ಘಂಟೀ ಕಾಯಕದವರಂತೆ ನಿತ್ಯ ೯-೧೦ ಮೈಲು ತಿರುಗಿ
ಆಯಾಯ ಗ್ರಾಮದ ಮಠದವರಿಂದ ಗ್ರಾಮದ ವಾರ್ತೆಯನ್ನು
ತಿಳಿದೇ ತೀರಬೇಕು. ಹ್ಯಾಗೆ ಪೋಲಿಸ ಸಿಪಾಯಿಯು ದರದಿವಸ
ಕೆಲವು ಗ್ರಾಮಗಳ ತನಖಿ ಹಾಕಿ ಅಲ್ಲಿಯ ಗೌಡ ಶಾನಭೋಗರಿಗೆ
ಭೆಟ್ಟಿಯಾಗಿ ಗ್ರಾಮ ಸುರಕ್ಷಿತೆಯ ಸಹಿ ವಗ್ಗೈರೆ ತೆಗೆದುಕೊಂಡು
ಠಾಣಕ್ಕೆ ಹೋಗಿ ತಿಳಿಸುವ ಪದ್ಧತಿಯೋ, ಹಾಗೆ ಇವರಾದರೂ ೮
ದಿವಸಕ್ಕೊಮ್ಮೆ ಗುರುಪೀಠಕ್ಕೆ ಹೋಗಿ ತಾವು ಸಂಚರಿಸಿದ ಗ್ರಾಮ
ವಾರ್ತೆಯನ್ನೆಲ್ಲಾ ಗುರುಪೀಠಕ್ಕರಿಕೆ ಮಾಡಿಕೊಳ್ಳತಕ್ಕದ್ದೆಂಬ ನಿರ್ಬಂ
ಧವು ಘಂಟೀಯವರಿಗೆ ಇದ್ದಂತೆ ಕಟ್ಟೆಕಾಯಕದಯ್ಯನವರಿಗಿಲ್ಲ.
ಯಾಕಂದರೆ ಇವರು ಅವರಿಗಿಂತ ಸ್ವಲ್ಪ ಹೆಚ್ಚಿನವರೂ, ಬುದ್ಧಿವಾ
ನರೂ ಇದ್ದದರಿಂದ ಇವರು ಯಾವ ಗ್ರಾಮದಲ್ಲಿ ಧಾರ್ಮಿಕ ಹೆಚ್ಚಿನ
ವಿಷಯಗಳಿರುವವೋ, ಅಲ್ಲಿಗೇನೇ ಗುರುವಿನಾಜ್ಞೆಯಂತೆ ಹೋಗಿ
ಅಲ್ಲಿ ಉಪದೇಶಮಾಡಿ ಬರುವರು, ಹಾಗು ತಿಂಗಳಿಗೆ ೧೫ ದಿವಸ
ಸಹಜರೀತಿಯಿಂದಾದರೂ ಉಪದೇಶಾರ್ಥ ಸಂಚಾರಮಾಡಿ ಮತ್ತೂ
ಗುರುಪೀಠದ ಠಾಣೆಕ್ಕೆ ಬರುವರು. ಅವಾಗ್ಗೆ ಆಯಾಯ ಗ್ರಾಮ
ದವರು ಅವರಿಗೆ ದಾನಧರ್ಮವನ್ನು ಮಾಡುವರು. ಇವರು ಉಪ
ದೇಶಮಾಡಿ ಹೋದನಂತರ ಘಂಟಿಯವರು ತಾವು ಬರುವಂತೆ
ಪುನಃ ಆ ಗ್ರಾಮಕ್ಕೆ ಹೋಗಿ ಮಠದಲ್ಲಿಳಿದು, ದುರ್ಮಾರ್ಗಿಗಳ ವಿಷ

ಯವಾಗಿ ಮಠದವರಿಗೆ ಹೇಳಲು ಅವರು ದುರ್ಮಾರ್ಗ ಬಿಟ್ಟಿಲ್ಲೆಂದು
ಹೇಳಿದಲ್ಲಿ ತಾವು ಸ್ವತಃ ಹಮೇಷಾ ಹೋಗುವಂತೆ ಅವರ ಮನೆಗೆ
ಉಪದೇಶಾರ್ಥಹೋಗಿ, ಉಪದೇಶಮಾಡಿ ಪ್ರತ್ಯಕ್ಷ ಎಲ್ಲಾ ದುರ್ಮಾ
ರ್ಗಿಗಳ ಪರಿಸ್ಥಿತಿ ತಿಳಿದುಕೊಂಡು ಪುನಃ ಪೀಠದವರಿಗೆ ತಿಳಿಸಲು
ಆಕ್ಷಣಕ್ಕೆ ಗುರುಪೀಠದವರು "ಕಂಬದ ತೆಕ್ಕಿ" ಕಾಯಕದಯ್ಯನವ
ರಿಗೆ—ನೀವು ಹೋಗಿ ನಿಮ್ಮ ಸತ್ಯಾಗ್ರಹದಿಂದ ಈ ದುರ್ಮಾರ್ಗಿ
ಯನ್ನು ಸನ್ಮಾರ್ಗಿಯನ್ನಾಗಿ ಮಾಡಿ ಬರಬೇಕೆಂದು ಆಜ್ಞಾಪಿಸು
ವರು. ಮಹಾಸತ್ಯಾಗ್ರಹಿಗಳಾದ ಈ ಕಂಬದ ತೆಕ್ಕೀಕಾಯಕದ
ವರು ಕೂಡಲೇ ಆ ಗ್ರಾಮಕ್ಕೆಹೋಗಿ ಆ ದುರ್ಮಾರ್ಗಿಯ ಮನೆಯ
ಬಾಗಿಲದೊಳಗಿನ ಅಥವಾ ಹೊರಗಿನ ಅವನ ಮನೆಯ ಹದ್ದಿನೊಳ
ಗಿನ ಕಂಭಕ್ಕೆ ತೆಕ್ಕಿ ಹಾಕಿಕೊಂಡು ನಿಂತುಬಿಡುವರು. ಈ ರೀತಿ
ಯಾಗಿ ೧-೨ ದಿವಸಗಳವರೆಗೂ ಸತತವಾಗಿ ಮೌನವ್ರತ ಉಪ
ವಾಸಗಳಿಂದ ಕಾಲಕಳೆಯಲು "ಜಗತ್ತಿನಲ್ಲಿ ಸರ್ವಾಂತರ್ಯಾಮಿ
ಯಾದ ಆತ್ಮವು ಒಂದೇ ಆಗಿಪ್ಪು ಆ ಜಂಗಮನ ಆತ್ಮದ ಮನವು
ಆ ದುರ್ಮಾರ್ಗಿಯನ್ನು ಅಥವಾ ಆತನ ಕುಟುಂಬದವರನ್ನು
ಅಥವಾ ಅವನ ಮನೆಯ ನೆರೆಹೊರೆಯ ಜನರನ್ನು ದಮಿಸದೇ
ಎಂದೂ ಬಿಡಲಾರದೆಂಬೀ ತತ್ವ ಸಿಧ್ಧಾಂತಕ್ಕೊಳಪಟ್ಟು ಆ ದುರ್ಮಾ
ರ್ಗಿಯು—"ಸ್ವಾಮಿ, ಇನ್ನು ನಾನು ನನ್ನ ದುರ್ಮಾರ್ಗವನ್ನು
ಬಿಟ್ಟು ತಮ್ಮಾಜ್ಞೆಯಂತೆ ವರ್ತಿಸುವೆನು. ತಾವು ಈ ವ್ರತದಿಂದ
ನಿವೃತ್ತರಾಗಿ ನನ್ನಲ್ಲಿ ಈಪತ್ತಿನ ದಿವಸ ಶಿವಾರ್ಚನಾದಿಗಳನ್ನುಮಾಡಿ
ನನಗೆ ಸುಖ-ಸಂತೋಷಪೂರ್ವಕವಾದ ಆಶೀರ್ವಚನವನ್ನಿತ್ತು
ನನ್ನನ್ನು ಪುನೀತನನ್ನಾಗಿ ಮಾಡಬೇಕೆಂದು ಬೇಡಲು, ಆಗ್ಗೆ ಅವರು
ಆ ಕಂಬದ ತೆಕ್ಕಿಯನ್ನು ಬಿಟ್ಟು ಅವನಲ್ಲಿ ಸ್ನಾನ ಶಿವಾರ್ಚನಾದಿಗ
ಳನ್ನು ತೀರಿಸಿಕೊಂಡು ಗುರುಪೀಠಕ್ಕೆ ಹೋಗಿ ನಡೆದ ವೃತ್ತಾಂತವ
ನ್ನೆಲ್ಲ ಗುರುಗಳಿಗೆ ಅರಿಕೆ ಮಾಡಿಕೊಳ್ಳುವರು. ಈ ರೀತಿಯಾಗಿ
ನಡೆಯುವಲ್ಲಿ ಪುನಃ ಘಂಟಿಕಾಯಕದವರು ತಮ್ಮ ನಿಯಮದಂತೆ ಆ
ಗ್ರಾಮಕ್ಕೆ ಹೋಗಿ ವಿಚಾರಿಸಲು ಅವನು ಕಲಿತ ಸ್ವಭಾವವನ್ನು
ಬಿಟ್ಟಿಲ್ಲೆಂಬ ವಾರ್ತೆಯು ತಿಳಿದರೆ ಅದರಂತೆ ಅವರು ಪುನಃ ಪೀಠಕ್ಕೆ
ತಿಳಿಸುವರು. ಆಗ್ಗೆ ಪೀಠದವರು ಹೋದ ಸಾರಿಗಿಂತಲೂ ಭೀಷಣ
ಪ್ರದನಾದ ಸತ್ಯಾಗ್ರಹಿಯನ್ನು ಕಳಿಸುವರು. ಇವರು ಮುಳ್ಳಾವಿಗಿ
ಕಾಯಕದವರು. ಗುರುವಾಜ್ಞಾನುಸಾರ ಈ ಮುಳ್ಳುಕಾಯಕದಯ್ಯ
ನವರು ಆ ಗ್ರಾಮಕ್ಕೆಹೋಗಿ ಅಲ್ಲಿಯ ಮಠದವರಿಂದ ಸರ್ವವೃತ್ತಾಂ
ತವನ್ನು ತಿಳಿದು ರೌದ್ರಾಕಾರದಿಂದ ಕೂಡಿದ ವೇಷವುಳ್ಳವರಾಗಿ ಆ
ದುರ್ಮಾರ್ಗಿಯ ಮನೆಯ ಬಾಗಿಲಕ್ಕೆ ಬಂದು,—ಎಲೈ ಪುರುಷನೇ!
ನೀನು ಲಿಂಗಾಂಗಿ ಧರ್ಮವನ್ನು ನಷ್ಟಮಾಡುವಿಯಾದ್ದರಿಂದ ನಿನ್ನ
ಧರ್ಮ ಬಂಧುವಾದ ನಾನು ನಿನ್ನೀ ಅಧರ್ಮವು ನಷ್ಟವಾಗಿ ನಿನಗೆ
ಧಾರ್ಮಿಕ ಬುದ್ಧಿ ಹುಟ್ಟುವದಕ್ಕಾಗಿ ನನ್ನ ಆತ್ಮದಮನದಿಂದ ದೇಹ
ಕ್ಲೇಶಮಾಡಿಕೊಳ್ಳುವೆನೆಂದು ಅವನ ಬಾಗಿಲಹೊರಗೆ ನಿಂತು ಗಂಭೀ
ರವಾಣಿಯಿಂದುಚ್ಚರಿಸಿ ಕಬ್ಬಿಣದ ಮುಳ್ಳುಳ್ಳ ಹಾವಿಗಿಯನ್ನೇ ಹತ್ತ
ಲಿಕ್ಕೆ ಹೋಗಲು ನೆರೆಯವರು ಅದೇ ಕ್ಷಣಕ್ಕೆ ಅಲ್ಲಿ ಮಿಳಿತರಾಗಿ—
"ಸ್ವಾಮಿ, ಹೀಗೆ ತಾವು ಮಾಡಬಾರದು. ನಾವು ಈಗಲೇ ಮನೆಯ
ಯಜಮಾನನಿಗೆ ಬೋಧ ಮಾಡಿ ತಮ್ಮಾಜ್ಞೆಯಂತೆ ವರ್ತಿಸಲು
ಹಚ್ಚುವೆವು. ಅದಕ್ಕೆ ನಾವು ಸಾಕ್ಷಿಭೂತರಿರುವೆ" ವೆಂದು ಹೇಳಿ, ಆ
ಯಜಮಾನನಿಗೆ,—"ಎಲೈ ಯಜಮಾನನೇ, ಸರ್ವಥಾ ನೀನು ಈ
ವ್ಯರ್ಥ ಗುರುದ್ರೋಹ, ಧರ್ಮ ದ್ರೋಹಾದಿಗಳಿಗೊಳಗಾಗಬೇಡ
ಧಾರ್ಮಿಕನಾಗಿ ವರ್ತಿಸುವೆನೆಂಬದಾಗಿ ಮನಃಪೂರ್ವಕ ಒಪ್ಪಿಕೋ"
ಎಂದು ಅವರು ಬೋಧಿಸಿದನಂತರ, "ಸ್ವಾಮಿ ನನ್ನದು ತಪ್ಪಾ
ಯಿತು. ನಾನು ತಪ್ಪದೇ ಧರ್ಮಿಷ್ಟನಾಗಿ ನಡೆಯುವೆನು." ಇತ್ಯಾದಿ
ಮಾತುಗಳನ್ನು ಆ ಯಜಮಾನನು ಹೇಳಿದ ಮೇಲೆ ಅವರಿಗೆ
ಯೋಗ್ಯ ದಕ್ಷಿಣಾದಿಗಳನ್ನು ಕೊಟ್ಟು, ಊಟ ಉಪಚಾರಗ
ಳನ್ನು ಮಾಡಿಸಿ ಕಳಿಸಿ, ಯಜಮಾನನು ಸನ್ಮಾರ್ಗಿಯಾಗಿ ನಡೆ
ಯಲು ಹತ್ತುವನು. ಈ ರೀತಿ ಪ್ರತಿಗ್ರಾಮಕ್ಕೂ ಧರ್ಮವಿವೇಚ
ನಾರ್ಥವಾಗಿ ವಿಪುಲ ಮಠಗಳನ್ನು ಮಾಡಿ ಅವರಿಗೆ ಸೇವಾಕ್ಕೆ ಬೇ
ಕಾದ ಸೇವಕರನ್ನು ತಯಾರಿಸಿ ಕೊಟ್ಟು ಈ ರೀತಿಯಾದ ಧರ್ಮ
ಬಂಧನದ ಪ್ರಚಾರದ ಉಪಾಯವನ್ನು ಬಸವೇಶನು ಹಾಕಿದ್ದರಿಂ
ದಲೇ ಎಲ್ಲಾ ಕಡೆಗೆ ಈ ಧರ್ಮದಲ್ಲಿ ಅಂಥಾ ಯೋಗ್ಯಮಹಿಮಾಶಾಲಿ
ಗಳಾದ ಅದ್ವಿತೀಯ ಪಂಡಿತ ಗುರುಗಳಾಗದೇ ಇದ್ದರೂ, ಪರಧರ್ಮ
ದ ಎಷ್ಟೋ ಅಘಾತಗಳು ಮೇಲಿಂದಮೇಲೆ ಆ ಧರ್ಮಕ್ಕೆ ಒದಗಿ
ದರೂ ಧರ್ಮವು ಈ ಮಹತ್ತರ ಬಂಧನದಿಂದ ಸ್ವಲ್ಪವೂ ಶಿಥಿಲವಾ
ಗದೇ ಉತ್ತರೋತ್ತರ ವೃದ್ಧಿಯನ್ನೇ ಹೊಂದುತ್ತಾ ಹೋಗಿರುವದು.
ಇದರಿಂದ ವೀರಶೈವರು ಬಸವೇಶನ ಎಷ್ಟು ಉಪಕಾರವನ್ನು ಮನ್ನಿ
ಸಿದರೂ ಸ್ವಲ್ಪವೇ ಸರಿ.

ಈ ಕಂಬದ ತೆಕ್ಕಿ, ಮುಳ್ಳಾವಿಗಿ, ಮೊದಲಾದ ವೀರಶೈವರ
ಧರ್ಮೋನ್ನತಿಯ ವ್ರತಗಳಲ್ಲಿ ಆತ್ಮ ದಮನರೂಪ ಸತ್ಯಾಗ್ರಹವಿಲ್ಲ
ವೆಂದು ಯಾವನು ತಾನೇ ಹೇಳುವನು! ಯಾವ ಭಾರತೀಯರು
ಧರ್ಮವನ್ನು ತಮ್ಮ ಪ್ರಾಣಕಿಂತ ಹೆಚ್ಚಿನದೆಂದು ಭಾವಿಸಿ ಅದ
ರಂತೆ ನಡೆಯುವರೋ, ಅಂಥಾ ಧರ್ಮವನ್ನೂ ಸಹ "ಸತ್ಯಾಗ್ರಹ"
ವೆಂಬ ವ್ರತವು ತನ್ನಾಧೀನಮಾಡಿರುವದೆಂದ ಮೇಲೆ ಸಾಮಾನ್ಯ
ವಾದ ರಾಜಕೀಯ ವಿಷಯವನ್ನು ಸತ್ಯಾಗ್ರಹ ವ್ರತದಿಂದ ಸಾಧಿಸು
ವದೇನಾಶ್ಚರ್ಯವು? ಈಗಿನ ಮಹಾತ್ಮಾ ಗಾಂಧಿ ಮೊದಲಾದ
ವರು ಈ ಸತ್ಯಾಗ್ರಹ ವ್ರತವನ್ನು ಶೋಧಿಸಿ ಹೊಸದಾಗಿ ಕಂಡು
ಹಿಡಿದಾಚರಿಸುವರೆಂಬ ಪ್ರಖ್ಯಾತಿಗೆ ಕಾರಣರಾಗಿರುವರು. ಆದರೆ
ಧಾರ್ಮಿಕ, ರಾಜಕೀಯ ವಿಷಯಗಳೆರಡನ್ನೂ ಸಾಧಿಸಿಕೊಳ್ಳುವ ಮೂ
ಲೋಪಾಯವೇ ಆತ್ಮ ದಮನರೂಪವಾದ "ಸತ್ಯಾಗ್ರಹ" ವೆಂದು
ದೂರದರ್ಶಿಯಾದ ಬಸವೇಶನೆಂಬ ಪುಣ್ಯಾತ್ಮನು ಏಳುನೂರ ವರ್ಷ
ದ ಹಿಂದೆಯೇ ಪರಿಶೋಧಿಸಿ ಅದರಂತೆ ಆಚರಿಸಲಿಕ್ಕೆ ಹತ್ತಿ ಜಗ
ತ್ತಿಗೆ ಕಿತ್ತೆ ಹಾಕಿದನು. ಆ ಕಿತ್ತೆಯನ್ನೇ ಮ|| ಗಾಂಧಿಮೊದಲಾದ
ವರು ತೀಡಲು ಸುರುಮಾಡಿರುವರು. ಅಂಥಾ ಪರೋಪಕಾರಾರ್ಥ
ವಾಗಿಯೂ, ರಾಷ್ಟ್ರ-ಧರ್ಮಗಳ ಉನ್ನತಿಗಾಗಿಯೂ ಆತ್ಮದಮನರೂ
ಪವಾದ ಸತ್ಯಾಗ್ರಹ ವ್ರತವನ್ನು ಬೋಧಿಸಿ, ಮತ್ತು ತಾನು ಅದ
ನ್ನಾಚರಿಸಿ ಹೋದ ಸತ್ಯಾಗ್ರಹ ವ್ರತದ ಮೊದಲನೇ ಶಿಕ್ಷಣದ
ಮರ್ಯಾದೆಯನ್ನು ಪಡೆದ ಬಸವೇಶನೇ ಧನ್ಯನು.

ಇನ್ನು ಬಸವೇಶನು ಕಂಡವರಿಗೆ ಲಿಂಗಧಾರಣ ಮಾಡಿಸಿದ್ದು
ಬಹಳ ತಪ್ಪುಮಾಡಿದನೆಂದು ಕೆಲವು ಅಜ್ಞರು ನಿಂದಿಸುತ್ತಿರುವರು.
ಆದರೆ ಅದು ಅವರ ತಪ್ಪುತಿಳುವಳಿಕೆಯು; ಯಾಕಂದರೆ ಬಸವೇ
ಶನು ಲಿಂಗಧಾರಣವನ್ನು ಸರ್ವರಿಗೆ ಮಾಡಿಸಿದ್ದು ಎಂಥಾ ಮಹತ್ಕಾ
ರ್ಯವೆಂಬುವದು ಎಷ್ಟು ಹೇಳಿದರೂ ತೀರದು. ಹಾಗೂ ಆ ಲಿಂಗ
ಧಾರಣವಿಧಾನವು ಶಾಸ್ತ್ರಮರ್ಯಾದೆಗೂ ಮೀರಿಲ್ಲ. ಹ್ಯಾಗಂದರೆ,

"ಸ್ತ್ರಿಯೋಬಾಲಾಸ್ತಥಾ ವೃದ್ಧಾಃ ಖಂಜಾಃ ಕುಬ್ಜಾಂಧ ಪಂಗವಃ |
ಮಲ್ಲಿಂಗಧಾರಣಾದೇವ ಮದ್ರೂಪಾ ಏವತೇ ಶಿವೇ ||
ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾಯೇಚಾನ್ಯ ಜಾತಯಃ |
ಲಿಂಗಧಾರಣಮಾತ್ರೇಣ ಶಿವ ಏವ ನಸಂಶಯಃ ||
ಯಸ್ಯಾಸ್ತಿ ಭಕ್ತಿರೀಶಾನಿ ವೀರಶೈವ ಮತಾಶ್ರಯೇ |
ಭಕ್ತಿಮಾತ್ರ ಪವಿತ್ರಾಹಿ ಸರ್ವಏವಾಧಿಕಾರಿಣಃ ||

ಎಂದು ಸಮಸ್ತರಿಗೆ ಲಿಂಗಧಾರಣದಧಿಕಾರವುಂಟೆಂಬ ಪಾರಮೇಶ್ವ ರಾಗಮವಚನದಂತೆ ಬಸವೇಶನು, ಲಿಂಗಧಾರಣ ಮಾಡಿಸಿಕೊಳ್ಳ ಲಿಕ್ಕೆ ಸರ್ವರಿಗೆ ಮೋಕಳೀಕ ಮಾಡಿದನು. ಇದರಲ್ಲಿ ಅವನಿಗೆ ಅಂತರಿಕ ದೇಶಾಭಿಮಾನದ ಕಳಕಳಿ ಇದ್ದು ಅದರಿಂದಲೇ ಲಿಂಗಾಂ ಗಿಧರ್ಮವು ಸಾರ್ವಭೌಮವಾಗುವದೆಂದು ನಂಬಿದ್ದನು. ಎಲ್ಲಿ ಕಂ ಡಲ್ಲಿಯೂ ಲಿಂಗವನ್ನೇ ಕಾಣಬೇಕೆಂಬೀ ಈಶ್ವರಾಸ್ತಿಕ ಬುದ್ಧಿಯು ಅವನ ಮೊದಲನೇ ದ್ಯೋತನೆಯು; ಈ ಧರ್ಮದಂಥಾ ಉದಾತ್ತ ತತ್ವವು ಮತ್ತಿನ್ನಾವ ಧರ್ಮದಲ್ಲಿಯೂ ಇಲ್ಲದ್ದರಿಂದ ಐಹಿಕಾಮು ಷ್ಮಿಕ ಸುಖಗಳೆರಡನ್ನೂ ಬಹು ಸುಲಭವಾಗಿ ಸಾಧಿಸಬಹುದೆಂಬ ವಿಚಾರಮಾಡಿ ಸರ್ವತ್ರ ಒಂದೇ ಲಿಂಗಾಂಗಿಧರ್ಮವಾದಲ್ಲಿ ರಾಷ್ಟ್ರ ದ ಐಕ್ಯವು ಉಳಿಯುವದೆಂಬ ಎರಡನೇ ಹೇತುವು; ಸರ್ವವೂ ಲಿಂಗ ಮಯವಾದದ್ದೆಂದು ಅಧ್ಯಾತ್ಮವಿಚಾರ ತೋರಿಸುವದು ಮೂರನೇ ಹೇತುವು. ಇನ್ನು ಸರ್ವಸಾಮಾನ್ಯವಾಗಿ ಲಿಂಗಾಂಗಿ ಧರ್ಮವನ್ನು ಅಭಿವೃದ್ಧಿ ಮಾಡುವ ಅಭಿಮಾನವಂತೂ ಬಾಹ್ಯಾಂತರದಲ್ಲಿಯೂ ಇದ್ದದ್ದೇ. ಒಬ್ಬ ಲಿಂಗಾಂಗಿಯ ದುಡ್ಡು ಸಾಂಸಾರಿಕ ಪದಾರ್ಥಗ ಳನ್ನು ತೆಗೆದುಕೊಳ್ಳುವ ಉದ್ದೇಶದಿಂದಲೇ ಆಗಲಿ ಅಥವಾ ಕೂಲಿ ಕುಂಬಳಿ, ನೌಕರಿ ಮೊದಲಾದ ನಿಮಿತ್ತದಿಂದಲೇ ಅಗಲಿ, ಎರಡನೆ ಲಿಂಗಿಯವರ ಕಡಿಗೆ ಹೋಗಬಾರದೆಂಬ ಮುಖ್ಯ ಸ್ವದೇಶೀಭಾವ ದಿಂದ ಲಿಂಗಾಂಗಿಧರ್ಮಾಭಿಮಾನ ಉಳಿಯಲೆಂತಲೂ, ಸರ್ವರಿಗೂ ಅಂದರೆ ಅಗಸರು, ಕುಂಬಾರರು, ಕ್ಷೌರಿಕರು ಮೊದಲಾದವರಿಗೂ ಲಿಂಗಧಾರಣ ಮಾಡಿದನು. ಇವನೇ ಸ್ವದೇಶಾಭಿಮಾನದ—ಸ್ವದೇ ಶೀಚಳವಳಿಯ ಮೊದಲನೇ ಶಿಕ್ಷಕನು. ಇವನು ಸರ್ವಪ್ರಾಣಿ ಮಾತ್ರಕ್ಕೂ ನಿಷ್ಪಕ್ಷಪಾತದಿಂದ ಹಿತಚಿಂತಕನಾದ್ದರಿಂದಲೇ ನೇ ಇವನಿಗೆ ನಂದಿ, ವೃಷಭಾದಿ ಅವತಾರವೆಂದು ಹೊಗಳಿದರು. ಆದರೆ "ಲೋಕಾನ್ನಂದಯತೀತಿ ನಂದಿಃ" "ವೃಷಂ ಧರ್ಮಂಭಾತೀತಿ ವೃಷಭಃ" ಇತ್ಯಾದಿ ಶಬ್ದಗಳು ಲೋಕೋನ್ನತಿ (ದೇಶೋನ್ನತಿ) ಧರ್ಮೋನ್ನತಿಗಳನ್ನೇ ಬೋಧಿಸುತ್ತಿದ್ದು ಅದರಂತೆ ಅವನು ಕೃತಿ ಗಳನ್ನೇ ಮಾಡಿದ್ದರಿಂದ ಅವನಿಗೆ ಈ ನಾಮವು ಸರ್ವಥಾ ಸಾರ್ಥ ಕಗಳಾಗಿರುವವು.

ಬಸವೇಶನ ರಾಜನೀತಿಯು ಚಾಣಕ್ಯನ ರಾಜನೀತಿಗಿಂ ತಲೂ ಬಹು ಉಚ್ಚ ದರ್ಜೆಯುಳ್ಳದ್ದು. ಯಾಕಂದರೆ, ಇವನು ಚಾಣಿಕ್ಯನಂತೆ ಸ್ವಾರ್ಥಿಯಲ್ಲ; ಸ್ವಾರ್ಥಾಪಮಾನಾದಿಗಳಿಂದ ಪ್ರೇರಿ ತನೂ ಅಲ್ಲ; ಪೇಶ್ವಾದಿಗಳಂತೆ ಒಬ್ಬರ ರಾಜ್ಯ ಕಸುಕೊಳ್ಳಬೇಕೆಂಬ ದುರಾಶೆಯುಳ್ಳ ಕುಟಿಲನೂ ಅಲ್ಲ. ಆದರೆ, ಲೋಕದಲ್ಲಿ ರಾಜನಿಂದ ಅನ್ಯಾಯವಾಗದಂತೆ ಪ್ರಜಾಸಮ್ಮತಿ ಪೂರ್ವಕ ರಾಜ್ಯದಾಡಳತ ನಡೆದು, ರಾಜ-ಪ್ರಜೆಗಳೀರ್ವರೂ ಸುಖದಿಂದಿರದೇಕೆಂಬುವದೇ ಬಸವೇಶನ ಮುಖ್ಯ ರಾಜನೀತಿಯ ತತ್ವವು. ಚಾಣಿಕ್ಯನು ಮಹಾ ಕ್ರೂರನು ಮತ್ತು ತನ್ನ ಪಮಾನದುದ್ದಿಶ್ಯ ನವನಂದಾದಿಗಳನ್ನು ಕೊಲ್ಲುವ ಆತ್ಮಹಿಂಸಾಪ್ರೇರಿತ ರಾಕ್ಷಸೀ ಕೃತಿಯುಳ್ಳವನು; ಮತ್ತು ಧರ್ಮಾಧರ್ಮ ಪಾಪ ಪುಣ್ಯಾದಿಗಳ ವಿಚಾರರಹಿತನು. ಆದರೆ ಯಾರಾದರೊಂದುವೇಳೆ ತಪ್ಪು ತಿಳುವಳಿಕೆಯಿಂದ ಬಸವೇಶನು ಬಿಜ್ಜ ಳನನ್ನು ಕೊಲ್ಲಿಸಿದನೆಂದು, ರಾಜದ್ರೋಹವನ್ನು ಅವನ ಮೇಲೆ ಆರೋಪಿಸಬಹುದು. ಆದರೆ ಈ ಹಿಂಸಾವೃತ್ತಾಂತವು ಬಸವೇಶ ನಿಗೆ ಸ್ವಪ್ನದಲ್ಲಿಯೂ ಗೊತ್ತಿರಲಿಲ್ಲ; ಯಾರೋ ಧರ್ಮದ ದುರಭಿ ಮಾನದಿಂದ ಪ್ರೇರಿತರಾಗಿ ಕೊಂದರು; ಅಂತೂ ಕೊಂದವರು ಮಾತ್ರ ವೀರಶೈವರು. ಆದರೆ ಇಷ್ಟರಿಂದಲೇ ಬಸವೇಶನಿಗೆ ಆ ಕಲಂಕವು ಹತ್ತಲಾರದು. ರಾಜ್ಯದಾಶೆಯಿಂದ ಬಸವೇಶನು ತಾನಾ ಗಿಯೇ ಬಿಜ್ಜಳನನ್ನು ಕೊಲ್ಲಿಸಿದ್ದರೆ, ಬಿಜ್ಜಳನು ಸತ್ತನೆಂಬ ವಾರ್ತೆ ಯನ್ನು ಕೇಳಿದಾಕ್ಷಣಕ್ಕೆ ತನ್ನಲ್ಲಿ ಗುಪ್ತದಿಂದ ಕಾದಿರುವ ಒಂದು ಲಕ್ಷ ತೊಂಭತ್ತಾರು ಸಾವಿರದ ಮಹಾ ಸೈನಿಕರೊಂದಿಗೆ ಮುತ್ತಿಗೆ ಹಾಕಿ, ತಾನು ರಾಜನೆಂಬ ಜಯಭೇರಿಯನ್ನು ಹೊಡಿಸುತ್ತಿದ್ದನು. ಆದರೆ ಹಾಗೆ ಮಾಡದೇ ಅವನು ಸತ್ತಾಕ್ಷಣಕ್ಕೆ ನಿರಪೇಕ್ಷ ಬುದ್ಧಿ ಯಿಂದ ದುಃಖಿತನಾಗಿ ಮಂತ್ರಿಪದವನ್ನೂ ಸಹ ತ್ಯಾಗಮಾಡಿ ಆ ಸ್ಥಳವನ್ನೇಬಿಟ್ಟು ಹೊರಟುಹೋದನೆಂಬ ವಾರ್ತೆಯೇ ಇವನ ಔದಾ ರ್ಯದ್ಯೋತಕವು.

ಇನ್ನು ಲಿಂಗಾಂಗಿಧರ್ಮ ಪ್ರಚಾರಮಾಡಿದನೆಂದಾಕ್ಷಣಕ್ಕೆ ಇವನು ದುಷ್ಟನೆನ್ನಬಹುದೇ? ಹಾಗಲ್ಲ. ಅಶೋಕ, ಅಕಬರಾದಿ ಗಳೂ ಸ್ವಧರ್ಮ ಪ್ರಚಾರವನ್ನು ಮಾಡುತ್ತ ರಾಜ್ಯವನ್ನಾಳಿದರೂ ಅವರು ಮಹಾ ಶ್ರೇಷ್ಠಪುರುಷರೆಂದು ಇತಿಹಾಸಿಕರಿಂದ ಹೇಗೆ ವರ್ಣಿ ಸಲ್ಪಟ್ಟಿರುವರೋ, ಅದರಂತೆಯೇ ಬಸವೇಶನೂ ವಿಶ್ವಾತ್ಮ-ವಿಶ್ವ ಕುಟುಂಬಿಯಾದ್ದರಿಂದ ಮಹಾ ಶ್ರೇಷ್ಠಪುರುಷನೆಂತಲೇ ಹೇಳ ಬಹುದು.

ರಾಷ್ಟ್ರೋನ್ನತಾದಿಗಳಿಗೆ ಮುಖ್ಯ ಕಾರಣವು "ಸರ್ವಂ ಧರ್ಮ ಮೂಲಂ" ಎಂಬ ನೀತಿವಾಕ್ಯದಂತೆ ಸರ್ವವೂ ಧರ್ಮೋನ್ನತಿಯಿಂ ದಲೇ ಆಗುವದೆಂದು ಕಂಡುಹಿಡಿದು, ಆ ಧರ್ಮಸ್ಫೂರ್ತಿಯಿಂದ ಪ್ರೇರಿತನಾಗಿ ಮಹಾ ಸೌಮ್ಯವರ್ತನದಿಂದಲೇ ಸರ್ವವನ್ನೂ ಸಾಧಿಸಿ ದನು. ಇಂಥಾ ಲೋಕೋತ್ತರ ರಾಜನೀತಿಜ್ಞನೂ ಧರ್ಮವೀ ರನೂ ಆದ ಬಸವೇಶನನ್ನು ತನ್ನ ಗರ್ಭದಿಂದ ಕೊಟ್ಟ ಭರತ ಭೂ ಮಾತೆಯೇ ಧನ್ಯಳು! ಅಂಥಾ ಧರ್ಮ ವೀರಪುರುಷನಿಂದಲಂಕೃತ ವಾದ ಲಿಂಗಾಂಗಿ ಧರ್ಮವೇ ಮಹಾ ಧನ್ಯ—ಮಹಾಧನ್ಯ!!

# ಮಹಾನುಭಾವರಾದ ಶ್ರೀ ಬಸವಣ್ಣನವರು.

**ಲೇಖಕ :—ಶ್ರೀಯುತ ಹರ್ಡೇಕರ್ ಮಂಜಪ್ಪನವರು. ವೀರಶೈವ ವಿದ್ಯಾಲಯ, ಆಲಮಟ್ಟಿ.**

ಒಂದು ವ್ಯಕ್ತಿಯಿಂದ ರಾಷ್ಟ್ರದಲ್ಲುಂಟಾಗತಕ್ಕ ಲೋಕ ಜಾಗ್ರತಿಗೆ ಲೋಕ ಶಿಕ್ಷಣ ಮತ್ತು ಲೋಕಸಂಘಟನೆಗಳ ಮೇಲಿಂದಲೇ ಆ ವ್ಯಕ್ತಿಯ ಮಹತ್ವವು ವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದ ನೋಡಿದರೆ ಈ ನಮ್ಮ ಕರ್ನಾಟಕದಲ್ಲಿ ಈವರೆಗೆ ಆಗಿಹೋಗಿರುವ ಮಹಾಪುರುಷರಲ್ಲಿ ಮಹಾನುಭಾವರಾದ ಬಸವಣ್ಣನವರೇ ಶ್ರೇಷ್ಠರೆಂದು ತೋರುತ್ತದೆ. ಏಕೆಂದರೆ, ಇವರ ಅವತಾರ ಕೃತ್ಯದಿಂದ ಜನಸಾಮಾನ್ಯದಲ್ಲುಂಟಾದಷ್ಟು ಧಾರ್ಮಿಕ ಜಾಗ್ರತಿ, ನೈತಿಕ ಶಿಕ್ಷಣ ಮತ್ತು ಪ್ರೇಮದ ಸಂಘಟನೆಗಳು ಇನ್ನಾವ ಮತೋದ್ಧಾರಕರ ಕೃತ್ಯಗಳಿಂದಲೂ ಉಂಟಾಗಲಿಲ್ಲ.

ಈ ಮಹಾನುಭಾವರು ತಮ್ಮ ಧಾರ್ಮಿಕ ಜಾಗ್ರತೆಗೆ ಜ್ಞಾನ, ಕ್ರಿಯೆ, ಯೋಗಗಳೆಂಬ ಕಠಿಣಮಾರ್ಗಗಳನ್ನು ಮೂಲವಾಗಿಟ್ಟುಕೊಳ್ಳದೆ ಜನಸಾಮಾನ್ಯರಿಗೂ ಕೂಡಾ ಸಾಧಿಸಬಹುದಾದ ಭಕ್ತಿಮಾರ್ಗವನ್ನೇ ಮುಖ್ಯವಾಗಿಟ್ಟುಕೊಂಡಿದ್ದರೆಂಬುದು ಈ ಕೆಳಗಿನ ವಚನದಿಂದಲೇ ಸ್ಪಷ್ಟವಾಗುತ್ತದೆ.

ನಾದಪ್ರಿಯಶಿವನೆಂಬರು ನಾದಪ್ರಿಯ ಶಿವನಲ್ಲವಯ್ಯ |
ವೇದಪ್ರಿಯ ಶಿವನೆಂಬರು ವೇದಪ್ರಿಯ ಶಿವನಲ್ಲವಯ್ಯ |
ನಾದವ ಮಾಡಿದ ರಾವಣಂಗೆ ಅರೆಯಾಯುಷ್ಯವಾಯಿತ್ತು |
ವೇದವನೋದಿದ ಬ್ರಹ್ಮನ ಶಿರಹೋಯಿತ್ತು |
ನಾದಪ್ರಿಯನೂ ಅಲ್ಲ | ವೇದಪ್ರಿಯನೂ ಅಲ್ಲ |
ಭಕ್ತಿಪ್ರಿಯ ನಮ್ಮ ಕೂಡಲ ಸಂಗಮದೇವ ||

ಶ್ರೀ ಬಸವಣ್ಣನವರು ತಮ್ಮ ಭಕ್ತಿಮಾರ್ಗವನ್ನನುಸರಿಸುವವರಿಗೆ ಸದ್ಗುಣ ಸದಾಚಾರಗಳೇನೂ ಅವಶ್ಯವಾಗಿಲ್ಲವೆಂದು ಆ ವಿಷಯಗಳನ್ನು ಉಪೇಕ್ಷಿಸಿರಲಿಲ್ಲ. ಏಕೆಂದರೆ ಅದೇನೂ ಮೂಢಮಾರ್ಗವಾಗಿರಲಿಲ್ಲ. ಬಸವಣ್ಣನವರ ಮಾರ್ಗವು ಪ್ರೇಮದ ಮಾರ್ಗವಾಗಿದ್ದಿತು. ಶಿವಭಕ್ತನಾಗುವವನಿಗೆ ಸದ್ಗುಣ ಸದಾಚಾರಗಳು ಅತ್ಯವಶ್ಯಕವಾಗಿಯೇ ಇವೆಯೆಂತಲೂ, ಅವುಗಳಿಲ್ಲದಿದ್ದರೆ ಪರಮಾತ್ಮನ ಕೃಪೆಯು ದೊರೆಯುವುದಿಲ್ಲವೆಂತಲೂ, ಸ್ಪಷ್ಟವಾಗಿ ಬೋಧಿಸುತ್ತಿದ್ದಾರೆಂಬುದು ಈ ಕೆಳಗಿನ ವಚನಗಳಿಂದ ವ್ಯಕ್ತವಾಗುತ್ತದೆ.

ಕುಂಬಳದಕಾಯಿಗೆ ಕಬ್ಬುನದ ಕಟ್ಟುಕೊಟ್ಟರೆ ಕೊಳೆವುದಲ್ಲದೆ ಬಲುವಾಗಬಲ್ಲದೇ ? ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿಯೆಂತಹುದು ಮುನ್ನಿನಂತಲ್ಲದೇ ? ಕೂಡಲ ಸಂಗಯ್ಯ ಮನಹೀನನ ಮೀಸಲಗಾಯಿಗಿರಿಸಿದಂತೆ ||

ಅಂಗದಿಚ್ಚೆಗೆ ಮದ್ಯಮಾಂಸವ ತಿಂಬರು | ಕಂಗಳಿಚ್ಚೆಗೆ ಪರವಧುವನೆರೆವರು | ಲಿಂಗಲಾಂಛನಧಾರಿಯಾದಲ್ಲಿ ಫಲವೇನು? ಲಿಂಗಪಥವ ತಪ್ಪಿ ನಡೆವರು| ಜಂಗಮಮುಖದಿಂದ ನಿಂದೆ ಬಂದರೆ | ಕೊಂಡಮಾರಿಂಗೆ ಹೋಹುದು ತಪ್ಪದು. ಕೂಡಲ ಸಂಗಮದೇವ ||

ಬಂಡಿತುಂಬ ಪತ್ರೆಯ ತಂದು ಕಂಡಕಂಡಲ್ಲಿ ಮಜ್ಜನಕ್ಕೆರೆವರೆ ? ತಾಪತ್ರಯವ ಲಿಂಗವನೊಲ್ಲ | ಕೂಡಲ ಸಂಗಮದೇವ ಬರಿಯುದಕದಲ್ಲಿ ನೆನೆವನೆ?

ಶಿವಭಕ್ತಿ ಸದ್ಗುಣ ಸದಾಚಾರಗಳು ಯಾರಲ್ಲಿದ್ದರೂ ಅವರೆಲ್ಲರೂ ಬಸವಣ್ಣನವರಿಗೆ ಪೂಜ್ಯರಾಗಿಯೇ ಇದ್ದರು. ಅವರು ಈ ವಿಷಯಗಳಲ್ಲಿ ಕುಲ, ಕಸಬು ಹೆಣ್ಣು ಗಂಡುಗಳೆಂಬ ಸಂಕುಚಿತವಾದ ಭಿನ್ನಭೇದಗಳನ್ನಿಟ್ಟಿರಲಿಲ್ಲ. ಮನುಷ್ಯಜಾತಿಯ ಉದ್ಧಾರಕ್ಕೆ ಅತ್ಯವಶ್ಯಕವಾಗಿರುವ ಗುಣವಿಶಿಷ್ಟವಾದ ಈ ಶ್ರೇಷ್ಠತತ್ವವನ್ನು ಯಾವಪ್ರಕಾರ ಬೋಧಿಸುತ್ತಿದ್ದಾರೆಂಬುದಕ್ಕೆ ಈ ಕೆಳಗಿನ ವಚನಗಳೇ ದೃಷ್ಟಾಂತಗಳಾಗಿವೆ.

ಶ್ವಪಚನಾದರೇನು ? ಲಿಂಗಭಕ್ತನೇ ಕುಲಜನು |
ನಂಬಿನಂಬದಿದ್ದರೆ ಸಂದೇಹಿನೋಡಾ |
ಕಟ್ಟಿದರೇನು, ಬಿಟ್ಟರೇನು ? ಪೂಜಿಸಿದರೇನು
ಮಾನವಮುಟ್ಟದನ್ನಕ್ಕೆ ? | ಭಾವಶುದ್ಧವಿಲ್ಲ
ದವಂಗೆ ಭಕ್ತಿ ನೆಲೆಗೊಳ್ಳದು | ಕೂಡಲ ಸಂಗ
ಯ್ಯನೊಲಿದವಂಗಲ್ಲದೆ ||
ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ |
ಜಲಬಿಂದುವಿನ ವ್ಯವಹಾರವೊಂದೆ |
ಆಶೆಯಾಮಿಷಹರುಷ ವಿಷಯಾದಿಗಳೆಲ್ಲವೊಂದೆ |
ಏನನೋದಿ ಏನಕೇಳಿ ಏನುಫಲ ?
ಕುಲಜನೆಂಬುದಕ್ಕೆ ಆವುದುದೃಷ್ಟ? "ಸಪ್ತಧಾತುಸಮಂಪಿಂಡ||
ಸಮಯೋನಿ ಸಮುದ್ಭವಂ | ಆತ್ಮಜೀವ ಸಮಾಯುಕ್ತಂ |
ವರ್ಣಾನಾಂಕಿಂ ಪ್ರಯೋಜನಂ | " ಎಂದುದಾಗಿ ಕಾಸಿ
ಕಮ್ಮಾರನಾದ | ಬೀಸಿ ಮಡಿವಾಳನಾದ | ಹಾಸನಿಕ್ಕಿಸಾಲಿಗ
ನಾದ | ವೇದವನೋದಿ ಹಾರುವನಾದ | ಕರ್ಣದಲ್ಲಿ ಜನಿಸಿ
ದವ-ರುಂಟೆ | ಜಗದೊಳಗೆ ? ಇದುಕಾರಣ ಕೂಡಲ ಸಂಗವ್ಮು
ದೇವ ಲಿಂಗಸ್ಥಲವನರಿದವನೆ ಕುಲಜನು ||

ಗುಣವಿಶಿಷ್ಟವಾದ ವರ್ಣ ವ್ಯವಸ್ಥೆಯು ಲೋಪವಾಗಿ ವರ್ಣಗಳಿಗೆ ಜನ್ಮವೇ ಪ್ರಾಧಾನ್ಯವಾಗಿ ಪರಿಣಮಿಸಿದುದರಿಂದ ಜನಾಂಗವು ಅಧೋಗತಿಗೀಡಾಗುತ್ತಿದ್ದುದನ್ನು ನೋಡಿಯೇ

ಈ ಮಹಾನುಭಾವರು ಗುಣಕ್ಕೆ ಪ್ರಾಧಾನ್ಯವನ್ನು ಕೊಟ್ಟು ಕಮಲವು ಕೆಸರಿನಲ್ಲಿ, ರತ್ನವು ಕಲ್ಲಿನಲ್ಲಿ, ಮುತ್ತು ಸಿಂಪೆಯಲ್ಲಿ ಹುಟ್ಟಿದ್ದರೂ ಅವುಗಳ ಜನ್ಮಸ್ಥಳವನ್ನು ಯೋಚಿಸದೆ ಅವುಗಳ ಲ್ಲಿರುವ ಗುಣಗಳ ಮೇಲಿಂದಲೇ ಹೇಗೆ ಅವು ಗುಣಜ್ಞರಿಂದ ಆದರಿಸಲ್ಪಡುತ್ತಲಿವೆಯೋ ಹಾಗೆಯೇ ಶಿವಭಕ್ತಿಜ್ಞಾನ ಸದಾ ಚಾರಗಳುಳ್ಳವರು ಯಾವ ಕುಲದಲ್ಲಿ ಹುಟ್ಟಿದರೂ ಗುಣೈಕ ಪಕ್ಷಪಾತಿಗಳಾದ ಬಸವಣ್ಣನವರು ಅವರ ಜನ್ಮಕುಲವನ್ನೆಣಿ ಸದೆ ಅವರು ಪೂಜ್ಯರೆಂದೇ ಭಾವಿಸಿದರು. ಈ ವಿಚಾರವು ಪ್ರಾಯಶಃ ವಾದದ ಮಟ್ಟಿಗೆ ಮಾತ್ರ, ಸಕಲರಿಗೂ ಮಾನ್ಯವಾ ಗುವಂತಿದ್ದರೂ ಅದರಂತೆಯೇ ಆಚರಣೆಯಲ್ಲಿ ತರುವ ಮಹ ನೀಯರು ಅತ್ಯಂತ ವಿರಳ. ಭಗವಾನ ಬುದ್ಧದೇವನ ತರು ವಾಯ ಈ ಮಹಾನುಭಾವರಾದ ಬಸವಣ್ಣನವರ ವರೆಗೆ ಭರತ ಖಂಡದಲ್ಲಿ ಅವತರಿಸಿದ ಯಾವ ಧರ್ಮೋದ್ಧಾರಕರೂ ಜನಾಂಗದ ಅಭಿವೃದ್ಧಿಗೆ ಅವಶ್ಯಕವಾಗಿರುವ ನ್ಯಾಯವಾದ ಈ ಶ್ರೇಷ್ಠ ತತ್ವವನ್ನು ಜೀರ್ಣೋದ್ಧಾರ ಮಾಡಲಿಲ್ಲ. ಹಾಗೆ ಮಾಡದಿದ್ದರೆ ಈಗ ಆರ್ಯ ಸಮಾಜದವರು ಶುದ್ಧಿ ಸಭೆಯ ನ್ನೇರ್ಪಡಿಸಬೇಕಾಗುತ್ತಿರಲಿಲ್ಲ, ಮತ್ತು ಹಿಂದೂಮಹಾ ಸಭೆಯಲ್ಲಿ ಸನಾತನ ವೈದಿಕ ಧರ್ಮಾಭಿಮಾನಿಗಳಾದ ಮಹಾ ಮಹೋಪಾಧ್ಯಾಯರು ಕೂಡಿ ಅನ್ಯ ಧರ್ಮದವರನ್ನು ವೈದಿಕ ಧರ್ಮದಲ್ಲಿ ತೆಗೆದುಕೊಳ್ಳಬೇಕೆಂದು ತೀರ್ಮಾನಿಸುವ ಪ್ರಸಂ ಗವೂ ಬರುತ್ತಿರಲಿಲ್ಲ. ಇಷ್ಟೇ ಅಲ್ಲ. ಹಿಂದು ಧರ್ಮದವ ರಿಗೆ ಈಗಿನ ಧಾರ್ಮಿಕ ಮತ್ತು ಸಾಮಾಜಿಕ ಶೋಚನೀಯ ಸ್ಥಿತಿಯೂ ಉಂಟಾಗುತ್ತಿರಲಿಲ್ಲ.

ಬಸವಣ್ಣನವರು ಈ ಪ್ರಕಾರ ಕೇವಲ ನುಡಿದವರಲ್ಲ. ಇದರಂತೆಯೇ ನಡೆದು ತೋರಿಸಿದವರಾಗಿದ್ದಾರೆ, ಅನ್ಯರಿಗೂ ಇವರಿಗೂ ಇರತಕ್ಕ ವ್ಯತ್ಯಾಸವು ಇದೇಸರಿ. ಶ್ರೀ ಬಸವಣ್ಣ ನವರಿಗಿಂತಲೂ ಬುದ್ಧಿಶಾಲಿಗಳೂ, ತರ್ಕ ವ್ಯಾಕರಣಾದಿ ಶಾಸ್ತ್ರಜ್ಞರೂ ಭಾಷ್ಯಕಾರರೂ, ಅನೇಕರು ಆಗಿಹೋದರು. ಆದರೆ ಇವರಂತೆ ನುಡಿಗೆ ಸರಿಯಾಗಿಯೇ ನಡೆದು ತೋರಿಸಿ ಜನಾಂಗದಲ್ಲಿ ಅತ್ಯದ್ಭುತವಾದ ವಿಚಾರಕ್ರಾಂತಿಯನ್ನುಂಟು ಮಾಡಿದವರು ಮಾತ್ರ ಬುದ್ಧದೇವನ ತರುವಾಯ ಈವರಿಗೆ ಯಾರೂ ಜನ್ಮವೆತ್ತಿರಲಿಲ್ಲ. ಬಸವಣ್ಣನವರ ಕಾಲಕ್ಕೆ ಕಲ್ಯಾ ಣದಲ್ಲಿದ್ದ ಶಿವನಾಗಮಯ್ಯನವರೆಂಬ ಒಬ್ಬ ಮಹಾ ಶಿವಯೋ ಗಿಗಳು ಜನ್ಮದಿಂದ ಅಂತ್ಯಜರಾಗಿದ್ದರೂ ಬಸವಣ್ಣನವರು ತಾವು ಜನ್ಮದಿಂದ ಬ್ರಾಹ್ಮಣರೆಂದು ಆ ಮಹಾನುಭಾವರನ್ನು ಉಪೇಕ್ಷಿಸದೆ ಆ ಪರಮ ಪೂಜ್ಯರ ಪಾದೋದಕ ಪ್ರಸಾದ ವನ್ನು ಸೇವಿಸುತ್ತಿದ್ದರು. ಇಂತಹ ಗುಣೈಕ ಪಕ್ಷಪಾತಿಗಳು ಜಗತ್ತಿನಲ್ಲಿ ಅತ್ಯಂತ ವಿರಳವಲ್ಲವೇ ?

ಗುಣ ಪ್ರಾಮುಖ್ಯತೆಯನ್ನು ಹೇಗೆ ಎಲ್ಲರೂ ಒಪ್ಪಿಕೊ ಳ್ಳುತ್ತಿದ್ದರೂ ಕುಲಾಭಿಮಾನದಿಂದ ಗುಣಿಗಳನ್ನು ಮಾತ್ರ ಹೆಚ್ಚುಕಡಿಮೆಯಾಗಿ ದೊರೀಕರಿಸುತ್ತಲೇ ಇರುತ್ತಾರಷ್ಟೇ. ಅನ್ಯರು ಮಾತ್ರ ತಮ್ಮ ಗುಣಕ್ಕೆ ಗೌರವ ಕೊಡದಿದ್ದರೆ ಅವರು ಸ್ವಾರ್ಥಿಗಳೂ ದುರಭಿಮಾನಿಗಳೂ ಎಂದು ಹೇಗೆ ಸಕಲರೂ ಹೇಳುತ್ತಿರುತ್ತಾರೆಯೋ ಹಾಗೆಯೇ ತಾವು ಕೂಡ ಅನ್ಯರ ಗುಣವನ್ನು ಅವರ ಕುಲದ ಕಡೆಗೆ ಲಕ್ಷಿಸಿ ಉಪೇಕ್ಷಿಸುತ್ತಾ ಇರುತ್ತಾರಲ್ಲವೋ ? ಈ ಭೇದ ಬುದ್ಧಿಯು ನುಡಿ ಮಾತ್ರದಲ್ಲಿ ಹೋಗುವದೇನೂ ಮುಖ್ಯವಲ್ಲ. ಅದು ನಡೆಯಲ್ಲಿಯೂ ಅಳಿದು ಹೋಗಬೇಕು. ಆಗ ಅವರೇ ಲೋಕಪೂಜ್ಯರಾಗು ತ್ತಾರೆ. ಮಹಾನುಭಾವರಾದ ಬಸವಣ್ಣನವರು ಈ ಭೇದ ಬುದ್ಧಿಯನ್ನು ತಮ್ಮ ನಡೆಯಲ್ಲಿಯೂ ತೆಗೆದು ಹಾಕಿದ್ದರಿಂದಲೆ ಅವರು ಇಷ್ಟು ವಂದ್ಯರಾಗಿದ್ದಾರೆ.

ಬಸವಣ್ಣನವರು ಈ ಪ್ರಕಾರ ಸಕಲರಿಗೂ ಪಾರಮಾ ರ್ಥಿಕ ಜ್ಞಾನಾರ್ಜನೆಯ ವಿಷಯದಲ್ಲಿ ಸಮಾನವಾದ ಸ್ವಾ ತಂತ್ರ್ಯ ಸೌಲಭ್ಯಗಳನ್ನುಂಟುಮಾಡಿ ಕೊಟ್ಟದ್ದರಿಂದ ಅಂತ್ಯ ಜಾತಿ ಕೀಳು ಕುಲದವರೆಂದು ಯಾರನ್ನು ಅನೇಕರು ಆಕ್ಷೇಪಿ ಸುತ್ತಿದ್ದರೋ ಮತ್ತು ಆಕ್ಷೇಪಿಸುತ್ತಿದ್ದಾರೆಯೋ ಆ ಮಾ ದಾರ ಚೆನ್ನಯ್ಯ, ಮೇದಾರಕೇತಯ್ಯ, ದೋಹರ ಕಕ್ಕಯ್ಯ, ಕಿನ್ನರಿ ಬ್ರಹ್ಮಯ್ಯ ಮೊದಲಾದ ಅನೇಕ ಪರಮ ಪೂಜ್ಯರು ಮಹಾ ಮಹಾ ಶಾಸ್ತ್ರಜ್ಞರಿಗಿಂತಲೂ, ಪಂಡಿತರಿಗಿಂತಲೂ, ಜ್ಞಾನದಲ್ಲಿ ಸ್ವಲ್ಪವೂ ಕಡಿಮೆಯಾಗಿರಲಿಲ್ಲವೆಂಬುದಕ್ಕೆ ಆ ಶಿವಶರಣರ ಶ್ರೇಷ್ಠತರವಾದ ವಚನಗಳೇ ದೃಷ್ಟಾಂತಗಳಾಗಿ ರುವಾಗ ಅವರ ಶ್ರೇಷ್ಠತ್ವವನ್ನು ಸಿದ್ಧಗೊಳಿಸಬೇಕಾದುದೇ ಇಲ್ಲ. ಸ್ತ್ರೀಯರು ಸಂಸ್ಕಾರಗಳಿಗೆ ಅನರ್ಹರೆಂದು ಅನ್ಯಮ ತೀಯರು ಸ್ತ್ರೀಜಾತಿಯನ್ನು ಉಪೇಕ್ಷಿಸಿದ್ದಾರಷ್ಟೇ. ಆದರೆ ವೀರಶೈವ ಮತದ ಪ್ರಕಾರ ಬಸವಣ್ಣನವರು ಸ್ತ್ರೀಯರಿಗೂ ಪುರುಷರಂತೆಯೇ ಮತ ಸಂಸ್ಕಾರಗಳಿಗೆ ಅವಕಾಶವನ್ನುಂಟು ಮಾಡಿದ್ದರಿಂದ ಅಕ್ಕ ಮಹಾದೇವಿ, ವೀರಮ್ಮ, ರೆಮ್ಮವ್ವೆ, ರೇಚವ್ವೆ, ಸೋಮವ್ವೆ, ಮೊದಲಾದ ಅನೇಕ ಸ್ತ್ರೀಯರು ಮಹಾ ಜ್ಞಾನಿಗಳಾಗಿದ್ದರೆಂಬುದಕ್ಕೆ ಅವರ ವಚನಗಳೇ ಸಾಕ್ಷಿಯಾಗಿವೆ.

ಈ ಪ್ರಕಾರ ಸ್ತ್ರೀ ಸಮಾಜವನ್ನು ಉನ್ನತಿಗೆ ತಂದಂ ತೆಯೇ ಕೀಳು ಕುಲದವರೆಂದು ಸಕಲರಿಂದಲೂ ಉಪೇಕ್ಷಿಸ ಲ್ಪಟ್ಟ ಮೂಲಕ ಯಾವ ಜನರು ಅಧೋಗತಿಗೀಡಾಗಿದ್ದರೋ ಅಂತಹ ಅಂತ್ಯಜಾದಿ ಅಸಂಖ್ಯ ದೇಶಬಾಂಧವರನ್ನೂ ಮೇಲ ಕ್ಕೆತ್ತಿ ಅವರಲ್ಲಿ ಶ್ರೇಷ್ಠತರವಾದ ಧಾರ್ಮಿಕ ಭಾವನೆಯನ್ನುಂ ಟುಮಾಡಿ ಮದ್ಯ ಮಾಂಸಗಳ ಸೇವನೆಯನ್ನು ನಿಲ್ಲಿಸಿ ಸದಾ

ಚಾರ ಸದ್ಗುಣಗಳುಂಟಾಗುವಂತೆ ಮಾಡಿದರು. ಯಾವ ಕುಲದವರಾಗಿದ್ದರೂ ತಾವು ಸದಾಚಾರಿಗಳಾದರೆ ಜನಾಂಗದಲ್ಲಿ ಸಮಾನತ್ವವನ್ನು—ಇಷ್ಟೇ ಅಲ್ಲ, ಪೂಜ್ಯತ್ವವನ್ನು ಕೂಡಾ ಹೊಂದಲು ಬರುತ್ತದೆಂಬ ನಂಬಿಕೆಯುಂಟಾಗುವಂತೆ ಮಾಡಿದುದರಿಂದ ಸನ್ಮಾರ್ಗಪ್ರವರ್ತನೆಯು ಅತ್ಯಧಿಕವಾಯಿತು. ಸ್ತ್ರೀ ಸ್ವಾತಂತ್ರ್ಯ, ಮದ್ಯಪಾನ ಪ್ರತಿಬಂಧ, ಮಾಂಸಾಹಾರ ನಿಷೇಧ, ಗೃಹನೈರ್ಮಲ್ಯ ಮೊದಲಾದ ದೇಶ ದೇಶಗಳ ವಿಷಯಗಳು ಜನರ ಆಚರಣೆಯಲ್ಲಿ ಬರಬೇಕೆಂದು ಈಗ ಎಷ್ಟು ಜನರು ಸಾಮಾಜಿಕ ಪರಿಷತ್ತುಗಳಿಂದಲೂ, ಸಂಘಗಳಿಂದಲೂ ಪ್ರಯತ್ನಿಸುತ್ತಿದ್ದರೂ ಯಾವ ಫಲಪ್ರಾಪ್ತಿಯು ಆಗಿಲ್ಲವೋ, ಅದು ಈ ದೇಶಕ್ಕೆ ಆ ಮಹಾನುಭಾವರು ಮಾಡಿದ ಧರ್ಮ ಪ್ರಸಾರದಿಂದಲೇ ಪ್ರಾಪ್ತವಾಯಿತು. ಈ ಪ್ರಕಾರ ಬಸವಣ್ಣನವರ ಸರ್ವಾಂಗ ವಿಶಿಷ್ಟ ಸಾಮಾಜಿಕ ಸುಧಾರಣೆಯು ಹಳ್ಳಿಗಳ ಗುಡಿಸಲಿನವರೆಗೂ ಹೋಗಿ ಮುಟ್ಟಿರುವುದರಿಂದಲೇ "ಟೈಮ್ಸ್ ಆಫ್ ಇಂಡಿಯಾ" ಪತ್ರಿಕಾಕರ್ತರು ತಾ|| ೧೭-೫-೧೯೧೮ನೆಯ ಪತ್ರಿಕೆಯಲ್ಲಿ ಈ ಪ್ರಕಾರ ಬರೆದಿದ್ದಾರೆ.

It was the distinctive feature of his misssion that while illustrious, religious and social reformers in India before him had each laid his emphasis on one or other items of religious and social reform, either subordinating more or less other items to it, or ignoring them altogether, Basawa sketched and boldly tried to work out a large and comprehensive programme of social reform with the elevation and independance of womanhood as its guiding point.

Neither social conferences which are annually held in these days in several parts of India, nor Indian social reformers, can improve upon that programme as to the essentials. As was in substance remarked by the late Sir James Campbell, whose knowledge of Indian History, customs and manners was almost phenomenal, the present day social reformer in India is but speaking the language and seeking to enforce the mind of Basawa.

**Times of India,**
***17th May 1918.***

"ಭರತಖಂಡದಲ್ಲಿ ಬಸವನ ಮುಂಚೆ ಪ್ರಸಿದ್ಧರಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಆಯಾಯ ವಿಷಯಗಳಿಗೆ ಸಂಬಂಧಿಸಿದ ಯಾವುದಾದರೊಂದು ಸಂಗತಿಗೇನೇ ಹೆಚ್ಚು ಮಹತ್ವವನ್ನು ಕೊಟ್ಟು, ಅನ್ಯ ವಿಷಯಗಳನ್ನು ಉಪೇಕ್ಷಿಸಿದ್ದರು; ಅಥವಾ ಅವುಗಳಿಗೆ ಗೌಣತ್ವವನ್ನು ಕೊಟ್ಟಿದ್ದರು. ಆದರೆ ಬಸವನು ಸ್ತ್ರೀಯರ ಸ್ವಾತಂತ್ರ್ಯ ಮತ್ತು ಅಭಿವೃದ್ಧಿಗಳನ್ನೇ ಮುಖ್ಯವಾಗಿಟ್ಟುಕೊಂಡು ಸಮಾಜ ಸುಧಾರಣೆಯ ಸರ್ವಾಂಗ ವಿಶಿಷ್ಟವಾದ ಬಹು ದೊಡ್ಡ ಕಾರ್ಯಕ್ರಮವನ್ನು ಗೊತ್ತು ಪಡಿಸಿ ಅತಿ ಧೈರ್ಯದಿಂದ ಅದನ್ನು ಸಾಗಿಸಿದನು.

ಭರತಖಂಡದ ಎಲ್ಲಾ ಭಾಗಗಳಲ್ಲಿಯೂ ಈ ಕಾಲದಲ್ಲಿ ಪ್ರತಿ ವರ್ಷ ಸೇರುತ್ತಿರುವ ಸಾಮಾಜಿಕ ಪರಿಷತ್ತುಗಳಾಗಲಿ, ಅಥವಾ ಈ ದೇಶದ ಸಮಾಜ ಸುಧಾರಕರಾಗಲಿ ಬಸವನ ಕಾರ್ಯಕ್ಕಿಂತ ಹೆಚ್ಚಿನದಾವುದನ್ನೂ ಮಾಡಲಾರರು. ಭರತಖಂಡದ ಚರಿತ್ರೆ ಮತ್ತು ಭಾರತೀಯರ ಆಚಾರ ಪದ್ಧತಿಗಳನ್ನು ಬಹು ಚನ್ನಾಗಿ ತಿಳಿದುಕೊಂಡಿದ್ದ ಸರ್ ಜೇಮ್ಸ್ ಕ್ಯಾಂಬಲ್‌ರವರು ಹೇಳಿರುವಂತೆ ಭರತಖಂಡದ ಈಗಿನ ಸಮಾಜ ಸುಧಾರಕನು ಬಸವನ ನುಡಿಯನ್ನೇ ನುಡಿಯುತ್ತಲೂ, ಆತನ ಅಭಿಪ್ರಾಯವನ್ನೇ ಬೋಧಿಸುತ್ತಲೂ ಇದ್ದಾನೆ."

ಬಸವಣ್ಣನವರ ಅವತಾರದಿಂದ ದೇಶದ ಸಾಮಾಜಿಕ ಸುಧಾರಣೆಯಾದಂತೆಯೇ ಸಂಪದಭಿವೃದ್ಧಿಗೆ ಮುಖ್ಯ ಸಾಧನಗಳಾದ ಸಕಲ ಕೈಕಸಬುಗಳೂ ಸಂರಕ್ಷಿಸಲ್ಪಟ್ಟವಲ್ಲದೆ, ಪ್ರೋತ್ಸಾಹವನ್ನೂ ಹೊಂದಿದವು. ಏಕೆಂದರೆ ಬಸವಣ್ಣನವರು ಯಾವ ಕೈಕಸಬೂ ಹೀನವಾದುದೆಂದು ಹೇಳಲಿಲ್ಲ. ಇಷ್ಟೇ ಅಲ್ಲ; ಎಲ್ಲಾ ಕೈಕಸಬುಗಳೂ ಉತ್ತಮವಾದವುಗಳೆಂದೇ ತಿಳಿದು, ಅವುಗಳಿಗೆ ಸಮಾನ ಯೋಗ್ಯತೆಯನ್ನು ಕೊಟ್ಟರು. ಯಾರು ಯಾವ ಕಸಬನ್ನೇ ಮಾಡುತ್ತಿದ್ದರೂ ಅವರು ಶಿವಭಕ್ತಿ ಸದಾಚಾರ ಸಂಪನ್ನರಾಗಿದ್ದರೆ ಪೂಜ್ಯರೆಂದೇ ಭಾವಿಸಿದ್ದರು. ಈ ವಿಷಯವಾಗಿ ತಮ್ಮ ಅಭಿಪ್ರಾಯವನ್ನು ಈ ಕೆಳಗಿನ ವಚನದಲ್ಲಿ ವ್ಯಕ್ತಪಡಿಸಿದ್ದಾರೆ :—

ದೇವಸಹಿತ ಭಕ್ತರಮನೆಗೆ ಬಂದರೆ,
ಕಾಯಕವಾವುದೆಂದು ಬೆಸಗೊಂಡೆನಾದಡೆ,
ನಿಮ್ಮಾಣೆ ನಿಮ್ಮ ಪ್ರಮಥರಾಣೆ, ತಲೆದಂಡ ತಲೆದಂಡ
ಕೂಡಲ ಸಂಗಮದೇವಾ ಭಕ್ತರಲ್ಲಿ ಕುಲವ
ನರಸಿದರೆ ನಿಮ್ಮ ರಾಣಿವಾಸದಾಣೆ ||

ಸಕಲರೂ ಏನಾದರೊಂದು ಸದುದ್ಯೋಗವನ್ನು ಮಾಡಿಯೇ ಗುರು-ಲಿಂಗ-ಜಂಗಮ-ಸೇವಾತತ್ಪರರಾಗಿ ಜೀವಿಸುವ ಸ್ವಾವಲಂಬನೆಯ ತತ್ವವನ್ನು ಆಚರಣೆಯಲ್ಲಿ ತಂದುದರಿಂದ ಎಲ್ಲಾ ಕೈಕಸಬುಗಳೂ ವೀರಶೈವ ಸಮಾಜದಲ್ಲಿ ಈವರೆಗೂ ಉಳಿದು ಯಾವ ವಿಷಯದಲ್ಲಿಯೂ ಅನ್ಯ ಸಮಾಜದ ಸಹಾ

ಯುವನ್ನಪೇಕ್ಷಿಸದೆ ತಾನೇ ಎಲ್ಲಾ ಸಮಾಜಗಳಿಗೂ ಸಹಾಯ ಮಾಡುತ್ತಿರುವ ಶ್ರೇಷ್ಠತರವಾದ ಸ್ಥಿತಿಯು ಈ ವೀರಶೈವ ಸಮಾಜಕ್ಕೆ ಪ್ರಾಪ್ತವಾಯಿತು. ಈ ಪ್ರಕಾರ ಜನಾಂಗದ ರಕ್ಷಣೆ ಮತ್ತು ಪೋಷಣೆಗಳಿಗೆ ಸಾಧನಗಳಾದ ಸರ್ವಾಂಗಗಳೂ ಸಂಪುಷ್ಟವಾಗಿರತಕ್ಕುದೇ ಸುಧಾರಣೆಯನ್ನೂ, ಸಂಪೂರ್ಣಸ್ಥಿತಿಯನ್ನೂ ಹೊಂದಿದ ಸಮಾಜದ ಲಕ್ಷಣವೆಂದು ಸಮಾಜಶಾಸ್ತ್ರದಿಂದ ಸಿದ್ಧವಾಗುತ್ತದೆ. ಬಡಿಗರ, ಸಿಂಪಿಗರ, ಕಮ್ಮಾರರ, ಬಣ್ಣಗಾರರ, ಅಕ್ಕಸಾಲಿಗರ, ಮತ್ತು ಮಡಿವಾಳರ ಉದ್ಯೋಗಗಳು ಹೀನವಾದವುಗಳೆಂದು ತಿಳಿದು, ಈ ಕೈಕಸಬಿನವರನ್ನು ಕಳ್ಳರ, ದುಷ್ಟರ ಪಂಕ್ತಿಯಲ್ಲಿ ಸೇರಿಸಿ, ಇವರ ಮನೆಯ ಅನ್ನವನ್ನು ಸೇವಿಸಬಾರದೆಂದು ಮನುಸ್ಮೃತಿಯಲ್ಲಿ ಹೇಳಿದ ಪ್ರಕಾರ ಬಸವಣ್ಣನವರು ಈ ಶ್ರೇಷ್ಠತರವಾದ ಕೈಕಸಬುಗಳು ಕೀಳೆಂದು ಹೇಳಿದ್ದರೆ, ಜನಾಂಗವು ಎಷ್ಟೋ ಬಡತನಕ್ಕೀಡಾಗಿ ಪರಾವಲಂಬನೆಯಿಂದ ಜೀವಿಸಬೇಕಾಗುತ್ತಿದ್ದಿತು.

ಕೈಕಸಬುಗಳನ್ನು ಮಾಡುವವರೆಲ್ಲಾ ಕೀಳೆಂತಲೂ, ಕೇವಲ ಬೌದ್ಧಿಕ ಉನ್ನತಿಯುಳ್ಳವರೇ ಶ್ರೇಷ್ಠರೆಂತಲೂ, ತಿಳಿದ ಘಾತಕವಾದ ಆ ತಪ್ಪು ತಿಳಿವಳಿಕೆಯನ್ನು ಈ ಮಹಾನುಭಾವರು ಹೋಗಲಾಡಿಸಿ, ವೀರಶೈವರು ವೀರಶೈವರಿಂದಲೇ ಆದ ಪದಾರ್ಥವನ್ನು ಉಪಯೋಗಿಸಬೇಕಾದ ವೀರಶೈವ ಮತದ ಶೀಲಗಳು ಆಚರಣೆಯಲ್ಲಿ ಬರುವಂತೆ ಮಾಡಿದುದರಿಂದ ಎಲ್ಲಾ ಕೈಕಸಬುಗಳಿಗೂ ಮಹತ್ತರವಾದ ಪ್ರೋತ್ಸಾಹವುಂಟಾಯಿತು. ಆದಕಾರಣ ಈಗಲೂ ಕೂಡಾ ಒಕ್ಕಲತನ, ವ್ಯಾಪಾರ, ನೇಯುವುದು, ಬಣ್ಣಾ ಕೊಡುವುದು, ಮಣ್ಣಿನ ಪಾತ್ರೆಗಳನ್ನು ಮಾಡುವುದು, ಬಳೆ ಮಾಡುವುದು, ಮರದ ಕೆಲಸ ಮಾಡುವುದು, ತಾಮ್ರದ ಕೆಲಸ ಮಾಡುವುದು, ಕಬ್ಬಿಣದ ಕೆಲಸ ಮಾಡುವುದು, ಮನೆಕಟ್ಟುವುದು, ತೋಟದ ಕೆಲಸ ಮಾಡುವುದು,--ಈ ಮೊದಲಾದ ಜನಾಂಗಕ್ಕೆ ಅತ್ಯಾವಶ್ಯಕವಾಗಿರುವ ಎಲ್ಲಾ ಕಸಬುಗಳನ್ನು ಮಾಡುವವರೂ ಈ ವೀರಶೈವ ಸಮಾಜದಲ್ಲಿದ್ದಾರೆ. ಈ ಪ್ರಕಾರ ಸಮಾಜದಲ್ಲಿರುವವರೆಲ್ಲರೂ ದುಡಿಯುತ್ತಿರುವುದರಿಂದ ಇದೊಂದು ಸದುದ್ಯೋಗಿಗಳ ಕುಟುಂಬದಂತೆ ಧನಸಂಪನ್ನವಾದ ಸಮಾಜವಾಗಿದೆ. ವೈದಿಕ ಧರ್ಮದ ಇನ್ನಾವ ಸಮಾಜಗಳಲ್ಲಿಯೂ ಇಲ್ಲದಿರುವ ಈ ಶ್ರೇಷ್ಠತರವಾದ ವ್ಯವಸ್ಥೆಯು ದೇಶದ ಸಂಪದಭಿವೃದ್ಧಿಗೂ ಸ್ವಾವಲಂಬನೆಗೂ ಅತ್ಯಂತ ಪ್ರಯೋಜನವಾದುದಾಗಿಲ್ಲವೇ?

ಈ ಮಹಾತ್ಮರ ಮಹತ್ಕಾರ್ಯದಿಂದ ದೇಶದ ಸಾಮಾಜಿಕ, ಮತ್ತು ಸಾಂಪತ್ತಿಕ ಉನ್ನತಿಗಳಾದಂತೆಯೇ ಬೌದ್ಧಿಕ ಅಭಿವೃದ್ಧಿಯೂ ಉಂಟಾಯಿತು. ಏಕೆಂದರೆ ಮಾತೃಭಾಷೆಯಾದ ಕನ್ನಡದಲ್ಲಿಯೇ ಧಾರ್ಮಿಕ, ಸಾಮಾಜಿಕ, ನೈತಿಕ ವಿಷಯಗಳನ್ನು ಬೋಧಿಸಲುಪಕ್ರಮಿಸಿದರು. ಅದರಿಂದ ಜನಸಾಮಾನ್ಯರಲ್ಲಿ ಕೂಡಾ ವಿಶೇಷವಾದ ವಿಚಾರಕ್ರಾಂತಿಯಾಗಿ ಲೋಕಶಿಕ್ಷಣಕ್ಕೆ ಬಹು ಸಹಾಯವಾಯಿತು. ಅಸಂಖ್ಯ ಜನರು ಸುಶಿಕ್ಷಿತರಾದುದಕ್ಕೆ ಹನ್ನೆರಡನೇ ಶತಮಾನದಿಂದ ಕನ್ನಡ ಭಾಷೆಯಲ್ಲಿ ದಿನೇ ದಿನೇ ವಚನಗ್ರಂಥಗಳು ವೀರಶೈವರಿಂದ ಅತ್ಯಧಿಕವಾಗಿ ರಚಿಸಲ್ಪಡುತ್ತಾ ಬಂದುದೇ ದೃಷ್ಟಾಂತವಾಗಿದೆ. ಈ ವಿಷಯವಾಗಿ ಶ್ರೀಯುತ ಆರ್. ನರಸಿಂಹಾಚಾರ್ಯರವರು ತಮ್ಮ ಕವಿಚರಿತೆಯ ಮೊದಲನೇ ಭಾಗದ ೯ ನೆಯ ಪುಟದಲ್ಲಿ ಹೇಳಿರುವುದೇನೆಂದರೆ—"ಬಸವ, ಚೆನ್ನಬಸವ, ಸಿದ್ಧರಾಮ ಮೊದಲಾದ ವೀರಶೈವರು ಮತಗ್ರಂಥಗಳನ್ನು ಕನ್ನಡದಲ್ಲಿಯೇ ಬರೆದುದರಿಂದ ಈ ಭಾಷೆಯ ಅಭಿವೃದ್ಧಿಗೆ ಹೆಚ್ಚು ಅವಕಾಶವುಂಟಾಯಿತು."

ಈಪ್ರಕಾರ ಯಾವ ಮಹಾತ್ಮರ ಅವತಾರ ಕೃತ್ಯವು ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಸಾಂಪತ್ತಿಕ, ಬೌದ್ಧಿಕ, ಮತ್ತು ಸಾಹಿತ್ಯಗಳ ಅಭಿವೃದ್ಧಿಗೆ ಸಹಾಯವಾಯಿತೋ, ಆ ಮಹಾನುಭಾವರಾದ ಬಸವಣ್ಣನವರು ರಾಷ್ಟ್ರೀಯ ಮಹಾಪುರುಷರೆಂದು ಸಿದ್ಧವಾಗುವುದಿಲ್ಲವೇ? ರಾಷ್ಟ್ರೋನ್ನತಿಗೆ ಯಾವಯಾವ ರೀತಿಯಲ್ಲಿ ಪ್ರಯತ್ನಿಸಬೇಕೆಂದು ಆಧುನಿಕರಾಷ್ಟ್ರಭಕ್ತರು ಈಗ ಹೇಳುತ್ತಿದ್ದಾರೆಯೋ ಅಂತಹ ಅನೇಕ ಸಂಗತಿಗಳನ್ನು ೭೦೦ ವರ್ಷಗಳ ಹಿಂದೆಯೇ ಜನಾಂಗದಲ್ಲಿ ನೆಲೆಗೊಳಿಸಿದ ಈ ರಾಷ್ಟ್ರೋದ್ಧಾರಕರು ನಮಗೆ ಮಾರ್ಗದರ್ಶಿಗಳಲ್ಲವೇ? ಇಂತಹ ಮಹಾ ವಿಭೂತಿಯನ್ನು ಈ ನಮ್ಮ ಕರ್ನಾಟಕ ಮಾತೆಯು ಹೆತ್ತುದಕ್ಕೋಸ್ಕರ ನಾವು ಈ ಭೂಮಾತೆಗೆ ಅತ್ಯಂತ ಋಣಿಗಳಾಗಿಲ್ಲವೆ? ಆ ಮಹಾತ್ಮರ ಉಪದೇಶದ ಪ್ರಕಾರ ಆಚರಿಸಿ ಈಗ ನಮ್ಮ ಕನ್ನಡಮಾತೆಗುಂಟಾಗಿರುವ ನಾನಾ ವಿಪತ್ತುಗಳನ್ನು ಸ್ವಲ್ಪಮಟ್ಟಿಗಾದರೂ ದೂರಮಾಡುವುದರ ಮೂಲಕ ಆ ಮಾತೃ ಋಣವನ್ನು ಕಳೆದುಕೊಳ್ಳುವುದು ಮಾತೃಭಕ್ತಿಯುಳ್ಳವರ ಮುಖ್ಯ ಕರ್ತವ್ಯವಲ್ಲವೇ?

---

# ಮಹಿಮಾಶಾಲಿಯಾದ ಬಸವೇಶ್ವರನು.

ಲೇಖಕ :—ವೀರಪ್ಪ-ಚನ್ನಬಸಪ್ಪ ಯಗಟಿ, ಬಿ. ಎ., ಎಲ್.ಎಲ್. ಬಿ., ವಕೀಲ, ಹಾವೇರಿ.

ಇಂದುಧರನನುಮತದೊಳಾದಿಮ
ನಂದಿನಾಥನು ಬಸವನಾಮದಿ |
ಬಂದಪಂ ಶಿವಭಕ್ತಿಯಂ ವಸುಮತಿಗೆ ಪಸರಿಸಲು ||
೨ನೇ ಸಂಧಿ (ಭೀಮಕವಿಯ ಬಸವಪುರಾಣ.)

ಜಗತ್ತಿನ ಜೀವಜ್ಯೋತಿಗಳ ಮಣಿಮಾಲಿಕೆಯಲ್ಲಿ ಬಸವೇಶ್ವರನು ಮಧ್ಯದಲ್ಲಿರುವ ದಿವ್ಯ ರತ್ನದಂತೆ ಉಜ್ವಲಿಸುತ್ತಿರುವನು. ಪ್ರಸಿದ್ಧ ಧರ್ಮಪ್ರಕಾಶಕರಾದ ಯೇಸು ಕ್ರೈಸ್ತ, ಬುದ್ಧ, ಮಹಮ್ಮದ, ಪೈಗಂಬರ, ಝೊರೋಷ್ಟ್ರರ, ಶಂಕರ, ಮಾಧ್ವ, ರಾಮಾನುಜ ಮೊದಲಾದವರ ಪಂಕ್ತಿಯಲ್ಲಿಯೇ ಬಸವೇಶ್ವರನು ಬರುವನು. ಆದರೆ ಬಸವೇಶ್ವರನ ವಿಶಿಷ್ಟತ್ವವೇನಂದರೆ, ಈತನು ಧರ್ಮ ಪ್ರಸಾರಕನಾಗಿದ್ದಂತೆಯೇ ಸಮಾಜ ಸುಧಾರಕನೂ, ಅಂತ್ಯಜೋದ್ಧಾರಕನೂ, ನೀತಿಯನ್ನು ನೆಲೆಗೊಳಿಸಿದವನೂ, ಶೀಲಾಚಾರಗಳನ್ನು ಬಿತ್ತಿ ಬೀರಿದವನೂ, ಅಸತ್ಯವನ್ನು ನಿರ್ವಂಚನೆಯಿಂದ ಖಂಡಿಸಿದವನೂ, ಸತ್ಯವನ್ನು ಎತ್ತಿ ಹಿಡಿದವನೂ, ಸ್ತ್ರೀಯರಿಗೆ ಸಮಾನತ್ವವನ್ನು ಕಲ್ಪಿಸಿದವನೂ, ನಿಷ್ಕಲ ಹೃದಯಿಯೂ, ನಿಸ್ವಾರ್ಥಿಯೂ, ಅನಾಥ ರಕ್ಷಕನೂ, ಸಾಧುಜನರ ಸಹಕಾರಿಯೂ, ಶಿವಶರಣರ ಸೇವಕನೂ, ಗುರು-ಲಿಂಗ-ಜಂಗಮದಲ್ಲಿ ನಿಶ್ಚಲವಾದ ನಿಷ್ಠೆಯುಳ್ಳವನೂ, ಶಿವಭಕ್ತರ ಸಲುವಾಗಿ ಪ್ರಾಣವನ್ನು ಸಹ ತೊರೆಯಲು ಸಿದ್ಧನಾದವನೂ, ಅನನ್ಯವಾದ ಭಕ್ತಿಯಲ್ಲಿ ಬಲಾಢ್ಯನೂ, ಕರ್ತವ್ಯಶಾಲಿಯೂ, ಮಹಾಮಹಿಮನೂ, ಕೈಗಾರಿಕೆ, ಉದ್ಯೋಗ ಮೊದಲಾದ ಕಾಯಕಗಳಿಗೆ ಯೋಗ್ಯವಾದ ಮರ್ಯಾದೆ ಕೊಟ್ಟವನೂ, ಅತ್ಯಂತ ಕುಶಲನಾದ ರಾಜಕಾರಣ ಪಟುವೂ ಆಗಿದ್ದನು. ಬಸವೇಶ್ವರನು ವೀರಶೈವ ಮತೋದ್ಧಾರ ಮಾಡಿದನೆಂಬ ಅಭಿಮಾನದಿಂದ ಇಂಥ ವಿಶಿಷ್ಟ ಗುಣಗಳನ್ನು ಆತನಿಗೆ ಅರ್ಪಿಸಿರಬಹುದೆಂದು ವಾಚಕರು ತಿಳಿಯಬೇಕಾದುದಿಲ್ಲ. ಬಸವೇಶ್ವರನ ವಚನ ಗ್ರಂಥವನ್ನು ಓದುವನರು ಪರಮತೀಯರಾದರೂ ಸಿಡಿಲಿನಂತೆ ಘುಡುಘುಡಿಸುತ್ತಿರುವ ಆತನ ವಚನಗಳಿಂದ ಆತನ ಮಹಿಮೆಯನ್ನು ಸಹಜವಾಗಿ ನಿರ್ಧರಿಸಬಹುದು. ಆತನ ಘನತೆಗೆ ಆತನ ವಚನವೇ ಸಾಕ್ಷಿ. ಇನ್ನುಳಿದ ಶಿವಶರಣರು ಬಸವನನ್ನು ತಮ್ಮ ವಚನಗಳಲ್ಲಿ ಹಾಡಿ ಹರಿಸಿರುವರು. ಬಸವನ ನಾಮವು ವಸುಧೆಗೆ ಪ್ರೇಮವಾಗಿರುವದು. ಬಸವನು ವೀರಶೈವರಿಗೆ ಮುದ್ದಿನ ಕಣಿಯಾಗಿರುವನು. ಭಕ್ತಿ ಯೋಗಿಗಳಿಗೆ ಭಾಗ್ಯ ದೇವತೆಯಾಗಿರುವನು. ನೀತಿಯ ನುಡಿಯನ್ನು ಬಯಸುವವರಿಗೆ ಕಬ್ಬಿನ ಕಣೆಯಾಗಿರುವನು. ಸಮಾಜ ಸುಧಾರಕರಿಗೆ ಸಲಹೆಗಾರನಾಗಿರುವನು. ತತ್ವಸಾಧಕರಿಗೆ ಕಲ್ಪವೃಕ್ಷನಾಗಿರುವನು.

ಕರ್ನಾಟಕದ ಇತಿಹಾಸದಲ್ಲಿ ಬಸವೇಶ್ವರನ ಸ್ಥಾನವು ಬಹು ಪ್ರಾಧಾನ್ಯವಾಗಿದೆ. ಆತನ ರಾಜ್ಯಕಾರಭಾರದಿಂದ ಕಲ್ಯಾಣದ ಕಳೆಯು ಪಸರಿಸಿತು, ಸುಖಶಾಂತಿಗಳು ನೆಲೆಗೊಂಡವು. ಸಮಾಜವನ್ನು ಸ್ಥಿರವಾಗಿ ವ್ಯವಸ್ಥೆಗೊಳಿಸಿದನು. ವಚನವೆಂಬ ಕನ್ನಡ ಶೈಲಿಯೊಂದನ್ನು ಹೊಸದಾಗಿ ಹುಟ್ಟಿಸಿ ಪಂಡಿತರಿಗೂ ಪಾಮರರಿಗೂ ಗೂಢ ತತ್ವಗಳು ಸುಲಭವಾಗಿ ತಿಳಿಯುವಂತೆ ಮಾಡಿದನು. ಈತನಿಂದ ಪ್ರೇರಣೆಯನ್ನು ಹೊಂದಿ ಅನೇಕ ವಚನಕಾರರ ಊಳಿಗವೇ ಉತ್ಪನ್ನವಾಯಿತು. ಧಾರ್ಮಿಕ ವಾಙ್ಮಯವು ಬೆಳೆಯಿತು. ಕರ್ನಾಟಕದಲ್ಲಿ ಬಸವನಿಂದ ಒಂದು ಬಗೆಯ ವಿಚಾರಕ್ರಾಂತಿಯೇ ಉಂಟಾಯಿತು ; ಧಾರ್ಮಿಕ ಕ್ರಾಂತಿಯೆಂಬ ಭಯಂಕರವಾದ ಬಿರುಗಾಳಿ ಎದ್ದಿತು ; ನಯ-ನೀತಿಗಳ ನೀರಿನ ಪ್ರವಾಹವು ಹರಿಯಿತು; ಭಕ್ತಿಯೆಂಬ ಸಮುದ್ರವು ಮೇರೆದಪ್ಪಿ ಮೊರೆಯಿತು. ಬಸವನು ಜನಿಸದಿದ್ದರೆ ಇವೆಲ್ಲ ಸುಧಾರಣೆಗಳು ಆಗುತ್ತಿರಲಿಲ್ಲ. ಇಷ್ಟೇ ಅಲ್ಲ. ವೀರಶೈವ ಸಮಾಜವು ಯಾವ ಹೀನಸ್ಥಿತಿಗೆ ಬರುತ್ತಿತ್ತೋ ಹೇಳಲ್ಸಾಧ್ಯವಿಲ್ಲ. ಕರ್ನಾಟಕದ ಇತಿಹಾಸಕಾರರು ಬಸವೇಶ್ವರನ ಮಹತ್ವವನ್ನು ಶೋಧಿಸದೆ ಮತದ್ವೇಷದಿಂದ ಬರೆದ ಬರಹಗಾರರ ಗ್ರಂಥಗಳ ಆಧಾರದಿಂದ ಆತನ ನಿಜವಾದ ಪ್ರಕಾಶವನ್ನು ಅಡಗಿಸಿಬಿಟ್ಟರುವರು. ಆದರೆ ಕನ್ನಡಿಯ ಮೇಲೆ ಕಸವು ಬಿದ್ದರೆ ಅದರ ಪ್ರಕಾಶವೇನು ಅಳಿಸಿ ಹೋದೀತೇ? ಕಸವನ್ನು ಓರೆಮಾಡಿದಾಗ ಕನ್ನಡಿಯು ಪ್ರತಿ ಬಿಂಬವನ್ನು ಸಹಜವಾಗಿ ಹೊರಪಡಿಸಿಯೇ ತೀರುವದು. ಯಾವವರೆಗೆ ಧಾರ್ಮಿಕ ದ್ವೇಷವು ನೆಲೆಗೊಂಡಿತ್ತೋ, ಯಾವವರೆಗೆ ಧರ್ಮದ ಹುಚ್ಚು ಪರಮತೀಯರಲ್ಲಿ ಬೇರೂರಿತ್ತೋ, ಯಾವವರೆಗೆ ಎರಡನೆಯವರ ಅಭಿವೃದ್ಧಿಯ ವಿಷಯದಲ್ಲಿ ಅಸೂಯೆಯು ಜನರ ಮನಸ್ಸಿನಲ್ಲಿ ಮನೆಮಾಡಿಕೊಂಡಿತ್ತೋ, ಅವರೆಗೆ ಬಸವನ ಬೆಳಕು ಮರೆಯಾಗಿತ್ತು. ಇಂಥ ಕಾರ್ಮುಗಿಲು ಈಗ ಅಡಗುವುದಕ್ಕೆ ಪ್ರಾರಂಭವಾಗಿದೆ. ನಮ್ಮ ಸಹೋದರ ಧರ್ಮಾನುಯಾಯಿಗಳೂ ಸಹ ಈಗ ಬಸವನ ಮಹಿಮೆಯನ್ನು ಒಪ್ಪಿಕೊಳ್ಳಹತ್ತಿರುವರು. ಕನ್ನಡದಲ್ಲಿ ಪ್ರಸಿದ್ಧ ಲೇಖಕರಾದ ಶ್ರೀಯುತ ಆಲೂರು ವೆಂಕಟರಾಯರು ಬಸವನ ವಿಷಯದಲ್ಲಿ ಹೀಗೆ ಬರೆದಿದ್ದಾರೆ :—

“ಬಸವಣ್ಣನವರು ಮಹಾ ಪುರುಷರೆಂಬುದಕ್ಕೆ ಯಾರ ಸಾಕ್ಷಿಯೂ ಬೇಡ, ಅವರ ಚರಿತ್ರೆಯೇ ಅದಕ್ಕೆ ಸಾಕ್ಷಿ. ಎಂಟು ವರ್ಷದ

ಬಾಲಕನು ತನ್ನ ಮನಸ್ಸಿನಲ್ಲಿ ಗಹನ ಸಿದ್ಧಾಂತಗಳನ್ನು ಗಂಟುಹಾಕಿಕೊಂಡಿರುವದೇನು ಸಾಮಾನ್ಯ ಮನುಷ್ಯರ ಲಕ್ಷಣವೇ? ತನಗೆ ಸರಿದೋರಿದ ಆ ತತ್ವಗಳಿಗೋಸ್ಕರ ತಂದೆ-ತಾಯಿ-ಮನೆಮಾರುಗಳನ್ನು ತ್ಯಜಿಸುವ ಎದೆಗಾರಿಕೆಯನ್ನು ತೋರಿಸುವದೇನು ಪಾಮರರ ಕುತ್ತೇ? ಅವರು ಮಹಾಪುರುಷರೆಂಬುದಕ್ಕೆ ಇದೊಂದೇ ಸಂಗತಿಯು ಸಾಕಲ್ಲವೇ? ಮುಂದಿನ ಅವರ ಚರಿತೆಯೂ ಈ ಅವರ ವೀರವೃತ್ತಿಗೆ ಅನುಗುಣವಾಗಿಯೇ ಇದೆ. ಅವರು ತಮಗೆ ತೋರಿದ ಸತ್ಯಕ್ಕಾಗಿ ಸಮಾಜದ ಸಂಕೋಲೆಗಳನ್ನು ಕತ್ತರಿಸಿ ಚಲ್ಲಿದರು. ಜಗತ್ತಿನ ಉದ್ಧಾರಕ್ಕಾಗಿ ಅನೇಕ ಸಂಕಟಗಳನ್ನು ಸಹಿಸಿದರು. ಅಲ್ಪಾವಧಿಯಲ್ಲಿ ಇದ್ದ ಸೃಷ್ಟಿಯನ್ನು ಸಂಹಾರಮಾಡಿ ಹೊಸ ಸೃಷ್ಟಿಯನ್ನು ನಿರ್ಮಿಸಿದರು, ಅಂದರೆ ಇದ್ದ ಸಮಾಜಸ್ಥಿತಿಯನ್ನು ಬೇರುಸಹಿತವಾಗಿ ಅಲ್ಲಾಡಿಸಿ ಬೇರೊಂದು ಹೊಸ ಸಮಾಜಪದ್ಧತಿಯನ್ನು ಬೇರೂರಿಸಿದರು. ಇಂಥವರು ಸಾಮಾನ್ಯ ಪುರುಷರೇ?

“ಬಸವಣ್ಣನವರ ಧರ್ಮತತ್ವಗಳಬಗ್ಗೆ ಎಷ್ಟೇ ಮತಭೇದವಿದ್ದರೂ ಅವರ ಪರಮಾತ್ಮನಿಷ್ಠೆ, ನಿರ್ಮಲಸದಾಚಾರ, ಹೃದಯಕೋಮಲತೆ, ಉದಾತ್ತಉದ್ದೇಶ ಮುಂತಾದ ಅಸಂಖ್ಯಾತಗುಣಗಳನ್ನು ಯಾರೂ ಅಲ್ಲಗಳೆಯಲಾರರು. ಬಸವನು ಬಡವರ ಬೆಂಬಲಿಗನು, ಬಿದ್ದವರ ಎತ್ತಿಗನು, ಶಿವಶರಣನು.........ರಾಜ್ಯವನ್ನು ವಹಿಸಿದರೂ ರಾಜಭೋಗದಿಂದ ಅಲಿಪ್ತನು. ಇವರ ಉಪದೇಶದಿಂದ ಕರ್ಣಾಟಕದ ಬಹು ಜನಸಮಾಜವು ಸದಾಚಾರಸಂಪನ್ನವಾಯಿತು. ಬಸವಣ್ಣನವರ ಪುಣ್ಯದಿಂದಲೇ ಕರ್ಣಾಟಕದ ಬಹು ಜನಸಮಾಜವು ಮಿಕ್ಕ ಪ್ರಾಂತಗಳಂತೆ ಮದ್ಯಮಾಂಸಾದಿ ದುರ್ವ್ಯಸನಗಳಿಗೀಡಾಗದೆ ಇಂದಿಗೂ ಶುಚಿರ್ಭೂತವಾಗಿಯೇ ಉಳಿದಿದೆ. ಈ ಅವರ ಉಪಕಾರವನ್ನು ಕರ್ಣಾಟಕವು ಎಂದಿಗೂ ಮರೆಯಲಾರದು.

“ಬಸವಣ್ಣನವರು ಭಾಷಾಪಂಡಿತರಲ್ಲ, ಭಾಷಾಜನಕರು. ಅವರ ವಚನಗಳು ಕನ್ನಡ ನುಡಿಯು ಎಷ್ಟು ವೀರ್ಯವತ್ತಾಗಬಹುದೆಂಬುದನ್ನು ತೋರಿಸುತ್ತವೆ. ಅವರ ಹೃದಯವು ಕರಗಿ ನೀರಾಗಿ ಅದು ವಚನಗಳ ರೂಪದಲ್ಲಿ ಹರಿದಿದೆ. ಆ ಪ್ರವಾಹದಲ್ಲಿ ಅವರ ವಿಚಾರಗಳು ಭೋರ್ಗರೆಯುತ್ತಿವೆ. ಅಲ್ಲಿ ಅವರ ಅಂತರಂಗದ ಅಲೆಗಳು ನಲಿಯುತ್ತಿವೆ; ತತ್ವರತ್ನಗಳು ಥಳಥಳಿಸುತ್ತಿವೆ. ಆ ವಚನಗಳಲ್ಲಿ ನಾವೀನ್ಯವು ಮಿನುಗುತ್ತಿದೆ, ತೇಜವು ತುಳುಕುತ್ತಿದೆ. ಅವು ಅವರ ಮಿದುವಾದ ಒಳಎದೆಯ ಒಡನುಡಿಗಳು; ನಂಜಿನನಾಲಿಗೆಯ ಬಿರುನುಡಿಗಳಲ್ಲ. ಈ ವಚನಗಳಲ್ಲಿ ಅವರ ಅಂತಃಕರಣವು ಹೆಪ್ಪುಗಟ್ಟಿರುತ್ತದೆ. ಸಾಧುವೃತ್ತಿಯ ಸೊನೆಯು ಸುರಿಯುತ್ತಿದೆ. ಅನುಭವದ ಕಾಠಿಣ್ಯವು ಕಂಗೊಳಿಸುತ್ತಿದೆ. ಅವರ ಆಚಾರದ ಕೆಚ್ಚು ಅಲ್ಲಿ ಕಾಣುತ್ತದೆ. ವಿಚಾರದ ಅಚ್ಚು ಅಲ್ಲಿ ಅಚಲವಾಗಿದೆ.”

‘ಭರತಖಂಡದ ಜೀವಜ್ಯೋತಿಗಳು’ ಎಂಬ ಪುಸ್ತಕದಲ್ಲಿ ಪ್ರಸಿದ್ಧ ಲೇಖಕರಾದ ಮತ್ತು ಬ್ರಾಹ್ಮಣ ಸಹೋದರರಾದ ಶ್ರೀ ಎಚ್. ಬದಂಬರಯ್ಯನವರು ಬಸವೇಶ್ವರನ ಜೀವಿತಚರಿತೆಯನ್ನು ಜೋಡಿಸಿದ್ದಾರೆ. ರಾಷ್ಟ್ರಗೀತೆಯಲ್ಲಿ ಬಸವನ ನಾಮವೂ ಸೇರಿಸಲ್ಪಟ್ಟಿದೆ. ಈ ರೀತಿಯಾಗಿ ಆತನ ನಿಜಾಂಶವು ಅನ್ಯ ಮತಸ್ಥರಲ್ಲಿಯೂ ಬಿಂಬಿಸಲಾರಂಭಿಸಿರುವದು. ಬಸವೇಶ್ವರನು ವೀರಶೈವ ಸಮಾಜಪೊಂದರ ಹಿತವನ್ನಷ್ಟೇ ಸಾಧಿಸಿದನೆಂತಲ್ಲ, ಯಾವತ್ತೂ ಕರ್ನಾಟಕದ ಏಳಿಗೆಯೇ ಅವನ ಮುಖ್ಯ ಧ್ಯೇಯವಾಗಿತ್ತು. ಆತನು ತನ್ನ ಜೀವಿತಕಾಲವನ್ನೆಲ್ಲ ದೇಶೋದ್ಧಾರಕಾಗಿಯೇ ವಿನಿಯೋಗಿಸಿದನು. ಧಾರ್ಮಿಕ ವೃದ್ಧಿಯೊಂದೇ ಅವನ ಕಾರ್ಯಕ್ಷೇತ್ರವಾಗಿರದೆ ಅವನ ಕುಶಲವಾದ ಬುದ್ಧಿಯೂ, ಅಸಾಧಾರಣವಾದ ಚಟುವಟಿಕೆಯೂ, ಅಗಾಧವಾದ ಸಾಹಸವೂ ಅನೇಕ ಕಾರ್ಯಕ್ಷೇತ್ರಗಳನ್ನು ಆಕ್ರಮಿಸಿದ್ದವು. ಅವನ ವಿಚಾರದಿಂದ ಪರಿಪಕ್ವವಾಗಿ ಹೊರಟ ತತ್ವಗಳು, ಅವನು ನುಡಿದ ನೀತಿಯ ನುಡಿಗಳು ಮತ್ತು ಅವನು ಮಾಡಿದ ಕಾರ್ಯಗಳು ಇತಿಹಾಸದ ಪುಟಗಳಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಡತಕ್ಕವಾಗಿವೆ. ಇಂಥ ಮಹಾ ಪುರುಷನ ಮಹಿಮೆಯನ್ನು ಮಸಕುಗೊಳಿಸಿದ ಚರಿತ್ರೆಕಾರರು ಕರ್ನಾಟಕದ ಇತಿಹಾಸವನ್ನು ಮರಳಿ ಬರೆಯಲೇಬೇಕು.

ಬಸವೇಶ್ವರನು ನಿಶ್ಚಲವಾದ ಸತ್ಯಾಗ್ರಹಿಯಾಗಿದ್ದನು. ಸತ್ಯವನ್ನು ಎತ್ತಿ ಹಿಡಿಯುವಲ್ಲಿ ಪ್ರಾಣಹೋಗುವ ಪ್ರಸಂಗಬಂದರೂ ಬಿಡುವವನಲ್ಲ. ಬಸವನು ಅರಸನಲ್ಲಿ ಮಂತ್ರಿಯಾಗಿರಲು, ಚಾಡಿಕಾರರು ಬಸವನು ಬೊಕ್ಕಸದ ಹಣವನ್ನು ಜಂಗಮರಿಗೆ ಕೊಟ್ಟು ಸೂರೆಮಾಡಿದನೆಂತಲೂ, ನೀಚಕುಲದವರೊಡನೆ ಬೆರೆತು ಊಟಮಾಡುತ್ತಾನೆಂತಲೂ, ಶಿವಮತದ ಪಕ್ಷಪಾತಿಯೆಂತಲೂ ಅನೇಕ ಬಾರಿ ಅರಸನಿಗೆ ಚಾಡಿ ಹೇಳಿದರು. ಆದರೆ ಬಸವನು ಪ್ರತಿಯೊಂದು ಪ್ರಸಂಗದಲ್ಲಿಯೂ ರೋಷಗೊಂಡ ಅರಸನಿಗೆ ಸತ್ಯಸಂಗತಿಯನ್ನು ಮನಗಾಣಿಸಿಕೊಟ್ಟನು. ಬಸವನು ಶಾಂತಚಿತ್ತನೂ, ಸಮತೂಲವಾದ ಬುದ್ಧಿಯುಳ್ಳವನೂ, ದೃಢಮನಸ್ಸಿನವನೂ ಇದ್ದುದರಿಂದ ಆವೇಶದ ಭರಕ್ಕೆ ಬಿದ್ದು ರಾಜನೊಡನೆ ವಿರೋಧವನ್ನು ಬೆಳೆಸಿಕೊಳ್ಳಲಿಲ್ಲ; ಆದರೆ ರಾಜನ ಪ್ರೇಮವು ಬಸವನಲ್ಲಿ ಹೆಚ್ಚುತ್ತ ಹೋಯಿತು; ಬಸವನ ಮಹಿಮೆಯನ್ನು ನೋಡಿ ರಾಜನಲ್ಲಿ ಪೂಜ್ಯತೆಯು ಅಂಕುರಿಸಿತು. ಇದಲ್ಲವೇ ಸತ್ಯಾಗ್ರಹದ ಬಲವು? ಇನ್ನಾಳಿದವರಾಗಿದ್ದರೆ ಮಂತ್ರಿತ್ವವನ್ನು ಬಿಟ್ಟುಕೊಟ್ಟು ರಾಜನ ತೊಡಕನ್ನು ಪರಿಹರಿಸಿಕೊಳ್ಳುತ್ತಿದ್ದರು. ಬಸವೇಶ್ವರನು ಈಗಿನ ಮನ್ವಂತರದಲ್ಲಿದ್ದರೆ ಸಾಧುವೃತ್ತಿಯ ಸಾಧನದಿಂದಲೂ, ಕೇವಲ ಅಹಿಂಸಾಮಾರ್ಗದಿಂದಲೂ, ಸ್ವರಾಜ್ಯವನ್ನಾಗಲಿ ಇಲ್ಲವೆ ಸುರಾಜ್ಯವನ್ನಾಗಲಿ ಅಥವಾ ಪ್ರಜಾರಾಜ್ಯವನ್ನಾಗಲಿ ದೊರಕಿಸುತ್ತಿದ್ದನು. ಸತ್ಯಾಗ್ರಹವನ್ನು ಪ್ರಾರಂಭಿಸಿದವರಲ್ಲಿ ಬಸವನೇ ಮೊದಲಿನವನು. ಮಹಾತ್ಮಾ ಗಾಂಧಿಯವರ ಸತ್ಯಾಗ್ರಹವು ಹೊಸದಲ್ಲ. ಬಸವೇಶ್ವರನ ಕಾಲವು ಕ್ರಿ. ಶ. ೧೨ನೇ ಶತಮಾನವು. ಆಗ ರೈಲುಬಂಡಿಗಳೂ, ತಂತೀವಾರ್ತೆಯೂ, ಮುದ್ರಣಯಂತ್ರಗಳೂ, ವೃತ್ತಪತ್ರಿಕೆಗಳೂ ಇರಲಿಲ್ಲ. ಈಗ ಒಂದು ದೇಶದಲ್ಲಿ ನಡೆದ ಸಂಗತಿಯು ಇಡೀ ಪ್ರಪಂಚದಲ್ಲೆಲ್ಲ ಗಾಳಿಯ ಮುಖಾಂತರ ೪-೫ ತಾಸುಗಳಲ್ಲಿ ಗೊತ್ತಾಗುವದು. ಬಸವನ ಕಾಲದಲ್ಲಿ (Wireless Telegraphy) ಗಾಳಿಯಮೂಲಕ ವಾರ್ತೆ ಮೊದಲಾದ ಸೌಕರ್ಯಗಳಿದ್ದಿದ್ದರೆ ಬಸವನ ನಾಮವು ಜಗತ್ತಿನ ಮೂಲೆ ಮೂಲೆಗಳಲ್ಲಿ ನಾದಗೊಳ್ಳುತ್ತಿತ್ತು. ಆಗ ಈ ಸೌಕರ್ಯಗಳಿದ್ದಿಲ್ಲದರಿಂದಲೇ ಬಸವನ ನಿಜವಾದ ಪ್ರಭಾವವು ಹೆಚ್ಚು ಹರಡದಿರುವದಕ್ಕೆ ಬಹುಮಟ್ಟಿಗೆ ಕಾರಣವಾಯಿತು.

ವೀರಶೈವಧರ್ಮಾನುಯಾಯಿಗಳೂ, ಕವಿಗಳೂ ೧೨ನೇ ಶತಮಾನದಿಂದ ಈವರೆಗೂ ಬಸವನನ್ನು ನಿತ್ಯವೂ ಭಜಿಸುತ್ತಲೂ ಗ್ರಂಥಗಳಲ್ಲಿ ಆತನ ಸ್ತೋತ್ರವನ್ನು ಮಾಡುತ್ತಲೂ ಬಂದಿರುವದನ್ನು ನೋಡಿದರೆ ಆತನು ಇಂಥ ಮಹಾಕಾರ್ಯವನ್ನು ಮಾಡಿರುವನೆಂ

ಪುಸಹಜನಾಗಿ ಮನಸ್ಸಿನಲ್ಲಿ ಮಿಂಚದೆ ಇರದು. ಜಗತ್ತನ್ನು ಉದ್ಧಾರಮಾಡಲು ಶಿವನು ತನ್ನ ವಾಹನವಾದ ನಂದಿಯನ್ನು ಬಸವನೆಂಬ ಹೆಸರಿಟ್ಟು ಭೂಲೋಕಕ್ಕೆ ಕಳುಹಿಸಿದ್ದನು. ಬಸವನು ಅವತಾರಿ ಪುರುಷನೆಂದು ವೀರಶೈವರು ಅಂದಿನಿಂದಲೂ ನಂಬುತ್ತ ಬಂದಿರುವರು ಆಂಗ್ಲ ಗ್ರಂಥಕಾರನಾದ ಕಾರ್ಲಾಯಿಲನು ತನ್ನ "ವೀರರುಗಳೂ ಅವರ ಪೂಜೆಯೂ" (Heroes and Hero-worship)ಎಂಬ ಗ್ರಂಥದಲ್ಲಿ ವೀರರು ದೇವಾಂಶಿಕರೆಂದು ಹೇಳಿರುವನು. ಅವರಲ್ಲಿ ಸಾಮಾನ್ಯಜನರಿಗಿಂತ ಹೆಚ್ಚಿನಸಾಮರ್ಥ್ಯವೂ, ಬುದ್ಧಿಯೂ, ಸರಳಹೃದಯವೂ ಇರುವದರಿಂದ ಅವರು ದೇವತಾಪುರುಷರೆಂಬ ಭಾವನೆಯುಳ್ಳವರಾಗಿ ಜನರು ಅವರ ಪೂಜೆಯನ್ನು ಮಾಡುವರೆಂದು ಕಾರ್ಲಾಯಿಲನ ಮತವು. ಎಲ್ಲ ಧರ್ಮಗಳಲ್ಲಿಯೂ ಈ ನಂಬುಗೆಯುಂಟೆಂದು ಅವನು ತೋರಿಸಿರುವನು. ಅವನು ಕೊಟ್ಟಿರುವ ದೃಷ್ಟಾಂತಗಳಾವವೆಂದರೆ,—ನಾರ್ವೆ ದೇಶದಲ್ಲಿ ಎಷ್ಟೋ ವರ್ಷಗಳ ಹಿಂದಿನಿಂದ ಜನರು "ಓಡಿನ್" ಎಂಬ ಮಹಾವೀರನನ್ನು ದೇವಾಂಶನೆಂತಲೂ, ತಿಬೇಟ ದೇಶದವರು 'ಲಾಮಾ' ಎಂಬವನನ್ನು ದೇವರೆಂತಲೂ ಹೇಳುತ್ತಾರೆ. ಇದೂ ಅಲ್ಲದೆ ಮಹಮ್ಮದನಾದರೂ ದೇವಾಂಶನೇ ಎಂದು ಹೇಳಿದ್ದಾರೆ. ಹೀಗೆಯೇ ಕ್ರೈಸ್ತನಾದರೂ ದೇವ ಪುತ್ರನೆಂದು ಬೈಬಲಿನಲ್ಲಿ ಹೇಳಿದೆ. ಕಾರ್ಲಾಯಿಲನು ತನ್ನ ವೀರಪುರುಷರಿಗೆ ಎಷ್ಟು ಮಹತ್ವವನ್ನು ಕೊಟ್ಟಿರುವನೆಂದರೆ—ಅವರು ಹೊಸ ಯುಗವನ್ನು ಹುಟ್ಟಿಸುವವರೂ ಅಥವಾ ಅನೇಕ ಶತಮಾನಗಳ ಚರಿತ್ರೆಯ ಸಾರವನ್ನು ತೆಗೆಯುವವರೂ ಆಗಿರುತ್ತಾರೆನ್ನುವನು. ಮಹಾವೀರನಿದ್ದ ಕಾಲದ ಪರಿಸ್ಥಿತಿಗಳು ಅವನನ್ನು ಮಹಾಪುರುಷನನ್ನಾಗಿಮಾಡಲು ಸಹಕಾರಿಯಾಗದೆ, ಮಹಾಪುರುಷನೇ ಪರಿಸ್ಥಿತಿಗಳನ್ನು ಕಲ್ಪಿಸುತ್ತಾನೆಂಬುದು ಕಾರ್ಲಾಯಿಲನ ಮತವು. ಸಾಮಾನ್ಯ ಜನರು ಹುಲ್ಲಿನಂತೆಯೂ, ಮಹಾಪುರುಷನು ಆಕಾಶದಿಂದ ಬೀಳುವ ಸಿಡಿಲಿನಂತೆಯೂ ಇರುವರು. ಹೇಗೆ ಸಿಡಿಲಿನ ಜ್ವಾಲೆಯು ಹುಲ್ಲಿನಲ್ಲಿ ಬಿದ್ದಾಗ ಅದೂ ಜ್ವಾಲೆಯಾಕಾರವನ್ನು ಹೊಂದುವದೋ, ಹಾಗೆಯೇ ಮಹಾಪುರುಷರ ಪ್ರಭಾವವು ಸಾಮಾನ್ಯಜನರಲ್ಲಿ ಬಿದ್ದೊಡನೆ ಅದರಿಂದ ಅವರು ಪ್ರೇರಣೆ ಹೊಂದುವರು. ಚರಿತ್ರೆಯ ಸಾರವನ್ನು ಹೇಳುವ ಮಹಾಪುರುಷರ ವರ್ಗದಲ್ಲಿ ಮಹಾಕವಿಗಳು ಬರುತ್ತಾರೆ. ಹೊಸ ಯುಗವನ್ನು ಕಲ್ಪಿಸುವವರಲ್ಲಿ ಬಸವ, ಕ್ರೈಸ್ತ ಮೊದಲಾದ ವೀರಪಟುಗಳು ಬರುತ್ತಾರೆ. ಕಾರ್ಲಾಯಿಲನು ಬಸವನ ವೃತ್ತಾಂತವನ್ನು ಅರಿತಿದ್ದರೆ ತನ್ನ 'ವೀರಪುರುಷರಲ್ಲಿ' ಈತನನ್ನು ಸೇರಿಸದೆ ಬಿಡುತ್ತಿರಲಿಲ್ಲ.

ಸಮಾಜಸುಧಾರಣೆಯ ಕಾರ್ಯದಲ್ಲಿ ಬಸವೇಶ್ವರನು ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವನು. ಗೌತಮಬುದ್ಧನು ಜಾತಿಭೇದವನ್ನು ಕಿತ್ತುಹಾಕಿ ಎಲ್ಲರೂ ಸಮಾನರೆಂದು ಬೋಧಿಸಿದ್ದನು. ಬಸವನಾದರೋ ಅದನ್ನು ಕೇವಲ ಆಚರಣೆಯಲ್ಲಿ ತಂದನು. ಹೆಣ್ಣುಮಕ್ಕಳಿಗೆ ಸರಿಯಾದ ಗೌರವವನ್ನು ಕೊಟ್ಟನು. ಬಾಲ್ಯವಿವಾಹವನ್ನು ನಿಲ್ಲಿಸಿದನು. ಧರ್ಮಪ್ರಸಾರಕ್ಕೆ ಬೋಧಕರ ಸಂಘವನ್ನು ನಿರ್ಮಿಸಿದನು. ಉದ್ಯೋಗಕ್ಕೆ ಮರ್ಯಾದೆಕೊಟ್ಟು ಸಮಾಜದ ಸಾಂಪತ್ತಿಕಸ್ಥಿತಿಯನ್ನು ಬೆಳೆಸಿದನು. ಸಮಾಜದಲ್ಲಿ ಐಕಮತ್ಯವನ್ನು ಹುಟ್ಟಿಸಿ ಒಂದು ಬಲವಾದ ಜನಾಂಗವನ್ನೇ ನಿರ್ಮಾಣಮಾಡಿದನು. ಈತನ ಸಮಾಜಸುಧಾರಣೆಯ ವಿಷಯಕ್ಕೆ 'ಟಾಯಿಮ್ಸ ಆಫ್ ಇಂಡಿಯಾ' ಎಂಬ ಆಂಗ್ಲ ಪತ್ರಿಕಾಕಾರರು ತಾ. ೧೭—೫—೧೯೧೮ನೇ ಸಂಚಿಕೆಯಲ್ಲಿ ಹೇಳಿರುವದೇನೆಂದರೆ:—"ಹಿಂದೂ ದೇಶದಲ್ಲಿ ಪ್ರಖ್ಯಾತರಾದ ಧಾರ್ಮಿಕ ಮತ್ತು ಸಾಮಾಜಿಕ ಸುಧಾರಕರು ಬಸವನಿಗಿಂತ ಪೂರ್ವದಲ್ಲಿ ಧರ್ಮದ ಮತ್ತು ಸಮಾಜಸುಧಾರಣೆಯ ವಿಷಯದಲ್ಲಿ ಯಾವದಾದರೊಂದನ್ನೇ ಬಲವಾಗಿ ಪ್ರತಿಪಾದಿಸಿ ಉಳಿದ ವಿಷಯಗಳನ್ನು ಪ್ರಾಧಾನ್ಯವಾದವುಗಳೆಂದು ಗಣಿಸಿರಲಿಲ್ಲ, ಇಲ್ಲವೇ ಅವುಗಳನ್ನು ನಿರಾಕರಿಸಿಯೇ ಬಿಟ್ಟಿದ್ದರು. ಬಸವನಾದರೋ ಸ್ತ್ರೀಯರ ಉತ್ತೀರ್ಣವನ್ನೂ ಸ್ವಾತಂತ್ರ್ಯವನ್ನೂ ಹೇತುವಾಗಿ ನಿರ್ಧರಿಸಿಕೊಂಡು ಅತಿ ವಿಶಾಲವಾದ ಸಾಮಾಜಿಕಸಂಸ್ಕರಣದ ಕಾರ್ಯಭಾಗವನ್ನು ಒಳ್ಳೇ ಸಾಹಸದಿಂದ ನೆರವೇರಿಸಯತ್ನಿಸಿದನು.

"ಈಗ ಹಿಂದೂದೇಶದಲ್ಲಿ ಪ್ರತಿವರ್ಷವೂ ಸೇರುತ್ತಿರುವ ಸಾಮಾಜಿಕ ಸಭೆಗಳೂ, ಹಿಂದೂಸಮಾಜದ ಸುಧಾರಕರೂ ಬಸವನು ಮಾಡಿರುವ ಸುಧಾರಣೆಗಳಿಗಿಂತ ಹೆಚ್ಚಿನ ಕಾರ್ಯವನ್ನು ಮಾಡಲಾರರು. ಹಿಂದೂದೇಶದ ಇತಿಹಾಸ, ಹಿಂದುಗಳ ನಡಾವಳಿ, ಅವರ ಸಂಸ್ಕಾರ ಮೊದಲಾದವುಗಳಲ್ಲಿ ಬಹು ಪರಿಚಯವುಳ್ಳ ಜೇಮ್ಸ ಕ್ಯಾಂಬೆಲ್ಲರು ಹೇಳಿರುವ ಹಾಗೆ ಹಿಂದೂದೇಶದಲ್ಲಿ ಸದ್ಯದ ಸಮಾಜ ಸುಧಾರಕರು ಬಸವನು ಹೇಳಿರುವದನ್ನೇ ಪುನಃ ಹೇಳುತ್ತಲೂ ಮತ್ತು ಬಸವನ ವಿಚಾರವನ್ನೇ ಬೀರುತ್ತಲೂ ಇರುವರು."

## ಬಸವೇಶ್ವರನ ಸಮಾಜ ಸುಧಾರಣೆ.

ಬಸವೇಶ್ವರನು ಧರ್ಮಸುಧಾರಕನಲ್ಲದೆ ಸಮಾಜಸುಧಾರಕನು. ವೀರಶೈವ ಧರ್ಮದಲ್ಲಿ ಒಳ ಜಾತಿಭೇದವಿಲ್ಲ. ಆದರೆ ಉದ್ಯೋಗಗಳ ಮೂಲಕ ಜನರಲ್ಲಿ ಆಚರಣೆಗಳು ವ್ಯತ್ಯಾಸವಾದ್ದರಿಂದ ನಾವು ಹೆಚ್ಚು, ತಾವು ಹೆಚ್ಚು, ಎಂಬ ಅವಾಂತರಭೇದಗಳು ಈಚೀಚೆಗೆ ಹುಟ್ಟಿ ವೈಷಮ್ಯವು ಜನರಲ್ಲಿ ಬೆಳೆಯಿತು. ಬಸವೇಶ್ವರನು ಅವತರಿಸಿದ ವೇಳೆಯ ಸುಮಾರಕ್ಕೆ ಸಮಾಜದಲ್ಲಿ ವೈಷಮ್ಯದಿಂದ ಐಕಮತ್ಯವೂ ಸಹನಶೀಲತೆಯೂ ತಪ್ಪಿಹೋಗಿದ್ದವು. ಬಸವೇಶ್ವರನು ಈ ಒಳಭೇದಗಳನ್ನು ಕಿತ್ತುಹಾಕಿ ಶಿವಭಕ್ತರೆಲ್ಲರೂ ಸಮಾನರೆಂಬುದನ್ನು ಸ್ಥಿರಗೊಳಿಸಿದನು. ಆತನು ತನ್ನ ವಚನವಂತೆ "ಆವ ಕುಲವಾದರೇನು ಶಿವಲಿಂಗವಿದ್ದವನೆ ಕುಲಜ ಕುಲವನರಸುವರೆ ಶರಣರಲ್ಲಿ"? ಎಂದು ಹೇಳಿದ್ದಾನೆ. ಆದರೆ ಲಿಂಗವಿಲ್ಲದವರನ್ನು ಭವಿಗಳೆಂದು ಹೇಳಿ ಅವರೊಡನೆ ಊಟಉಪಚಾರಗಳನ್ನು ಮಾಡಬಾರದೆಂತಲೂ, ಅವರು ಲಿಂಗಾಂಗಿಗಳೊಡನೆ ಸಮಾನರಲ್ಲವೆಂದೂ ಹೀಗೆ ಹೇಳಿದ್ದಾರೆ:—

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರನೊಂದೆಯೆಂಬೆ | ಹಾರುವ ಮೊದಲು ಸ್ವಪಚರ ಕಡೆಯಾಗಿ ಭವಿಯಾದವರೆಲ್ಲರನೊಂದೆಯೆಂಬೆ | ಹೀಗೆಂದು ನಂಬುವದೆನ್ನಮನವು. ಈ ನುಡಿದ ನುಡಿಯೊಳಗೆ ಎಳ್ಳುಮೊನೆಯಷ್ಟು ಸಂದೇಹವುಳ್ಳಡೆ ಹಲ್ಲುದೋರಿ ಮೂಗಕೊಯ್ಯಾ ಕೂಡಲಸಂಗಮದೇವಾ ||"

ಬಸವನು ಅನೇಕ ಜಾತಿಯವರನ್ನು ಲಿಂಗಾಯತ ಮತಕ್ಕೆ

ಸೇರಿಸಿದನು. ಆದರೆ ಅವರು ಎಂಥವರೆಂದರೆ ಮಹಾ ಮೌನಿಗಳೂ, ಮಹಾ ಸುಶೀಲರೂ, ಘನವಾದ ಆಚಾರವುಳ್ಳವರೂ, ಕೇವಲ ಸಾತ್ವಿಕ ಆಹಾರಿಗಳೂ ಆಗಿದ್ದರು. ಆದರೆ ಚನ್ನಯ್ಯ, ಡೋಹರಕಕ್ಕಯ್ಯ ಮೊದಲಾದವರು ಅಂತ್ಯಜರಿದ್ದರು. ಸಿದ್ಧರಾಮ, ಮಡಿವಾಳ ಮಾಚಿದೇವ, ಜೇಡರ ದಾಸಿಮಯ್ಯ ಇವರು ಲಿಂಗಾಯತೇತರರು. ಹರಳಯ್ಯನು ಮೊಚ್ಚಿಗನು, ಮಧುವರಸನು ಬ್ರಾಹ್ಮಣನು. ಆದರೆ ಇವರು ಲಿಂಗಾಯಿತರಾದಮೇಲೆ ಮಹಾ ಶರಣರಾದರು. ಬಸವನು ಗುಣಕ್ಕೆ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟನು. ಸಮಾಜದಲ್ಲಿ ಬಲವಾದ ಐಕ್ಯವನ್ನುಂಟುಮಾಡುವ ದೃಷ್ಟಿಯಿಂದಲೇ ಬಸವನು ಒಳಭೇದಗಳನ್ನು ಮುರಿದನು. ಬಸವನ ಉದಾಹರಣೆಯನ್ನೇ ದಯಾನಂದ ಸರಸ್ವತಿ, ರಾಮಮೋಹನರಾಯ ಮೊದಲಾದ ಆರ್ಯ ಸಮಾಜ ಮತ್ತು ಬ್ರಹ್ಮಸಮಾಜ ಸ್ಥಾಪಕರು ಅನುಸರಿಸಿದರು. ಇವರೀರ್ವರೂ ವರ್ಣಾಶ್ರಮ ಧರ್ಮದಲ್ಲಿರುವ ಹೆಚ್ಚು ಕಡಿಮೆಯ ಭಾವವನ್ನು ಬಲವಾಗಿ ಖಂಡಿಸಿ ಜಾತಿ ಭೇದವೇ ಇಲ್ಲವೆಂತಲೂ ಎಲ್ಲರೂ ಸಮಾನರೆಂತಲೂ ಹೇಳಿದರು. ಬಸವನು ವರ್ಣಾಶ್ರಮ ಧರ್ಮವನ್ನು ಕಿತ್ತುಹಾಕಲಿಲ್ಲ. ಆದರೆ ಸದಾಚಾರ ಯುಕ್ತವಾದವರು ಯಾವ ಜಾತಿಯವರೇ ಇರಲಿ, ಅವರು ಲಿಂಗಾಯತ ಧರ್ಮ ಸ್ವೀಕರಿಸಲು ಧರ್ಮದ ಬಾಗಿಲನ್ನು ತೆರೆದಿಟ್ಟನು. ಈತನು ಮಾಂಸಾಹಾರಿಗಳನ್ನೂ, ಮದ್ಯ ಪಾನಗಳನ್ನೂ ನಿಷೇಧಿಸಿದ್ದಾನೆ. "ಹೋಮ ನೇಮದಲ್ಲಿ ಹೋತನಕೊಂದುತಿಂಬ ಅನಾಮಿಕರೊಡನಾಡಿ ಗೆಲುವದೇನೋ!" ಎಂಬ ವಚನದಿಂದ ಪ್ರಾಣಿಗಳ ವಧೆಯನ್ನು ನಿಂದಿಸಿದ್ದಾನೆ. ಅನಾಚಾರಿಗಳನ್ನು ಕಂಡರೆ ಅವನಿಗೆ ಬಹು ಕೋಪವು. ಅದನ್ನು ಅವನು ಹೀಗೆ ಪ್ರಕಟಿಸಿದ್ದಾನೆ.—"ಕೊಲ್ಲುವವನೆ ಮಾದಿಗ, ಹೊಲಸು ತಿಂಬವನೆ ಹೊಲೆಯ, ಕುಲವೇನೋ ಅವಂದಿರ ಕುಲವೇನೋ | ಸಕಲಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲಸಂಗಮದೇವಾ ಶರಣರೆಲ್ಲಾ ಕುಲಜರು ||"

**ಸ್ತ್ರೀ ಸುಧಾರಣೆ.**—ಬಸವೇಶ್ವರನು ಸ್ತ್ರೀಯರಿಗೆ ಪುರುಷರೊಡನೆ ಸಮಾನತೆಯನ್ನು ಕಲ್ಪಿಸಿದನು. ಅನುಭವ ಮಂಟಪದಲ್ಲಿಯೂ ಅವರನ್ನು ಸದಸ್ಯರನ್ನಾಗಿ ಸೇರಿಸಿಕೊಂಡನು. ಈ ಸೌಲಭ್ಯವನ್ನು ಅವನು ಕಲ್ಪಿಸಿದ್ದರಿಂದಲೇ ಮುಕ್ತಾಯಿ, ಮಹದೇವಿಯಕ್ಕ, ರೇಮವ್ವೆ, ರೇಚವ್ವೆ, ವೀರಮ್ಮ ಮೊದಲಾದ ಸ್ತ್ರೀ ರತ್ನಗಳುಂಟಾದರು. ಸ್ತ್ರೀ ವಿದ್ಯಾಭ್ಯಾಸಕ್ಕೆ ಆತನು ಗೌರವವನ್ನು ಕೊಟ್ಟನು. ಬಾಲ್ಯ ವಿವಾಹವನ್ನು ನಿಲ್ಲಿಸಿದನು. ಬುದ್ಧನಂತೆ ಸ್ತ್ರೀಯರು ಯೋಗಿನಿಯರಾಗಲಿಕ್ಕೆ ಸ್ವಾತಂತ್ರ್ಯವನ್ನು ಕೊಟ್ಟನು. ವೀರಶೈವರಲ್ಲಿ ಆದಿಯಿಂದಲೂ ಸ್ತ್ರೀಯರಿಗೆ ಪುರುಷರಂತೆಯೇ ಎಲ್ಲ ಸಂಸ್ಕಾರಗಳುಂಟು. ಧರ್ಮ ವಿಧಿಗಳಲ್ಲಿ ಪುರುಷರಿಗಿರುವಂತೆಯೇ ಅವರಿಗೂ ಸಮವಾದ ಅಂಗವುಂಟು. ಸ್ತ್ರೀಯರ ವಿಷಯದಲ್ಲಿದ್ದ ಅನಾದರವನ್ನು ಕಳೆದು, ಬಸವನು ಅವರ ವರ್ಚಸ್ಸು ಯೋಗ್ಯತೆಗಳನ್ನು ಬೆಳೆಸಿದ್ದನು.

**ಉದ್ಯೋಗ ಮರ್ಯಾದೆ.** — 'ಕಾಯಕವೇ ಕೈಲಾಸ' ವೆಂದು ಬಸವನು ಎಲ್ಲ ಜನರು ಯಾವಾಗಲೂ ಉದ್ಯೋಗಿಗಳಾಗಿರುವಂತೆ ಹೇಳುತ್ತಿದ್ದನು. ಯಾವ ಸಣ್ಣ ಉದ್ಯೋಗವೇ ಇರಲಿ, ಅದನ್ನು ಹೀನವಾದದ್ದೆಂದು ತಿಳಿಯಬಾರದೆಂದು ಅವನ ಮತವು. ಇದನ್ನು ತನ್ನ ವಚನದಲ್ಲಿ ಹೀಗೆ ಹೇಳಿದ್ದಾನೆ—"ಶಿವಶಿವ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಪೋಲೈಸಿಹನೆಂದು ನುಡಿವಕ್ಕೆಯ್ಯ ಪ್ರಮಥರು, ಕೊಡುವೆನೆ ಉತ್ತರವನವರಿಗೆ, ಕೂಡಲಮ್ಮೆನು ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯು ಸತಿಕೈಕೂಲಿಯ ಮಾಡಿಯಾದಡೆಯು | ನಿಮ್ಮ ನಿಲುವಿಂಗೆಕುದಿವೆನಲ್ಲದೆ | ಯನ್ನೊಡಲಪಸರಕೆ ಕುದಿವೆನಾದರೆ ತಲೆದಂಡ ತಲೆದಂಡವಯ್ಯ ಕೂಡಲಸಂಗಮದೇವಾ ||" ಅನೇಕ ಶರಣರೂ ಸಣ್ಣಸಣ್ಣ ಕಾಯಕ ಮಾಡುತ್ತಿದ್ದರು. ಅದನ್ನು ಅವರು ಪವಿತ್ರಕರ್ತವ್ಯವೆಂದು ತಿಳಿದಿದ್ದರು. ಮಡಿವಾಳ ಮಾಚಯ್ಯನವರು ಬಟ್ಟೆಗಳನ್ನು ತೊಳೆದು ಜೀವಿಸುತ್ತಿದ್ದರು. ಮೋಳಿಗೆಯ ಮಾರಯ್ಯನವರು ಕಟ್ಟಿಗೆ ಹೊರೆಯನ್ನು ಮಾರಿ ಅದರಲ್ಲಿಯೇ ಕುಟುಂಬವನ್ನೂ, ಜಂಗಮನನ್ನೂ ತೃಪ್ತಿ ಪಡಿಸುತ್ತಿದ್ದನು. ಇದನ್ನು ತಿಳಿದ ಬಸವೇಶ್ವರನು ಆತನ ಬಡತನವನ್ನು ಹಿಂಗಿಸಬೇಕೆಂದು ಮಾರಯ್ಯನು ಮನೆಯಲ್ಲಿ ಇಲ್ಲದಾಗ ಅವನ ಮನೆಗೆ ಹೋದನು. ಜಂಗಮ ಪ್ರೇಮಿಯಾದ ಮಾರಯ್ಯನ ಹೆಂಡತಿಯು ಬಸವನಿಗೆ ಊಟಮಾಡಿಸಿದಳು. ಊಟವಾದ ಮೇಲೆ ಬಸವನು ನೀರಿನ ಹರಿವೆಯ ಮರೆಯಲ್ಲಿ ೩ ಸಾವಿರ ವರಹನ ಚೀಲವನ್ನಿಟ್ಟು ಹೋದನು. ಮಾರಯ್ಯನು ಮನೆಗೆ ಬಂದು ಕೇಳಲು 'ಯಾರೋ ಒಬ್ಬ ಭಕ್ತ ಬಂದಿದ್ದನು. ಅವನ ನೆನಪು ನನಗಿಲ್ಲ' ವೆಂದಳು. ಮಾರಯ್ಯನು ಜ್ಞಾನದೃಷ್ಟಿಯಿಂದ ಬಸವನೇ ಇರಬೇಕೆಂದು ತಿಳಿದು ಕೊಂಡು ಆ ಹಣದ ಚೀಲವನ್ನು ಜಂಗಮರಿಗೆ ಹಂಚಿದನು. "ಪರಧನವು ನನಗೇಕೆ? ನನ್ನ ಕಾಯಕವು ನನಗಿಲ್ಲವೇ ?" ಎಂದನು. ಇದರಂತೆಯೇ ಶಂಕರ ದಾಸಿಮಯ್ಯನು ಸಿಂಪಿಗ ಕಾಯಕ (ಹೊಲಿಯುವದು)ವನ್ನು ಮಾಡುತ್ತಿದ್ದನು. ಜೇಡರ ದಾಸಿಮಯ್ಯನು ನೆಯ್ಯುವ ಕಾಯಕ ಮಾಡುತ್ತಿದ್ದನು. ನುಲಿಯ ಚಂದಯ್ಯನು ಹಗ್ಗಮಾಡುತ್ತಿದ್ದನು. ಲಿಂಗಾಯಿತರಲ್ಲಿ ಈಗಲೂ ಎಲ್ಲ ಉದ್ಯೋಗಗಳನ್ನು ಮಾಡುವವರೂ ಸಿಗುತ್ತಾರೆ. ಲಿಂಗಾಯತರು ಮಾಡಿದ ಸಾಮಾನುಗಳನ್ನೇ ಲಿಂಗಾಯತರು ಉಪಯೋಗಿಸುತ್ತಿದ್ದರು. ಸಮಾಜದ ಸಾಂಪತ್ತಿಕ ಸ್ಥಿತಿಯನ್ನು ಬೆಳೆಸಬೇಕೆಂಬುದೇ ಬಸವನ ಉದ್ದೇಶವಾಗಿತ್ತು.

**ಬೋಧಕರ ಸಂಘ.**—ಬಸವೇಶ್ವರನು ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮರಿಗೆ ಆಶ್ರಯ ಕೊಟ್ಟಿದ್ದನು. ಇವರು ಕೇವಲ ಕೂಳು ಬಾಕರಾಗಿರಲಿಲ್ಲ. ಧರ್ಮಬೋಧೆ ಮಾಡುವ ಪಾದ್ರಿಗಳಾಗಿದ್ದರು. ಇವರು ಭಕ್ತರಲ್ಲಿಯ ಆಚಾರ ವಿಚಾರಗಳನ್ನು ತಿಳಿದುಕೊಂಡು ಬಂದು ಬಸವನಿಗೆ ವರದಿ ಕೊಡುತ್ತಿದ್ದರು. ಇವರಲ್ಲಿ ಕೆಲವರು ಗುಪ್ತಶೋಧಕರು (Detectives) ಇದ್ದರು. ಇವರು ವೇಷವನ್ನು ಬದಲು ಮಾಡಿಕೊಂಡು ಯಾವದಾದರೊಂದು ಊರಿಗೆ ಹೋಗಿ ಅಲ್ಲಿಯ ಚಾವಡಿಯಲ್ಲಾಗಲೀ ಗುಡಿಗಳಲ್ಲಾಗಲೀ ದಾರಿಕಾರರಂತೆ ವಿಶ್ರಮಿಸಿ ಜನರ ಮುಖಾಂತರವಾಗಿ ಯಾರ ಆಚರಣೆಯು ಹೇಗಿರುವದೆಂತಲೂ, ಲಿಂಗಾಯಿತರಾಗಲು ಯಾರು ಹಾತೊರೆಯುತ್ತಾರೆಂತಲೂ ತಿಳಿದುಕೊಂಡು ಬಂದು ಬಸವನಿಗೆ ಹೇಳುತ್ತಿದ್ದರು. ಆಮೇಲೆ ಬಸವನು ಅಲ್ಲಿಗೆ ಬೋಧಕರನ್ನು ಕಳುಹಿಸಿ ಜನರ ಆಚಾರವನ್ನು ತಿದ್ದಿಸುತ್ತಿದ್ದುದಲ್ಲದೆ ಯೋಗ್ಯರಾದವರನ್ನು ಲಿಂಗಾಯಿತರನ್ನಾಗಿ ಮಾಡಿಕೊಳ್ಳುತ್ತಿದ್ದನು. ಆ ಜಂಗಮರು ಭಕ್ತರಿಂದ ಭಿಕ್ಷೆ ತೆಗೆದುಕೊಳ್ಳುತ್ತಿದ್ದಿಲ್ಲ. ಕೇವಲ ಬೋಧಕರಾಗಿದ್ದರು. ಅವರಲ್ಲಿ ಕಾಪುವ, ಬೇಡುವ ಕಾಯಕ

ವಿರಲಿಲ್ಲ. ಯಾಕೆಂದರೆ "ಕಾಡುವ ಬೇಡುವ ಜಂಗಮನು ಮನೆಗೆ ಬರಲು ನೀಡಬಾರದು." ಎಂದು ಬಸವನು ಹೇಳಿರುವನು. ಆಗಿನ ಜಂಗಮನು ದುಷ್ಟನಾದ ಭಕ್ತನ ಅನಾಚಾರವನ್ನು ನಿಲ್ಲಿಸುವ ವರೆಗೆ ಕಂಬಕ್ಕೆ ಕುಳಿತು ಉಪವಾಸವಿರುತ್ತಿದ್ದನು. ಇದೊಂದು ತರದ ಸತ್ಯಾಗ್ರಹವಾಗಿತ್ತು. ಆದರೆ ಈಗಿನ ಜಂಗಮರು ದುಡ್ಡು ಕೊಡುವ ವರೆಗೆ ಹೋಗಲೊಲ್ಲೆನೆಂದು ತೆಕ್ಕೆಯಕಾಯಕ, ಆವಿಗೆಯ ಕಾಯಕ, ಗಂಟೆ ಕಾಯಕ ಮೊದಲಾದ ಹೆಸರಿನಿಂದ ಭಕ್ತರನ್ನು ಕಾಡುತ್ತಾರೆ. ಇದೊಂದು ತರದ ದುರಾಗ್ರಹವು. ಈಗ ಬಹುಮಂದಿ ಜಂಗಮರು ಆಲಸ್ಯದಲ್ಲಿಯೂ, ಬಡತನದಲ್ಲಿಯೂ, ಅವಿದ್ಯೆಯಲ್ಲಿಯೂ ಮುಳುಗಿ ಹೀನಸ್ಥಿತಿಯಲ್ಲಿದ್ದಾರೆ. ಸಮಾಜಕ್ಕೆ ಭಾರವಾಗಿರುವ ಇವರನ್ನು ಸಮಾಜವೇ ಎತ್ತಬೇಕಾಗಿದೆ. ಇದಕ್ಕೆ ಬಲ್ಲಂಥ ಬೋಧಕರು ಬೇಕು. ಬಸವನು ಏರ್ಪಡಿಸಿದಂತೆ ಸಮಾಜವೇ ಬೋಧಕರ ಸಂಘಗಳನ್ನು ಸ್ಥಾಪಿಸಬೇಕು. ಸಭೆಗಳಲ್ಲಿ ಹತ್ತು ಹರಟುವದಕ್ಕಿಂತ ಕೈಯಿಂದ ಒಂದು ಮಾಡುವದು ಒಳಿತು. ಈಗ ಸಮಾಜ ಸಂಘಟನೆಗೂ ಜನ ರಲ್ಲಿಯ ಒಡಕು ಮುರಿದು ಒಂದು ಮಾಡುವದಕ್ಕೂ ಬಸವಸಂಥ ಬಲಾಢ್ಯರು ಬೇಕು. ಸಂಸ್ಕೃತ (ವ್ಯಾಸೋಕ್ತ) ಬಸವ ಪುರಾಣದಲ್ಲಿ ಹೇಳಿದ ಮೇರೆಗೆ ಶ್ರೀಶೈಲ ಪರ್ವತದಲ್ಲಿ ಇಂಥ ಮಹಾ ಪುರುಷನು ಆ ಭವಿಷ್ಯಕ್ಕನುಗುಣವಾಗಿ ಹತ್ತೆಂಟು ವರ್ಷಗಳಲ್ಲಿ ಹುಟ್ಟಿದರೆ ವೀರ ಶೈವರ ಭಾಗ್ಯದೇವತೆಯು ಕಣ್ಣು ತೆರಿದಂತಾಗುವದು.

---

## ಬಸವ ಜಯಂತಿಯು.

**ಲೇಖಕ:—ಚಂದ್ರಶೇಖರಶಾಸ್ತ್ರೀ, ವ್ಯಾಕರಣತೀರ್ಥ, ಹಿರೇಮಠ ಹೊಳಲು, ಪ್ರಿನ್ಸಿಪಾಲ್, ಶಂಕರಕಾಲೇಜ್, ಯಾದಗಿರಿ.**

ಭರತಖಂಡದ ಜೀವಜ್ಯೋತಿಗಳಲ್ಲಿ (ತೇಜಶ್ಶಾಲಿಗಳಲ್ಲಿ) ಬಸವೇಶ್ವರನು ಮಿಗಿಲಾದವನು. ಯಾವ ಮಹಾನುಭಾವನು ರಾಜ ಕೀಯ, ಧಾರ್ಮಿಕಗಳೆರಡರಲ್ಲಿಯೂ ಅದ್ವಿತೀಯವಾದ ಸಾಮರ್ಥ್ಯ ವನ್ನು ತೋರಿಸಿ ಜಗತ್ತಿನಲ್ಲಿ ತನ್ನ ಪ್ರತಾಪವನ್ನು ಬೀರಿ ಸರ್ವರನ್ನು ಬೆರಗುಗೊಳಿಸಿರುವನೋ ಅಂತಹ ಮಹನೀಯನ ಚರಿತ್ರೆಯೆಂದರೆ ವೀರಶೈವರಿಗೆ ಪರಮಪವಿತ್ರವಾಗಿರುವದು. ಆದ್ದರಿಂದಲೇ ಎಷ್ಟೋ ಜನ ವೀರಶೈವರು ಬಸವೇಶ್ವರನ ವಿಷಯಕ್ಕೆ ತಮ್ಮ ಅಚಲವಾದ ಭಕ್ತಿಯನ್ನು ತೋರ್ಪಡಿಸುವದು ಅವರ ಜನ್ಮಸಾರ್ಥಕತೆಯನ್ನು ವ್ಯಕ್ತಗೊಳಿಸುತ್ತದೆ. ಈ ಮಹನೀಯನು ಸ್ವಲ್ಪೇ ದಿನಗಳವರೆಗೆ ಇದ್ದರೂ ಅದ್ಭುತವಾದ ತನ್ನ ಶಕ್ತಿಯ ಸಾಮರ್ಥ್ಯದಿಂದ ಕ್ರಾಂತಿ ಯನ್ನು ಜನರಲ್ಲಿ ಉಂಟುಮಾಡಿ ವೀರಶೈವ ಸಮಾಜವನ್ನು ಘನತೆಗೆ ಸೇರುವಂತೆ ಮಾಡಿದನು. ಶ್ರೀ ಬಸವೇಶ್ವರನು ೮೦೦ ವರ್ಷಗಳ ಕೆಳಗೆ ಇದ್ದರೂ ಸಾಧಾರಣವಾಗಿ ಹತ್ತಿಪ್ಪತ್ತು ವರ್ಷಗಳ ಹಿಂದೆ ಇದ್ದವನಂತೆ ಆತನ ಚರಿತ್ರೆಯು ಜನರಿಗೆ ಭಾಸವಾಗುತ್ತದೆ. ಇಂತಹ ಮಹಾಮಹಿಮರಿಂದಲೇ ಜಗತ್ತಿನಲ್ಲಿ ಏನಾದರೊಂದು ವಿಚಾರಕ್ರಾಂ ತಿಯು ಹುಟ್ಟುವದು ಸ್ವಾಭಾವಿಕವಾಗಿದೆ.

ಇಂತಹ ಪುಣ್ಯಪುರುಷನ ಜಯಂತ್ಯುತ್ಸವವನ್ನು ಅಂದರೆ ಹುಟ್ಟಿದ ದಿನದ ಸ್ಮರಣೆಯನ್ನು ಮಾಡುವದೂ, ಆತನ ಶ್ರೇಷ್ಠಗುಣ ಗಳನ್ನು ಕಲಿಯುವದೂ ಅತ್ಯಂತ ಅವಶ್ಯಕತೆ ಇರುತ್ತದೆ. ಇತ್ತಿತ್ತ ಲಾಗಿ ಬಸವೇಶ್ವರನ ವಿಷಯಕ್ಕೆ ವೀರಶೈವ ಸಮಾಜದಲ್ಲಿ ಎಷ್ಟೋ ಸ್ಮಾರಕಗಳಾಗಹತ್ತಿವೆ. ಇವೆಲ್ಲ ಆತನ ಉಪಕಾರ ಸ್ಮರಣೆಯ ಚಿಹ್ನಗಳಾಗಿವೆ. ಬಸವೇಶ್ವರನು ತಾನು ನುಡಿಯಂತೆ ನಡೆದು ಇತರರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿರುವನು. ದೊಡ್ಡವರ ಚರಿತ್ರೆಗಳು ಉಳಿದವರಿಗೆ ಮಾರ್ಗದರ್ಶಕಗಳಾಗುತ್ತವೆ. ಆದ್ದರಿಂ ದಲೇ ಆತನ ಜಯಂತಿಯನ್ನು ಆಚರಿಸಿ ಆತನ ಗುಣಗಳನ್ನು ಕಲಿ ಯತಕ್ಕದ್ದು ಪ್ರತಿಯೊಬ್ಬ ವೀರಶೈವನ ಧರ್ಮವಾಗಿರುವದು. ಜಗತ್ತಿ ನಲ್ಲಿ ಮಹಾತ್ಮರು ಯಾವತರಹದ ಆಚರಣೆಯುಳ್ಳವರಿರುತ್ತಾರೆಂದು ಹೇಳಲಿಕ್ಕೆ ಬರುವಂತಿಲ್ಲ.

ಬಸವೇಶ್ವರನು ಅವತರಿಸುವ ಕಾಲಕ್ಕೆ, ವೀರಶೈವ ಸಮಾಜದ ಸ್ಥಿತಿಯು ತೀರಾ ಚಿಂತಾಜನಕವಾಗಿತ್ತು. ಇಂಥಾ ಬಿಕ್ಕಟ್ಟಿನ ಪ್ರಸಂ ಗದಲ್ಲಿ ದ್ವಿತೀಯ ಶಂಭುವಾದ ಬಸವೇಶನು ಅವತರಿಸಿ ಕನ್ನಡ ತೆನಗು, ಮಹಾರಾಷ್ಟ್ರ ಮೊದಲಾದ ದೇಶಗಳಲ್ಲಿಯ ವೀರಶೈವರನ ನವ ಚೈತನ್ಯವನ್ನುಂಟುಮಾಡಿರುತ್ತಾನೆ. ಭಾರತ ಭೂಮಿಯೊಳಗಿರುವ ಎಲ್ಲಾ ಸಮಾಜಗಳಲ್ಲಿಯೂ ಅನೇಕಜನ ಮಹಾತ್ಮರು ಆಗಿಹೋಗಿ ರುತ್ತಾರಷ್ಟೆ. ಅವರ ಚರಿತ್ರೆಗೂ, ನಮ್ಮ ಬಸವೇಶ್ವರ ಚರಿತ್ರೆಗೂ ತುಲನೆಯನ್ನು ಮಾಡಿ ನೋಡಿದರೆ ಬಸವೇಶ್ವರನ ಚರಿತ್ರೆಯೇ ಮಿಗಿ ಲಾದದ್ದಿರುತ್ತದೆ. ಕೇವಲ ಧಾರ್ಮಿಕದಲ್ಲಿಯೇ ಈತನು ಕಾಲವನ್ನು ಕಳೆಯಲಿಲ್ಲ. ರಾಜಕೀಯ ವಿಷಯದಲ್ಲಿಯೂ ಅದ್ವಿತೀಯನಾಗಿ ಬಿಜ್ಜ ಳನ ಸಭೆಯಲ್ಲಿದ್ದ ೧೮ ಮಂತ್ರಿಗಳಲ್ಲಿ ಮುಖ್ಯಮಂತ್ರಿಯಾಗಿ ತನ್ನ ಬುದ್ಧಿ ಸಾಮರ್ಥ್ಯದಿಂದ ಎಲ್ಲರಿಗೂ ಶ್ರೇಷ್ಠನಾಗಿದ್ದನು.

ಬಸವೇಶ್ವರನು ಹುಟ್ಟಿದ ೮ನೆಯ ವರ್ಷದಲ್ಲಿಯೇ ಉಪನಯ ನದ ಪ್ರಸಂಗವು ಹೊರಟಾಗ ತಂದೆತಾಯಿಗಳನ್ನು ದಂಗುಬಡಿಸಿದ್ದು ಸಾಮಾನ್ಯವಾದ ಮಾತೇ? ಎಂಟು ವರ್ಷದ ಬಾಲಕನಲ್ಲಿ ಇಂಥ ಅದ್ಭುತವಾದ ಶಕ್ತಿಯು ಬರಬೇಕಾದರೆ ಬಸವೇಶ್ವರನು ಅವತಾರಕ ನಾಗದೆ ಇದ್ದರೆ ಬರುತ್ತಿತ್ತೇ? ಇದೊಂದೇ ಉದಾಹರಣೆಯು ಬಸ ವೇಶ್ವರನ ಘನತೆಯನ್ನು ತೋರಿಸುತ್ತದಲ್ಲದೆ, ವೀರಶೈವ ಮತದಲ್ಲಿ ದ್ದಂತ ಆತನ ನಿಷ್ಠೆಯನ್ನೂ ವ್ಯಕ್ತಗೊಳಿಸುತ್ತದೆ. ಬಸವೇಶ್ವರನ ಚರಿತ್ರೆಯನ್ನು ಸಂಪೂರ್ಣವಾಗಿ ಓದಿನೋಡಿದರೆ ಆಶ್ಚರ್ಯಜನಕ ಗಳಾದ ಸಂಗತಿಗಳಿಂದಲೇ ತುಂಬಿ ತುಳುಕುತ್ತಲಿದೆ. ಮಹನೀಯರ ಚರಿತ್ರೆಗಳು ಹಾಗೆಯೇ ಇರುತ್ತವೆ. ಬಸವೇಶ್ವರನು ಎಷ್ಟು ದಯಾ ಶೀಲನೂ, ಸತ್ಯಸಂಧನೂ, ಅಹಿಂಸಾವಾದಿಯೂ, ಲಿಂಗನಿಷ್ಠನೂ, ಜಂಗಮಭಕ್ತನೂ, ಬ್ರಹ್ಮಚಾರಿಯೂ, ಆಗಿದ್ದನೆಂಬುವದನ್ನು ಆತನ ವಚನಗಳಿಂದಲೇ ಮುಂದೆ ತೋರಿಸುತ್ತೇನೆ ಬಸವೇಶ್ವರನ ವಿಷ ಯಕ್ಕೆ ಆತನ ಇತ್ತೀಚಿಗೆ ಆಗಿಹೋದ ಕವಿಗಳೆಲ್ಲರೂ ಆತನನ್ನು ಅನೇಕ ಪ್ರಕಾರವಾಗಿ ಸ್ತೋತ್ರ ಮಾಡಿರುವದನ್ನು ನೋಡಿದರೆ ಆತನ ಘನತೆಯು ಚನ್ನಾಗಿ ಕಾಣುತ್ತದೆ. ಆತನ ವಿಷಯಕ್ಕೆ ಜನರು ಭಕ್ತಿಯಿಂದ ಮಾಡಿದ ಸಣ್ಣ ದೊಡ್ಡ ಗ್ರಂಥಗಳ ಲೆಖ್ಖವನ್ನು ಹಾಕಿ ದರೂ ನರರಮನೆಗೆ ಮುಟ್ಟಲಿಕ್ಕೆ ತಂದಿರುತ್ತದೆ. ಆತನು ದ್ವಿತೀಯ

ಶಂಭುವೂ ವೀರಶೈವ ಮತೋದ್ಧಾರಕನೂ ಆದಕಾರಣದಿಂದಲೇ ಆ ಸಮಾಜದ ಎಷ್ಟೋ ಜನ ಕವಿಗಳು ಹೃದಯಂಗಮವಾಗಿ ಆತನ ಗುಣಗಾನವನ್ನು ಮಾಡಿರುತ್ತಾರೆ.

ಕರ್ನಾಟಕದ ಚರಿತ್ರೆಗೆ ಬಸವೇಶ್ವರನನ್ನು ಬಿಟ್ಟರೆ ಕಳೆಯೇರುವದಿಲ್ಲ. ಒಟ್ಟಿನಮೇಲೆ ಬಸವೇಶನು ಅದ್ಭುತ ಮಹಿಮಾಶಾಲಿಯಾಗಿದ್ದನು. ಉತ್ತರ ಹಿಂದುಸ್ಥಾನದಲ್ಲಿ ಪ್ರಸಿದ್ಧರಾಗಿ ಹೋದ ತುಲಸೀದಾಸರು ಸಂಸ್ಕೃತದಲ್ಲಿ ದೊಡ್ಡ ಪಂಡಿತರಾದಾಗ್ಯೂ ಸಾಮಾನ್ಯಜನರಿಗೆ ತಿಳಿಯುವಂತೆ ಹಿಂದೀಭಾಷೆಯಲ್ಲಿ ತುಲಸೀ ರಾಮಾಯಣವನ್ನು ಬರೆದು ಜನರಿಗೆ ಮಹೋಪಕಾರ ಮಾಡಿದಂತೆಯೇ ಬಸವೇಶ್ವರನಾದರೂ ಕರ್ನಾಟಕ ಭಾಷೆಗೆ ಮಾಡಿರುವ ಮಹತ್ತರವಾದ ಉಪಕಾರವು ಹೇಳಲಸದಳವಾಗಿರುವುದು. ಯಾಕೆಂದರೆ ಬಸವೇಶ್ವರನು ತನ್ನ ಭಕ್ತಿಯ ಪ್ರಭಾವದಿಂದ ವಚನರೂಪವಾಗಿ ಹೇಳಿರುವ ನುಡಿಗಳ ಮಾಧುರ್ಯದ ಝರಿಯನ್ನು ಎಷ್ಟು ವರ್ಣನೆಮಾಡಿದರೂ ತೀರದಾಗಿದೆ. ಅನ್ಯಭಾಷೆಗಳ ಪಂಡಿತರೂ ಕೂಡ ಈ ವಚನಗಳನ್ನು ನೋಡಿ ತಲೆದೂಗುತ್ತಾರೆ, ಯಾಕೆಂದರೆ ಉಳಿದ ಭಾಷೆಗಳಲ್ಲಿ ಈ ತರಹದ ಶೈಲಿಯಿಂದ ಗ್ರಂಥಗಳು ಬರೆಯಲ್ಪಟ್ಟಿರುವದಿಲ್ಲ. ಈತನ ಶೈಲಿಯನ್ನೇ ಅನುಸರಿಸಿ ಉಳಿದ ಕವಿಗಳೂ ಕೂಡ ಎರಡೆಂಬತ್ತು ಕೋಟಿ ವಚನಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಅಪಾರವಾದ ಉಪಕಾರವನ್ನು ಮಾಡಿರುತ್ತಾರೆ. "ಜನನೀ ಜನ್ಮಭಾಷಾಚ ಸ್ವರ್ಗಾದಪಿಗರೀಯಸೀ" ಎಂಬುವ ಉಕ್ತಿಯಂತೆ ಸಂಸ್ಕೃತವು ಬಾರದೆ ಇರತಕ್ಕ ಸಾವಿರಾರು ಜನಗಳಿಗೆ ತನ್ನ ವಚನಾಮೃತವನ್ನು ಪಾನಮಾಡಿಸಿರುವನು. ಬಸವೇಶ್ವರನು ಮಹಾತ್ಮನಾದರೆ ಬಿಜ್ಜಳನಲ್ಲಿ ಮಂತ್ರಿತ್ವವನ್ನು ಮಾಡಿದ ಕಾರಣವೇನೆಂದು ಅನೇಕರು ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಬಹುದು. ವಾಚಕರೇ ಜಗತ್ತಿನಲ್ಲಿ ಮಹಾತ್ಮರು ಪರೋಪಕಾರದ ಸಲುವಾಗಿ ತಮಗೆ ಎಂಥ ಕಷ್ಟಗಳು ಬಂದರೂಕೂಡ ಸಹಿಸಿಕೊಳ್ಳುತ್ತಾರೆ. ಪರದಾಸ್ಯತ್ವದಲ್ಲಿ ತೊಳಲಿ, ಬಳಲಿ, ಬೆಂದು, ಬೆಂಡಾಗಿ ಬೇಸತ್ತುಗೊಂಡಿರುವ ಈ ದೀನ ಹೀನವಾದ ಭಾರತವನ್ನುದ್ಧಾರ ಮಾಡಲಿಕ್ಕೆ ಮಹಾತ್ಮ ಗಾಂಧಿಯವರು ಎಂಟುಸಾರಿ ಕಷ್ಟತರವಾದ ಜೈಲನ್ನು ಅನುಭವಿಸಲಿಲ್ಲವೇ ! ಕೃಷ್ಣನೂ ಕೂಡ ಲೋಕೋದ್ಧಾರಕ್ಕಾಗಿ ವರಾಹದಂಥ ನೀಚಪ್ರಾಣಿಯ ಅವತಾರವನ್ನು ತಾಳಿದನೆಂಬುದು ಭಾರತೀಯರಿಗೆ ಅರಿಯದ ಮಾತಲ್ಲ. ಬಸವೇಶ್ವರನು ಬಿಜ್ಜಳನಲ್ಲಿ ಮಂತ್ರಿತ್ವವನ್ನು ವಹಿಸಿದ್ದರಿಂದಲೇ ಕರ್ನಾಟಕದಲ್ಲಿ ಶೈವ ಧರ್ಮದ ಪ್ರಚಾರವು ಮಿತಿಮೀರಿ ಬೆಳೆಯಿತು. ಇಲ್ಲದಿದ್ದರೆ ಎಲ್ಲಿನೋಡಿದರೂ ಜೈನಧರ್ಮದ ಪ್ರಚಾರವೇ ಇತ್ತು. ಆಸ್ತಿಕನಾದ ಬಸವೇಶ್ವರನು ನಾಸ್ತಿಕವಾದ (ನಾಸ್ತಿಕೊ ವೇದನಿಂದಕಃ) ಬಿಜ್ಜಳನಲ್ಲಿ ಮಂತ್ರಿತ್ವವನ್ನು ವಹಿಸಿರುವದನ್ನು ನೋಡಿದರೆ ಪೂರ್ವಪಶ್ಚಿಮ ದಿಕ್ಕುಗಳು ಒಂದೇ ಕಡೆ ಕೂಡಿದಂತೆಯೇ ಸರಿ. ಇದರಿಂದ ಬಸವೇಶನ ಸಹನ ಶೀಲತೆಯ ಮಾರ್ಗವನ್ನು ಎಷ್ಟು ಹೊಗಳಿದರೂ ತೀರದು. ವೀರಶೈವರ ಎಲ್ಲ ಕಾರ್ಯಗಳಿಗೂ ಭವಿಗಳ ಸಂಪರ್ಕವೇ ಇಡ್ಡಿಲ್ಲ. ಅಂದಮೇಲೆ ೮೦೦ ವರ್ಷಗಳ ಕೆಳಗೆ ಶ್ರೇಷ್ಟವಾದ ಸ್ವಾವಲಂಬನೆಯ ಮಾರ್ಗವು ಅಂಕುರವಾಯಿತೆಂದು ಹೇಳಬಹುದು.

ಬಸವ ಪುರಾಣದಲ್ಲಿಯೇ ಆಗಲೀ ಇನ್ನೂ ಕೆಲವು ಗ್ರಂಥಗಳಲ್ಲಿಯೇ ಆಗಲಿ ಬಸವೇಶ್ವರನು ಮಾಡಿದ ಅನೇಕ ಮಹತ್ವಗಳನ್ನು ವರ್ಣನೆ ಮಾಡಿರುತ್ತಾರೆ. ಅವುಗಳಲ್ಲಿ ಕೆಲವುಗಳನ್ನು ಇಲ್ಲಿ ವಿಚಾರಿಸೋಣ, ಬಸವೇಶ್ವರನು ಜೋಳದ ರಾಸಿಯನ್ನು ಮುತ್ತು ಮಾಡಿದನಂತೆ, ಬದನೆಕಾಯಿಗಳನ್ನು ಕಟ್ಟಿಕೊಂಡು ಬಂದವರಿಗೆ ಲಿಂಗವನ್ನು ಮಾಡಿದನಂತೆ, ಗೌಳಿತಿಯು ಹಾಲಿನ ಕೊಡವನ್ನು ಹೊತ್ತುಕೊಂಡು ಹೋಗುವ ಕಾಲಕ್ಕೆ ಕಾಲುಜಾರಿ ಬೀಳಲಾಗಿ ಕೊಡವು ಒಡೆಯುತ್ತದೆಂದು ತಿಳಿದು ಬಸವಾ ಎಂದ ಕೂಡಲೇ ಆಕೆಯ ಕೊಡವು ಬೀಳಲಿಲ್ಲವಂತೆ, ಇವುಗಳೆಲ್ಲ ಸತ್ಯವೇ ? ಎಂದು ವಾಚಕರು ನಮಗೆ ಪ್ರಶ್ನೆ ಮಾಡಬಹುದು'

ಆದರೆ ಇಂತ ಮಹಿಮೆಗಳು ಶ್ರೀ ಮಧ್ವಾಚಾರ್ಯ, ವಿದ್ಯಾರಣ್ಯ, ರಾಮದಾಸ, ತುಕಾರಾಮ, ಕಬೀರದಾಸ, ಏಸುಕ್ರಿಸ್ತ, ಜ್ಞಾನದೇವ, ತುಲಸೀದಾಸ, ರಾಮಾನುಜಾಚಾರ್ಯ, ಶಂಕರಾಚಾರ್ಯ ಮೊದಲಾದ ಮಹಾ ಪುರುಷರ ಜೀವಿತಗಳಲ್ಲಿಯೂ ಕಂಡು ಬರುವದಿಲ್ಲವೆ? ಅವರಂತೆ ಬಸವೇಶ್ವರನೂ ಮಹಿಮಾಶಾಲಿಯಾಗಿ ಅನೇಕ ಪವಾಡಗಳನ್ನು ಮಾಡಿದನೇದರೆ ಅತಿವ್ಯಾಪ್ತಿಯಾಗುವದಿಲ್ಲ.

ಬಸವೇಶ್ವರ ಜಯಂತಿಯು ವೈಶಾಖ ಶುದ್ಧ ೩ರಲ್ಲಿ ಬರುತ್ತದೆ. ಆ ದಿನ ಪ್ರತಿಯೊಬ್ಬ ವೀರಶೈವನು ಉಳಿದ ಯುಗಾದಿ, ದೀಪಾವಳಿ, ಶ್ರಾವಣ ಮಾಸ ಮೊದಲಾದ ಹಬ್ಬಗಳನ್ನು ಆಚರಿಸುವಂತೆ ಆಚರಿಸಿ ಬಸವೇಶ್ವರನ ಉತ್ಸವವನ್ನು ಮಾಡುವುದೂ, ಅವರ ಪುರಾಣ ಕೀರ್ತನೆಗಳನ್ನು ಹೇಳಿಸುವುದೂ, ಸಭೆಗಳನ್ನು ಮಾಡಿ ಆತನ ಗುಣವರ್ಣನೆಗಳನ್ನು ಮಾಡುವುದು ಮೊದಲಾದ ಕಾರ್ಯಗಳನ್ನು ಆಚರಿಸಬೇಕು. ಒಟ್ಟಿನಮೇಲೆ ವೈಶಾಖ ಶುದ್ಧ ಬಿದಿಗೆ ಎಂದರೆ ವೀರಶೈವರ ದೊಡ್ಡ ಹಬ್ಬವೇ ಸರಿ. ನಮ್ಮ ದೇಶದಲ್ಲಿ ಶಂಕರ ಜಯಂತಿ, ರಾಮಾನುಜಾಚಾರ್ಯರ ಜಯಂತಿ. ಹನುಮಜ್ಜಯಂತಿ, ರೇಣುಕ ಜಯಂತಿಯೇ ಮೊದಲಾದವುಗಳನ್ನು ಮಾಡುವಂತೆ ಬಸವೇಶ್ವರನ ಜಯಂತಿಯನ್ನೂ ಆಚರಿಸಬೇಕು.

ಇಂತಹ ಮಹನೀಯನು ದುರ್ದೈವಿಯಾದ ವೀರಶೈವ ಸಮಾಜದಲ್ಲಿ ಜನಿಸದೆ ಬಂಗಾಲದಲ್ಲಿಯೇ ಆಗಲಿ, ಮಹಾರಾಷ್ಟ್ರ ದೇಶದಲ್ಲಿಯೇ ಆಗಲಿ ಜನಿಸಿದ್ದರೆ, ಆತನ ಕೀರ್ತಿಯು ಅಖಂಡ ಭೂಮಂಡಲದಲ್ಲೆಲ್ಲ ವ್ಯಾಪಿಸುವಂತೆ ಮಾಡುತ್ತಿದ್ದರು. ಇದುವರೆಗೂ ಇಂಗ್ಲೀಷಿನಲ್ಲಿ ಸರ್ವಪ್ರಾಂತದವರಿಗೂ ತಿಳಿಯುವಂತೆ ಆತನ ಚರಿತ್ರೆಯು ಬರೆಯಲ್ಪಟ್ಟಿರುವದಿಲ್ಲವೆಂದಮೇಲೆ ಉಳಿದ ದೇಶದವರಿಗಂತು ತಿಳಿಯುವದು ದೂರವೇ ಉಳಿಯಿತು. ಬಸವೇಶ್ವರನ ನಮ್ರತೆಯು ಎಂಥವರಿಗಾದರೂ ತಲೆದೂಗಿಸುವಂತಿದೆ. ಆತನು ತನ್ನ ವಚನದಲ್ಲಿ ಹೇಳುವದೇನಂದರೆ—'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ, ನಿಮ್ಮ ಪಾದಸಾಕ್ಷಿ, ಎನ್ನ ಮನದಸಾಕ್ಷಿ ಕೂಡಲ ಸಂಗಮದೇವ ಎನಗೆ ಇದೇ ದಿವ್ಯ". ಹದಿನೆಂಟು ಮಂದಿ ಬಿಜ್ಜನ ಮಂತ್ರಿಗಳಲ್ಲಿ ಬಸವೇಶ್ವರನೇ ಪ್ರಧಾನ ಮಂತ್ರಿಯಾಗಿದ್ದನು. ಇಂಥ ಉನ್ನತ ಸ್ಥಿತಿಯಲ್ಲಿದ್ದರೂ ಎನಗಿಂತ ಕಿರಿಯರಿಲ್ಲವೆಂದು ಹೇಳಿರುವ ಆತನ ಅಮೃತವಾಕ್ಯವು ಆತನ ಘನತೆಯನ್ನು ತೋರಿಸುತ್ತದೆ. ಮುಖ್ಯವಾಗಿ ಸಮಾಜೋದ್ಧಾರ ಮಾಡಿದ ಈ ಪುಣ್ಯ ಮೂರ್ತಿಯ ಜಯಂತ್ಯುತ್ಸವವು ವೈಶಾಖ ಶು|| ೨ ಬಿದಿಗಿಯಲ್ಲಿ ಸರ್ವರೂ ತಪ್ಪದೆ ಆಚರಿಸಬೇಕೆಂದು ಇನ್ನೊಮ್ಮೆ ಸೂಚಿಸಿ, ಈ ಲೇಖವನ್ನು ಮುಗಿಸುವೆನು.

ಶ್ರೀಮದನಾದಿ ಪರಮ ಪರಶಿವ ಪರಂಜ್ಯೋತಿ ಪ್ರಭು ಪರಂಪರಾಗತ ಶ್ರೀ ಮಹಾಪ್ರಭು ಜಗದ್ಗುರು ಪ್ರಭು

ಕರಕಮಲಜಾತ ಜಾತ, ಕಲಿಯುಗಪಾವನ ಕರ್ತೃ ೧೧೦ನೇ ಶ್ರೀಮದಲ್ಲಮಾಪ್ರಭು

ಶೂನ್ಯ ಪೀಠಾಧೀಶ ಜಗದ್ಗುರು ಚನ್ನಬಸವಪ್ರಭುಪದಾರೂಢ ಶೂನ್ಯ ಸಿಂಹಾಸನಕರ್ತೃ

## ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು

## ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು.

ಶ್ರೀಮಚ್ಛಂಕರರೂಪಂ । ಧೀಮಂತಂ ದಿಕ್ತಟಾನ್ವಿತ ಯಶೋಭರಿತಂ ॥

ಶ್ರೀಮಾನ್ಯಂ ಶ್ರಿತಪಾಲಂ । ಶ್ರೀ ಮುರುಘೇಂದ್ರಂ ವಿರಾಜಮಾನಂ ಸತತಂ ॥

ವಿಶ್ವದಿಙ್ಮಂಡಲದಲ್ಲಿ ವೀರಶೈವ ಮಂಡಲಿಯನ್ನು ದೇದೀಪ್ಯಮಾನವಾಗಿ ಬೆಳಗುತ್ತಿರುವ ಈ ತೇಜಃಪುಂಜವು ಗದಗ ಪ್ರಾಂತಕ್ಕೆ ಸಮೀಪವಾದ ನೈಜಾಂ ಕೊಪ್ಪಳ ಜಹಗೀರಿಗೆ ಸೇರಿದ ಬಿನ್ನಾಳು ಎಂಬ ಗ್ರಾಮದಲ್ಲಿ ಉದಯಿಸಿತು. ಅಲ್ಲಿನ ಹಿರೇಮಠದ ವೇದಮೂರ್ತಿ ಬಸವಲಿಂಗಪ್ಪಯ್ಯನವರ ಧರ್ಮಾಂಗಿ ಶ್ರೀ ಬೌರಾಂಬೆಯವರ ಗರ್ಭ ಸುಧಾಂಬುಧಿಯು ವೀರಶೈವ ಜಗತ್ತನ್ನು ಕಾಳರಾತ್ರಿಯಿಂದ ಉದ್ಧಾರ ಮಾಡಲೋಸುಗ ಈ ಚಂದ್ರಮನ ಉದಯಕ್ಕೆ ಎಡೆಗೊಟ್ಟಿತು. ಅಂಧಕಾರ ಕೂಪದಲ್ಲಿ ಆಗಾಗ ಮುಳುಗುತ್ತಿರುವ ಜಗತ್ತನ್ನು ಉದ್ಧಾರ ಮಾಡಲು ಪ್ರಮಥಾದಿಗಳನ್ನು ಭೂಲೋಕಕ್ಕೆ ಕಳುಹಿಸಿ ಕಾಪಾಡುತ್ತಿರುವ ಪರಮೇಶ್ವರನು, ತಮಗೆ ಹುಟ್ಟಿದ ಕುಮಾರನನ್ನು ಜಗದುದ್ಧಾರಕ್ಕಾಗಿ ಸನ್ಯಾಸಾಶ್ರಮಿಯನ್ನಾಗಿ ಮಾಡುವುದಾಗಿ ಹರಕೆಗೊಂಡಿದ್ದ ಈ ದಂಪತಿಗಳ ಕಾಂಕ್ಷೆಯನ್ನು ಈಡೇರಿಸುವ ರೂಪದಲ್ಲಿ ಈ ಜನನಕ್ಕೆ ಅನುಜ್ಞೆ ಇತ್ತಂತೆ ತೋರುವುದು. ಹುಣ್ಣಿಮೆಯ ಚಂದ್ರನಂತೆ ಸರ್ವಸುಂದರಾಂಗಿಯಾಗಿದ್ದು, ವೀರಶೈವಜನಅದಜ್ಞಾನಾಂಧಕಾರಾಂತಕ ವೀರನೆನಿಸಬೇಕಾದ ಶಿಶುವಿಗೆ ಚೆನ್ನವೀರದೇವರೆಂಬ ನಾಮವು ಇಡಲ್ಪಟ್ಟು ಅನ್ವರ್ಥವಾಯಿತು.

ಮಗುವಿಗೆ ೫ ವರ್ಷವಾಗಲು ತಂದೆತಾಯಿಗಳು ಮೊದಲೆ ಹರಕೆಮಾಡಿಕೊಂಡಿದ್ದಂತೆ ಬಾಲಕನನ್ನು ಡಂಬಳದ ಶ್ರೀ॥ ತೋಂಟದಾರ್ಯ ಮಹಾಸ್ವಾಮಿಗಳಿಗೆ ಒಪ್ಪಿಸಿದರು.

ಚನ್ನವೀರ ಮರಿದೇವರಿಗೆ ಸಾಧಾರಣ ಲೌಕಿಕ ವಿದ್ಯಾಭಾಸವು ಅರಕೆರೆಯಲ್ಲಿ ನಡೆಯಿತು. ಸಂಸ್ಕೃತ ವೈದಿಕ ವಿದ್ಯಾಭ್ಯಾಸವು ಹಂಸಸಾಗರದ ಶ್ರೀ॥ ಚರವರ್ಯರ ಅಪ್ಪಣೆ ಪ್ರಕಾರ ಶ್ರೀ ಅಳವಂಡಿ ಶಿದ್ದಪ್ಪಯ್ಯನವರಲ್ಲಿ ಪ್ರಾರಂಭಗೊಂಡು, ಮೂಡಲಗೆರೆಯಲ್ಲಿ ಶ್ರೀ॥ ಕಂದಗಲ್ ಪರ್ವತಶಾಸ್ತ್ರಿಗಳಲ್ಲಿ ಪುರಾಣ ಕಾವ್ಯಗಳ ಅಭ್ಯಾಸವಾಯಿತು. ತದನಂತರ ಡಂಬಳದ ಶ್ರೀಗಳವರು ಮರಿದೇವರ ಅಭ್ಯಾಸವು ತಮ್ಮಲ್ಲಿಯೇ ನಡೆಯಲೆಂದು ಅಪೇಕ್ಷಿಸಲು ಶ್ರೀ॥ ಕರವೀರಪ್ಪಶಾಸ್ತ್ರಿಗಳಲ್ಲಿ ಅಭ್ಯಾಸ ನಡೆಸುತ್ತಿದ್ದರು. ಆಗ್ಗೆ ಕಾಶಿಯಲ್ಲಿ ಅಭ್ಯಾಸ ಮಾಡಿಬಂದ ಶ್ರೀ॥ ಪಂಡಿತ ನೀಲಕಂಠಶಾಸ್ತ್ರಿಗಳ ಅಧ್ಯಾಪಕತ್ವದಲ್ಲಿ ಪ್ರಾರಂಭಗೊಂಡ ಗದುಗಿನ ಸಂಸ್ಕೃತ ಪಾಠಶಾಲೆಯಲ್ಲಿ ಮರಿದೇವರ ವಿದ್ಯಾಭ್ಯಾಸವು ಎರಡು ಮೂರು ವರ್ಷಗಳ ವರೆಗೆ ನಡೆಯಿತು. ಈ ಕಾಲದಲ್ಲಿ ಅವರನ್ನು ಗದುಗಿನ ಮಾನ್ವಿ ಶ್ರೀ॥ ದಂಡಪ್ಪನವರ ಧರ್ಮಪತ್ನಿ ಅವ್ವ ರುದ್ರವ್ವನವರು ಬಹಳ ಪ್ರೀತಿಯಿಂದ ಜೋಪಾನಮಾಡಿದರು. ಚನ್ನವೀರ ದೇವರು ತಮ್ಮ ಮುಂದಿನ ಅಭ್ಯಾಸವನ್ನು ಕಾಶಿಯಲ್ಲಿ ಮುಂದುವರಿಸಬೇಕೆಂದು ಮನಸ್ಸುಮಾಡಿದುದು ಈ ಪಾಠಶಾಲೆಯಲ್ಲಿಯೇ.

ಗದುಗಿನ ಭಕ್ತರಿಂದ ಬೀಳ್ಕೊಂಡು ಶ್ರೀ॥ ಚನ್ನವೀರ ದೇವರು ಕಾಶಿಗೆ ಹೊರಟು, ಅಲ್ಲಿ ಶ್ರೀಜಗದ್ಗುರು ವಿಶ್ವಾರಾಧ್ಯ ಪೀಠಾಧೀಶರಾದ, ವಿದ್ಯಾಭಿಮಾನಿ ವಿದ್ಯಾರ್ಥಿಹಿತಚಿಂತಕ ಗುರುಪುಂಗವ ಶ್ರೀ॥ ಶ್ರೀ॥ ರಾಜೇಶ್ವರ ಮಹಾಸ್ವಾಮಿ (ಕಾಶಿಯ ಈ ಹಿಂದಿನ ಮಹಾಸ್ವಾಮಿ) ಗಳವರ ಆಶ್ರಯ

ದಲ್ಲಿ ಅಶನ ವಸತಿಗಳಿಗೆ ತಕ್ಕ ಏರ್ಪಾಡನ್ನು ಮಾಡಿಕೊಂಡು, ತಮ್ಮ ಬುದ್ಧಿ ಬಲದಿಂದ ಮಹಾಸ್ವಾಮಿಗಳವರ ಮತ್ತು ಪಾಠ ಶಾಲಾ ಪಂಡಿತರುಗಳ ಅತ್ಯಂತ ಪ್ರೀತಿಗೆ ಪಾತ್ರರಾಗಿ, ಅಭ್ಯಾಸವನ್ನು ಜರುಗಿಸುತ್ತಿದ್ದರು. ಮಧ್ಯೆ ಒಂದುಸಾರಿ ಗದುಗಿಗೆ ಬಂದು ಪುನಃ ಕಾಶಿಗೆ ಹೋಗುವ ಕಾಲದಲ್ಲಿ ಸೋಲಾಪುರದ ಶ್ರೀಮಂತ ರಾವ್‌ಸಾಹೇಬ್ ಮಲ್ಲಪ್ಪ ಬಸಪ್ಪ ವಾರದ ಇವರನ್ನು ಕಂಡರು. ಆಗಿನಿಂದ ಅಪ್ಪಾಸಾಹೇಬರು ತಾವೂ ಸಹ ಇವರ ವಿದ್ಯಾಭ್ಯಾಸಕ್ಕೆ ದ್ರವ್ಯ ಸಹಾಯ ಮಾಡಲು ಸಿದ್ಧರಿದ್ದೇವೆಂದು ಒಪ್ಪಿಕೊಂಡರು.

ಕಾಶಿಯಲ್ಲಿ ಅಭ್ಯಾಸವು ನಡೆಯಿತು. ತರ್ಕಾದಿಗಳಲ್ಲಿ ಉತ್ತಮ ಪ್ರಶಸ್ತಿಗಳನ್ನು ಪಡೆದರು. ಶ್ರೀ|| ಜಯದೇವ ಶಾಸ್ತ್ರಿಗಳೆಂಬ ಅಭಿದಾನವನ್ನು ತಾಳಿದರು. ಇವರ ಬುದ್ಧಿ ಶಕ್ತಿಯು ಎಷ್ಟು ದೊಡ್ಡದೋ, ಪೂರ್ವಾರ್ಜಿತ ಪುಣ್ಯಪರಿಪಾಕವೂ ಅಷ್ಟೇ ದೊಡ್ಡದು. ಏಕೆಂದರೆ, ಕಾಶಿಯಲ್ಲಿರುವಾಗಲೇ ಶ್ರೀಮನ್ಮಹಾರಾಜ ಶ್ರೀ ಚಾಮರಾಜ ಒಡೆಯರ್ ಜಿ.ಸಿ.ಎಸ್.ಐ. ಅವರಿಗೆ ಎರಡುಸಾರಿಯೂ, ಆಳುವ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್‌ರವರಿಗೆ ಒಂದುಸಾರಿಯೂ ಫಲಮಂತ್ರಾಕ್ಷತೆಯನ್ನು ತಳೆಯುವ ಸುಯೋಗವು ಶಾಸ್ತ್ರಿಗಳಿಗೆ ಒದಗಿತ್ತು. ಇವರು ಪಾಂಡಿತ್ಯದಲ್ಲಿ ಅದ್ವಿತೀಯರಾಗಿಯೂ, ಲೌಕಿಕ ಚತುರತೆಯುಳ್ಳವರಾಗಿಯೂ ಗುರುತ್ವ ದ್ಯೋತಕಗಳಾದ ಎಲ್ಲ ಲಕ್ಷಣ ಸಂಪನ್ನರಾಗಿಯೂ ಇದ್ದುದರಿಂದ, ಗುರುಪೀಠಗಳಲ್ಲೊಂದಕ್ಕೆ ಇವರನ್ನು ಆರಿಸಬೇಕೆಂಬ ಕುತೂಹಲವು ಸಮಾಜ ಮುಖಂಡರಲ್ಲಿ ತಾನಾಗಿ ಹುಟ್ಟುತ್ತಿದ್ದಿತು. ಕಾಶಿಯ ಶ್ರೀಗಳವರು ಇವರನ್ನು ಚನ್ನಾಗಿ ಬಲ್ಲವರಾದುದರಿಂದ ತಮ್ಮನಂತರ ಶ್ರೀ ಕಾಶೀ ಪೀಠಕ್ಕೇನೇ ಇವರನ್ನು ನಿಯಮಿಸಬೇಕೆಂಬ ಕುತೂಹಲವುಳ್ಳವರಾಗಿದ್ದರು. ಶ್ರೀಮಂತ ಸಿರಸಿಂಗಿ ದೇಶಾಯರೂ, ವಾರದ ಅಪ್ಪಾಸಾಹೇಬರೂ ಶ್ರೀ ರಂಭಾಪುರೀ ಪೀಠಕ್ಕೆ ಇವರನ್ನು ಆರಿಸಿಕೊಳ್ಳಬೇಕೆಂಬ ಅಭಿಲಾಷೆಯನ್ನು ವ್ಯಕ್ತಪಡಿಸಿದ್ದರು. ಆದರೆ ದೈವೇಚ್ಛೆಯು ಬೇರೆ ಇದ್ದಿತು. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿ ಪೀಠಾಧೀಶರಾದ ಶ್ರೀ ಮುಪ್ಪಿನೇಂದ್ರ ಮಹಾಸ್ವಾಮಿಗಳವರು ಶಿವಯೋಗ ಸಾಮ್ರಾಜ್ಯವನ್ನೈದಿದರು. ಈ ಪೀಠಕ್ಕೆ ಶಕ್ತರೂ ಮೇಧಾವಿಗಳೂ, ಪಂಡಿತರೂ ಆದ ವಟುವನ್ನು ಚುನಾಯಿಸುವ ಜಬಾಬುದಾರಿಯು ಸಮಾಜದ ಹೆಗಲನ್ನೇರಿತು. ಕಡೆಯಲ್ಲಿ ಶ್ರೀ ಜಯದೇವ ಶಾಸ್ತ್ರಿಗಳಿಗೆ ಬಹುಮತ ದೊರೆತು, ಶೂನ್ಯ ಸಿಂಹಾಸನವನ್ನು ಈಗ್ಗೆ ಸುಮಾರು ೨೫ ವರ್ಷಗಳ ಹಿಂದೆ ಆರೋಹಣ ಮಾಡಿದರು.

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಯವರ ಸಂಸ್ಥಾನವು ಈಗೆ ೨೫ ವರ್ಷಗಳ ಹಿಂದೆ ಅಷ್ಟು ಉತ್ತಮ ಸ್ಥಿತಿಯಲ್ಲಿರಲಿಲ್ಲ. ಮಹಾಸ್ವಾಮಿಯವರು ಪೀಠಾರೋಹಣ ಮಾಡುತ್ತಲೇ ಸುಮ್ಮನೆ ಕೂಡಲಿಲ್ಲ. ವಿದ್ಯಾವಂತರೂ, ಮೇಧಾವಿಗಳೂ ಆದುದರಿಂದ ತಾವು ಆರೋಹಣ ಮಾಡಿರುವ ಸಿಂಹಾಸನದ ಜಬಾಬುದಾರಿಯು ಎಷ್ಟು ಮಹತ್ವದ್ದೆಂಬುದನ್ನು ಚನ್ನಾಗಿ ತಿಳಿದವರಾಗಿ ಮೊದಲು ಸಂಸ್ಥಾನದ ಆಡಳಿತದ ವಿಚಾರಗಳನ್ನು ಸ್ವಲ್ಪಮಟ್ಟಿಗೆ ಸರಿಪಡಿಸಿದರು. ತದನಂತರ, ಪೀಠಾಧಿಕಾರಿಗಳು ಸುಮ್ಮನೆ ಬೃಹನ್ಮಠದಲ್ಲಿ ಕುಳಿತು, ಭಕ್ತರಿಂದ ಹಾಗೂ ಹೀಗೂ ಬರುವ ಕಾಣಿಕೆಯನ್ನು ಪರಿವಾರ ಸಮೇತ ಕುಳಿತು ತಿನ್ನುವುದು, ಅನುಚಿತವೂ, ಅನ್ಯಾಯವೂ ಆದುದೆಂಬ ವಿಷಯವನ್ನು ಬಲ್ಲವರಾದುದರಿಂದಲೇ ಭಕ್ತೋದ್ಧಾರಾರ್ಥವಾಗಿ ದೇಶದ ಬೇರೆಬೇರೆ ಕಡೆಗಳಲ್ಲಿ ಸಂಚಾರ ಹೊರಡುವ ಉದ್ದೇಶ ಮಾಡಿಕೊಂಡು, ಕ್ರಮಕ್ರಮವಾಗಿ ಮೈಸೂರು, ಮುಂಬೈ, ಮದರಾಸು, ನೈಜಾಂ ಮೊದಲಾದ ಎಲ್ಲಾ ರಾಜ್ಯಗಳಲ್ಲಿಯೂ, ಕೊಲ್ಹಾಪೂರ್, ಸಾಂಗ್ಲಿ ಔಂಧ್, ಜತ್, ಫಸಲಾಪೂರ್, ಸವಣೂರು ಮುಂತಾದ ಸ್ಟೇಟುಗಳಲ್ಲಿಯೂ ಸಂಚಾರ ಬೆಳಸಿದರು. ಈ ಸರ್ಕೀಟ ನಲ್ಲಿ ಮಹಾಸ್ವಾಮಿಯವರಿಗೆ ಒಂದು ದೊಡ್ಡ ತೊಂದರೆಯು ಸಂಭವಿಸಿತು. ಆ ಕಾಲಕ್ಕೆ ಜಗದ್ಗುರು ಮುರುಘೀ ಮಠದವರಾಗಲೀ ಅಥವಾ ಮತ್ತಾವ ವೀರಶೈವ ಪೀಠದವರಾಗಲೀ ತಮ್ಮ ಬಿರುದು ಬಾವಲಿಗಳ ಸಮೇತ ಸರ್ಕೀಟು ಹೊರಟು ಎಷ್ಟೋ ದಿವಸಗಳಾಗಿ ಹೋಗಿದ್ದವು. ಇದರಿಂದ ಪರಮತೀಯರಿಗೆ ವೀರಶೈವ ಪೀಠಸ್ಥರಿಗೆ ಅಡ್ಡಪಾಲಕಿ ಪಂಚ ಕಲಶ ಮೊದಲಾದ ದೊಡ್ಡ ಬಿರುದುಗಳು ಉಂಟೆಂಬುದೇ ತಿಳಿಯದಾಗಿದ್ದಿತು. ಒಂದುವೇಳೆ ತಿಳಿದಿದ್ದರೂ ಅದನ್ನು ಮರೆಮಾಚಿ ಆದಷ್ಟು ಪ್ರಯತ್ನದಿಂದ ಆ ಬಿರುದು ಬಾವಲಿಗಳಿಗೆ ವಿಘ್ನವನ್ನು ತಂದೊಡ್ಡಬೇಕೆಂಬ ಅಪೇಕ್ಷೆಯು ಅವರಲ್ಲಿ ಹುಟ್ಟಿದುದು ಅವರಿಗೆ ಅಸ್ವಾಭಾವಿಕವಲ್ಲ. ಮಹಾಸ್ವಾಮಿಯವರ ಸವಾರಿಯು ಎಲ್ಲೆಲ್ಲಿ ಹೋದರೂ ಬಹುತೇಕ ಎಲ್ಲ ಸ್ಥಳಗಳಲ್ಲಿಯೂ ಈ ಸಂಬಂಧವಾದ ಒಂದೊಂದು ವ್ಯಾಜ್ಯವು ಬಿದ್ದೇ ಬೀಳುತ್ತಿತ್ತು. ಇವುಗಳ ಪರಿಹಾರವು ಈಗ ಅಷ್ಟು ಕಷ್ಟಕರಗಳಾಗಿ ತೋರುದಿವುಲ್ಲವಾದರೂ, ಸಮಾಜದಲ್ಲಿ ವಿದ್ಯಾವಿಹೀನತ್ವವು ತಾಂಡವವಾಡುತ್ತಿದ್ದು, ಸರ್ಕಾರಿ ಉದ್ಯೋಗಗಳಲ್ಲಿ ಲಿಂಗಾಯಿತರ ಸುಳಿವಿಲ್ಲದಿದ್ದ ಕಾಲದಲ್ಲಿ, ವಾಸ್ತವವಾದ ತಮ್ಮ ಹಕ್ಕುದಾರಿಗಳನ್ನು ಉಳಿಸಿಕೊಳ್ಳುವುದು ಬಹಳ ಕಷ್ಟಕರವಾಗಿದ್ದಿತು. ಮೇಲಾಗಿ ಜಗದ್ಗುರು ಮಹಾಸ್ವಾಮಿಗಳು ಆಗ್ಗೆ ಯಾವೊಂದು ಹಳ್ಳಿಗೆ ಹೊಕ್ಕರೂ, ಅಲ್ಲಿನ ಪರಮತೀಯರು ಇವರ ಉತ್ಸವವು ಅಂಥಾ ಬಿರುದಿನ ಇಂಥಾ



ಶ್ರೀ ಮನ್ನಿರಂಜನ ಜಗದ್ಗುರು ಜಯದೇವ ಮುರಘಾರಾಜೇಂದ್ರ
ಮಹಾಸ್ವಾಮಿಗಳವರ ಅಡ್ಡಪಾಲಕಿ ಉತ್ಸವ

ಬಿರುದಿನ ಸಮೇತ ಆಗಕೂಡದೆಂದಾಗಲೀ, ತಮ್ಮ ಮಠದ ಮುಂದೆ ಪಾಲಕಿಯಲ್ಲಿ ಇವರು ಕುಳಿತುಕೊಂಡು ಹೋಗುವುದು ತಮಗೆ ಅವಮಾನಕಾರಿಯೆಂದು ಅಥವಾ ಇಂಥಾ ಸ್ಥಳದ ಮುಂದೆ ಇವರು ವಾದ್ಯಗಳನ್ನು ನಿಲ್ಲಿಸಬೇಕೆಂದಾಗಲೀ ವ್ಯಾಜ್ಯವನ್ನು ಹೂಡುವರು. ಏನು ಬೇರೆ ಕಾರಣವು ಇಲ್ಲದೆ ಹೋದರೂ, ಇವರ ಉತ್ಸವವು ಈ ಊರಿನಲ್ಲಿ ನಡೆಯುವುದು ಕೇವಲ ಅಸಮಾಧಾನಕರವಾಗಿದೆಯೆಂದೂ, ಬಹಳ ಗಲಭೆಯಾಗತಕ್ಕದ್ದಿದೆ ಎಂದೂ ಅರ್ಧಕಾಸಿನ ಕಾಗದದ ಮೇಲೆ ಒಂದು ಅರ್ಜಿಯನ್ನು ಗೀಚಿ ಸರ್ಕಾರಕ್ಕೆ ಒಗೆದುಬಿಡುವರು. ಕೋತಿಯಹುಣ್ಣು ಬ್ರಹ್ಮಾಂಡವೆಂಬಂತೆ ಇದೇ ಮಹತ್ತಾದ ಕಾರಣವಾಗಿ ಉತ್ಸವಕ್ಕೆ ಅಡಚಣೆ ಬರುವುದು. ಆ ಊರಿನ ಉತ್ಸವವನ್ನೇ ಬಿಟ್ಟು ಮುಂದಿನ ಬೇರೆಯೂರಿಗೆ ಹೋಗೋಣವೆಂದರೆ ಸ್ವಂತ ವೈಯ್ಯಕ್ತಿಕ ವಿಷಯವಿರಲಿ, ಪೀಠದ ಮತ್ತು ಸಮಾಜದ ಪ್ರತಿಷ್ಠೆಗಳಿಗೇ ಕುಂದಕ ಬರುತ್ತಿದ್ದಿತು. ಈ ವಿಷಯವನ್ನು ಮಹಾಸ್ವಾಮಿಗಳು ಬಲ್ಲವರಾದ್ದರಿಂದಲೇ ಯಾವೊಂದು ತೊಂದರೆಯ ಮೊಳೆಯನ್ನೂ, ಅದು ಎಲ್ಲಿ ಹುಟ್ಟಿತೋ, ಅಲ್ಲಿಯೇ ಬೇರುಸಹಿತ ಕಿತ್ತುಹಾಕಿ, ತಕ್ಕ ಸರಕಾರಿ ಅಪ್ಪಣೆಯನ್ನು ಹೊಂದಿ, ಅಲ್ಲಿ ಉತ್ಸವವನ್ನು ಸಾಂಗವಾಗಿ ನೆರವೇರಿಸಿಕೊಂಡು, ಮುಂದಕ್ಕೆ ಪ್ರಯಾಣಮಾಡುತ್ತಿದ್ದರು. ಈ ತೊಂದರೆಗಳು ಮಹಾಪಾದದ ಸರ್ಕೀಟನಲ್ಲಿ ಎಷ್ಟೆಂಬುದನ್ನು ಹೇಳುವುದು ಕಷ್ಟವೇ ಸರಿ. ಆದರೆ ಒಂದೆರಡು ಉದಾಹರಣೆಗಳಿಂದ ಮಹಾಸ್ವಾಮಿಯವರಿಂದ ಈ ಜಗದ್ಗುರು ಸಿಂಹಾಸನಕ್ಕೂ, ತನ್ಮೂಲಕ ಉಳಿದ ಸಿಂಹಾಸನಾಧೀಶರಿಗೂ ಎಂತಹ ಉಪಕಾರವಾಗಿದೆ ಎಂಬುದು ವ್ಯಕ್ತವಾಗುವುದು. ತುಮಕೂರು ತಾಲ್ಲೂಕು ದೊಡ್ಡಗುಣಿ ಎಂಬ ಗ್ರಾಮದಿಂದ ಮಹಾಸ್ವಾಮಿಯ ಸವಾರಿಯು ಮುಂದಕ್ಕೆ ಪ್ರೋಗ್ರಾಂ ಮಾಡಲ್ಪಟ್ಟಾಗ, ಮೇಲೆ ವಿವರಿಸಿದಂತಹುದೊಂದು ಆತಂಕವು ಪ್ರಾಪ್ತವಾಗಿ, ಪರಮತೀಯರು "ವೀರಶೈವರನ್ನು 'ದೊಡ್ಡಗುಣಿ' ಯಲ್ಲಿ ಹಾಕಿಬಿಟ್ಟೆವು" ಎಂದು ಅಂದುಕೊಳ್ಳುತ್ತಿದ್ದುದು ಮೈಸೂರು ಕರ್ನಾಟಕದ ಪ್ರತಿಯೊಬ್ಬ ವೀರಶೈವನಿಗೂ ತಿಳಿಯದ ಸಂಗತಿಯಲ್ಲ. ಈ ಹತ್ತಾರು ಮನೆಗಳುಳ್ಳ ಹಳ್ಳಿಯಲ್ಲಿ ಮಹಾಸ್ವಾಮಿಯ ಸವಾರಿಯು ಪರಿವಾರ ಸಮೇತ ಮಾಸಾಂತರ ನಿಂತು, ತಕ್ಕ ತರದೂದುಗಳನ್ನು ಮಾಡಿ, ಕಡೆಗೆ ಅನುಕೂಲವಾದ ಸರ್ಕಾರಿ ಆರ್ಡರನ್ನು ಪಡೆದು, ತತೋಪ್ಯತಿಶಯವಾದ ಕೀರ್ತಿ ಪ್ರತಿಷ್ಠೆಗಳನ್ನು ಪಡೆದು, ಮುಂದಕ್ಕೆ ಸರ್ಕೀಟನ್ನು ಬಳೆಸಿದಾಯಿತು. ಹೀಗೆ 'ದೊಡ್ಡಗುಣಿ' ಯಿಂದ ಎದ್ದು, ತಲೆಯನ್ನು ಮೇಲೆಮಾಡಿ ನಿಲ್ಲಬೇಕಾದರೆ ಎಷ್ಟೋತೊಂದರೆಯಾಗಿರುವುದು.

ಮುಂಬೈ ಕರ್ನಾಟಕದಲ್ಲಿ ಬಾಗಲಕೋಟೆಯ ಮೊಕ್ಕಾಮಿನಲ್ಲಿ ಮಹಾಸಂಸ್ಥಾನದ ಉತ್ಸವಕ್ಕೆ ಬ್ರಾಹ್ಮಣರು ತಂದೊಡ್ಡಿದ್ದ ಅಡಚಣೆಯೂ, ತದನಂತರ ಅದು ಪರಿಹಾರವಾಗಿ ಅಟ್ಟಹಾಸದಿಂದ ಅಡ್ಡಪಾಲಕಿ ಉತ್ಸವವು ನಡೆದುದೂ ವೀರಶೈವ ಜಗತ್ತಿಗೆ ತಿಳಿದ ಅಂಶವೇ ಆಗಿದೆ. ಇದಲ್ಲದೆ, ಅಥಣಿಯ ಶ್ರೀ ಶಿವಯೋಗೀಶ್ವರರ ಉತ್ಸವಕಾಲದಲ್ಲಿಯೂ, ಶ್ರೀ ಜಗದ್ಗುರು ಮಹಾಸನ್ನಿಧಾನದ ಉತ್ಸವಕಾಲದಲ್ಲಿಯೂ ನಂದೀಧ್ವಜಕ್ಕೆ ವ್ಯಾಸನ ತೋಳನ್ನು ಕಟ್ಟ ಉತ್ಸವ ಮಾಡಕೂಡದೆಂದು ಅಥಣಿಯ ಬ್ರಾಹ್ಮಣರು ಹೂಡಿದ್ದ ವ್ಯಾಜ್ಯವು ಬೊಂಬಾಯಿ ಚೀಫ್ ಕೋರ್ಟುವರೆಗೆ ಕೆಲಸ ನಡೆಸಿ ವೀರಶೈವರ ಪರವಾಗಿಯೇ ತೀರ್ಮಾನವಾಗಿ, ಕಡೆಗೆ ಮಹಾಸ್ವಾಮಿಯವರ ಉತ್ಸವವು ಈ ವ್ಯಾಸನ ತೋಳು ಕಟ್ಟದ ನಂದೀಧ್ವಜದ ಸಹಿತ ಆಯಿತು. ಹೀಗೆಯೇ ಅನೇಕ ಕಡೆಗಳಲ್ಲಿ ಬಂದ ಅಡಚಣೆಗಳನೆಲ್ಲ ಅಲ್ಲಲ್ಲಿಯೇ ಪರಿಹಾರ ಮಾಡಿಕೊಳ್ಳುವುದಕ್ಕಾಗಿ ಮಹಾಸ್ವಾಮಿಯವರು ಎಷ್ಟೋ ಶ್ರಮವಹಿಸಿ ತಕ್ಕ ದಾಖಲಾತಿಗಳನ್ನೂ, ಸಾಕ್ಷ್ಯಗಳನ್ನೂ ಹಾಜರುಮಾಡಿ, ಆಯಾ ಸರ್ಕಾರಗಳಿಂದ ಆರ್ಡರುಗಳು ಬರುವಂತೆ ಮಾಡಿದರು. ಇದರಿಂದ ಮಹಾಸಂಸ್ಥಾನದ ಕೀರ್ತಿ ಪ್ರತಿಷ್ಠೆಗಳು ಹೆಚ್ಚಿದುದು ಹಾಗಿರಲಿ, ಇನ್ನುಳಿದ ವೀರಶೈವ ಮಠ ಜಗದ್ಗುರು ಸಂಸ್ಥಾನಗಳವರಿಗೆ ರಹದಾರಿಗಳನ್ನು ಹಿಂದಿನ ದಾಖಲೆಗಳ ಮೇಲೆ ಪಡೆಯುವುದು ಸುಲಭ ಸಾಧ್ಯವಾಯಿತು ಮತ್ತು ತನ್ಮೂಲಕ ಸಮಾಜಕ್ಕೆ ಎಂದೆಂದಿಗೂ ಅಚ್ಚಳಿಯದ ಒಂದು ಮಹದುಪಕಾರವಾಯಿತು.

ಮಹಾಸ್ವಾಮಿಯವರು ಸರ್ಕೀಟು ಹೊರಡುವ ಮುಖ್ಯೋದ್ದೇಶವು ಉತ್ಸವಗಳಾಗುವ ಬಗ್ಗೆ ಬರುವ ವ್ಯಾಜ್ಯಗಳನ್ನು ಪರಿಹಾರ ಮಾಡಿಕೊಳ್ಳುವುದಲ್ಲ.! ಭಕ್ತಕೋಟಿಯ ಉದ್ಧಾರವೇ ಇದರ ಮುಖ್ಯೋದ್ದೇಶವು. ಪ್ರತಿಯೊಂದು ಸ್ಥಳದಲ್ಲಿಯೂ ಮಹಾಸ್ವಾಮಿಯವರು ಸಂಸ್ಥಾನದ ಆಸ್ಥಾನ ಪಂಡಿತರಿಂದಲೂ, ಇತರ ದೊಡ್ಡ ಮನುಷ್ಯರಿಂದಲೂ ಉಪನ್ಯಾಸಗಳನ್ನು ಮಾಡಿಸುವರು; ತಾವಾದರೂ ಭಾಷಣಗಳನ್ನು ಮಾಡುವರು. ಈ ಮೂಲಕ ಜನಸಾಮಾನ್ಯದ ತಿಳಿವು ಅಭಿವೃದ್ಧಿ ಹೊಂದಿ, 'ವೀರಶೈವ' ವೆಂದರೇನೆಂಬುದನ್ನು ತಿಳಿದುಕೊಳ್ಳುವ ಶಕ್ತಿಯುಳ್ಳವರಾದರು.

ಮಹಾಸ್ವಾಮಿಗಳವರು ಸಮಾಜಕ್ಕೆ ಮತ್ತೊಂದು ಮಹದುಪಕಾರ ಮಾಡಿರುವರು. ಅದೇನಂದರೆ: ಮಹಾಸಂಸ್ಥಾನದ ಆಡಳಿತಕ್ಕೆ ಒಳಪಟ್ಟ ಬೇರೆಬೇರೆ ಮಠಗಳಲ್ಲಿ ಗುರುತ್ವ ಸ್ಥಾನಗಳು ಖಾಲಿ ಬಿದ್ದಾಗಲೆಲ್ಲ ಆ ಮಠಗಳಿಗೆ ತಕ್ಕ ಮರಿಗಳನ್ನು ಚುನಾಯಿಸಿ ಕಳುಹಿಸತೊಡಗಿದರು. ಅಲ್ಲದೆ, ಪ್ರತಿಯೊಬ್ಬರನ್ನು ಒಂದೊಂದು ಮಠಕ್ಕೆ ಗೊತ್ತಾದ ಗುರುಗಳನ್ನಾಗಿ ನಿಯಮಿಸದೆ, ಒಬ್ಬೊಬ್ಬರನ್ನೂ ಮಠದಿಂದ ಮಠಕ್ಕೆ ವರ್ಗಾಯಿಸುವ ಪದ್ಧತಿಯನ್ನು ರೂಢಿಗೆ ತಂದರು. ಇದರಿಂದ ಮಠಾಧಿಕಾರಿಗಳಿಗೆ "ತಾನು, ತನ್ನದು" ಎಂಬ ದುರಭಿಮಾನವು ನಾಶವಾಗಿ ತಾವು ಸಮಾಜಕ್ಕೋಸ್ಕರ ಕೆಲ

ಸ. ಮಾಡತಕ್ಕವರೆಂಬುದು ಮನವರಿಕೆಯಾಯಿತಲ್ಲದೆ, ಯಾವಯಾವ ಮಠಗಳು ಹೀನಸ್ಥಿತಿಯಲ್ಲಿವೆಯೋ, ಆಯಾ ಮಠಗಳಿಗೆ ಬಹು ಶಕ್ತರಾದ ಮಠಾಧಿಕಾರಿಗಳನ್ನು ವರ್ಗಾಯಿಸುತ್ತಾ ಬಂದರಾದ್ದರಿಂದ ಹೀನ ಸ್ಥಿತಿಯಲ್ಲಿದ್ದ ಅನೇಕ ಮಠಗಳು ಊರ್ಜಿತಾವಸ್ಥೆಯನ್ನು ಹೊಂದಿದವು. ಈ ಬಗ್ಗೆ ಒಂದೆರಡು ಉದಾರಣೆಗಳನ್ನು ಕೊಡಬಹುದು: ಮೊದಲು ದಾವಣಗೆರೆಯ ವಿರಕ್ತ ಮಠದ ಅಧಿಕಾರದಲ್ಲಿದ್ದ ಶ್ರೀಮನ್ನಿರಂಜನವರ್ಯ ಮೃತ್ಯುಂಜಯ ಸ್ವಾಮಿಗಳು ಧಾರವಾಡದ ಶ್ರೀ ಮುರುಘಾ ಮಠಕ್ಕೆ ವರ್ಗಾಯಿಸಲ್ಪಟ್ಟ ಮೇಲೆ, ಅವರು ಅಲ್ಲಿ ಪಾಠಶಾಲಾ ಮತ್ತು ಬೋರ್ಡಿಂಗ್‌ಗಳನ್ನು ಸ್ಥಾಪಿಸಿ ನಡೆಸುತ್ತಿರುವುದು ಸರ್ವಜನ ವಿದಿತವಾಗಿದೆ. ನೈಜಾಂರಾಜ್ಯದಗುರುಮಠಕಲ್ಲಿನಮಠಕ್ಕೆ ಹಿರೇಬಾಗೇವಾಡಿ ಹಿರೇಮಠದ ಪಟ್ಟಾಧಿಕಾರಿಮಠದಮರಿಗಳಾಗಿದ್ದ ಮಹಾಸಂಸ್ಥಾನದ ಆಶ್ರಯದಿಂದ ಆಗ್ಗೆ ಮೈಸೂರಿನಲ್ಲಿ ಅಧ್ಯಯನ ಮಾಡುತ್ತಿದ್ದ ಶ್ರೀ ಚನ್ನಬಸವಮರಿಗಳನ್ನ, ಶ್ರೀ ಶಾಂತವೀರಸ್ವಾಮಿಗಳೆಂಬ ನಾಮದಿಂದ ನೇಮಿಸಿದರು. ಇವರು ಈ ಮಠವನ್ನು ಎಷ್ಟೋ ಅಭಿವೃದ್ಧಿಸ್ಥಿತಿಗೆ ತಂದಿರುವರಲ್ಲದೆ ನೈಜಾಂ ವೀರಶೈವ ಪ್ರಾಂತಿಕ ಸಭೆಗಳನ್ನು ಕೂಡಿಸುವುದೇ ಮೊದಲಾದುವುಗಳ ಮೂಲಕ ಜನಜಾಗ್ರತಿಯನ್ನುಂಟುಮಾಡಿದರು.

ಜಗದ್ಗುರು ಮಹಾಸ್ವಾಮಿಯವರಿಂದ ಸಮಾಜಕ್ಕೆ ಆದ ಮತ್ತೊಂದು ಉಪಕಾರವೆಂದರೆ ಸ್ವಹಸ್ತದಿಂದ ಸಮಾಜ ಕಾರ್ಯಗಳಿಗೆ ಸಹಾಯವಲ್ಲದೆ, ಅರ್ಹರಾದ ಸಮಾಜಬಾಂಧವರನ್ನು ಪ್ರೋತ್ಸಾಹಿಸಿ, ಅವರಿಂದ ಸಮಾಜಕ್ಕೆ ಸಹಾಯ ಮಾಡಿಸುವದು. ತಿಪಟೂರಿನ ವೀರಶೈವಾಶ್ರಮಕ್ಕೆ ಮಹಾಸ್ವಾಮಿಯವರು ತಕ್ಕಷ್ಟು ಸಹಾಯವನ್ನು ಮಾಡಿ, ತಿಪಟೂರಿನ ಕೈ॥ ಜಿ. ಕೊಟ್ಟೂರಪ್ಪನವರನ್ನು ಪ್ರೋತ್ಸಾಹಿಸಿ ಸುಮಾರು ೨೫ ಸಾವಿರ ರೂಪಾಯಿಗಳ ದೇಣಿಗೆಯನ್ನು ಕೊಡಿಸಿದರು. ಧರ್ಮ ವೀರಶಂಕರಣ್ಣನವರ ೧ ಲಕ್ಷ ರೂಪಾಯಿಗಳ ದೇಣಿಗೆಗೂ ಶ್ರೀ ಜಗದ್ಗುರುಗಳೇ ಕಾರಣರು. ಮಹಾಸ್ವಾಮಿಯವರ ಬೆಂಗಳೂರು ಮೊಕ್ಕಾಮಿನಲ್ಲಿ ಮೇಲ್ಕಂಡ ಶ್ರೀ ಗುರುಮಠ ಕಲ್ಲಿನ ಸ್ವಾಮಿಗಳವರಿಂದ ಪ್ರೇರಿತರಾದ ಸಜ್ಜನಶೆಟ್ಟಿ ಶಂಕರಣ್ಣನವರು ಪತ್ನಿ ಸಮೇತರಾಗಿ ದರ್ಶನಕ್ಕಾಗಿ ಬಂದಿದ್ದಾಗ, ಜಗದ್ಗುರು ಮಹಾ ಸ್ವಾಮಿಗಳವರು ಅವರನ್ನು ಪ್ರೋತ್ಸಾಹಿಸಿ, ಬೆಂಗಳೂರಿನ ಕೈ॥ ತೋಟದಪ್ಪನವರೇ ಮೊದಲಾದ ಧರ್ಮ ಪ್ರವರ್ತಕರ ಉದಾಹರಣೆಗಳನ್ನು ಹೇಳಿ, ಕಡೆಗೆ ಸಂಸ್ಕೃತ ವಿದ್ಯಾಭ್ಯಾಸಕ್ಕಾಗಿ ಎರಡು ಲಕ್ಷ ರೂಪಾಯಿಗಳನ್ನು ಕೊಡುವಂತೆ ಮಾಡಿದರು. ಇಂತಹ ಅನೇಕ ಉಧಾಹರಣೆಗಳನ್ನು ಹೇಳಬಹುದಾಗಿದೆ.

ಸಮಾಜೋದ್ಧಾರವೇ ಗುರುಪೀಠಗಳ ಕರ್ತವ್ಯವೆಂಬುದನ್ನೂ, ಸಮಾಜೋದ್ಧಾರಕ್ಕೆ ವಿದ್ಯಾಪ್ರಸಾರವೇ ಮುಖ್ಯವೆಂಬುದನ್ನೂ ಬಲ್ಲವರಾದ ಜಗದ್ಗುರು ಶ್ರೀಗಳವರು ವೀರಶೈವ ಸಮಾಜದಲ್ಲಿ ಇತ್ತೀಚಿನ ವಿದ್ಯಾ ಪ್ರಸಾರದ ಸಹಾಯಕರಲ್ಲಿ ಅಗ್ರಗಣ್ಯರಾಗಿರುತ್ತಾರೆ. ಸಂಸ್ಥಾನದಿಂದ ಭರತಖಂಡದ ಬೇರೆಬೇರೆ ಸ್ಥಳಗಳ ಅನೇಕ ಬಡ ವಿದ್ಯಾರ್ಥಿಗಳಿಗೆ ಅವರವರ ತರಗತಿಗಳಿಗೆ ತಕ್ಕಂತೆ ವೇತನಗಳನ್ನು ಕೊಟ್ಟಿರುತ್ತಾರೆ, ಮತ್ತು ಕೊಡುತ್ತಲಿದ್ದಾರೆ. ಮಹಾ ಸಂಸ್ಥಾನದ ವೇತನಗಳ ಸಹಾಯದಿಂದ ಅಭ್ಯಾಸ ಮಾಡಿದ ಅನೇಕ ವೀರಶೈವ ತರುಣರು ಈಗ ಬೇರೆಬೇರೆ ಪ್ರಾಂತಗಳಲ್ಲಿ ದೊಡ್ಡ ಸಣ್ಣ ಸರ್ಕಾರಿ ಉದ್ಯೋಗಗಳಲ್ಲಿಯೂ, ವಕೀಲವೃತ್ತಿಯಲ್ಲಿಯೂ ಇತರ ಸ್ವತಂತ್ರ ವೃತ್ತಿಗಳಲ್ಲಿಯೂ ಇರುತ್ತಾರೆ. ಇದಲ್ಲದೆ ಮಹಾ ಸ್ವಾಮಿಯವರಿಂದ ಮಹಮದೀಯರು, ಒಕ್ಕಲಿಗರು ಮೊದಲಾದ ಅನೇಕ ಪರಮತೀಯ ವಿದ್ಯಾರ್ಥಿಗಳಿಗೂ ಸ್ಕಾಲರ್ ಷಿಪ್ಪು (ವೇತನ) ಗಳು ದೊರೆಯುತ್ತಿರುವುದು ಅಭಿನಂದನೀಯವಾಗಿದೆ. ಇದಲ್ಲದೆ ಮಹಾಸ್ವಾಮಿಯವರ ಸರ್ಕೀಟು ಕಾಲದಲ್ಲಿ ದೊಡ್ಡ ದೊಡ್ಡ ಸ್ಥಳಗಳೆಲ್ಲೆಲ್ಲ ಒಂದೊಂದು ವಿದ್ಯಾರ್ಥಿ ಭವನವು ಕಟ್ಟಲ್ಪಡುವಂತೆ ಪ್ರೋತ್ಸಾಹಿಸುವುದು ಅಥವಾ ಆ ಬಗ್ಗೆ ಸಂಸ್ಥಾನದಿಂದ ಆಗಬೇಕಾದ ಸಹಾಯವನ್ನು ಮಾಡಿ ಒಂದು ವಿದ್ಯಾರ್ಥಿ ನಿಲಯವನ್ನು ಕಟ್ಟಿಸಿಬಿಡುವುದು, ಹೀಗೆ ಮಹಾಸ್ವಾಮಿಯವರ ಹೆಸರಿನ ಅನೇಕ ವಿದ್ಯಾರ್ಥಿನಿಲಯಗಳು ಇರುವುವು. ಇದರಿಂದ ವಿದ್ಯಾಭ್ಯಾಸವು ಮುಂದುವರಿಯುವುದಕ್ಕೆ ಎಷ್ಟೋ ಪ್ರೋತ್ಸಾಹವಾಯಿತು.

ದೇಶ ಮಧ್ಯದಲ್ಲಿ ವೀರಶೈವ ಮಠದ ಅನೇಕಾನೇಕ ಮಠಗಳು ಹೀನಸ್ಥಿತಿಯಲ್ಲಿಯೂ, ಮತ್ತೆ ಕೆಲವು ಮಠಗಳು ಅನಾಯಕವಾಗಿಯೂ ಇದ್ದವು ಮತ್ತು ಈಗಲೂ ಕೆಲವು ಇರುವುವು. ಈ ಪೈಕಿ ಅನೇಕ ಮಠಗಳನ್ನು ಮಹಾಸ್ವಾಮಿಯವರು ವಶಕ್ಕೆ ತೆಗೆದುಕೊಂಡು ಅವುಗಳಿಗೆ ತಕ್ಕ ಅಧಿಕಾರಿಗಳನ್ನು ಸಂಸ್ಥಾನದಿಂದ ಕಳಿಸುತ್ತಾ ಬಂದರು. ಈ ಸಂದರ್ಭದಲ್ಲಿ ಕೆಲವು ಮಠಗಳ ಸಂಬಂಧವಾಗಿ ಸರ್ಕಾರದಲ್ಲಿಯೂ, ಇತರರೊಡನೆಯೂ ಬಹಳವಾಗಿ ವ್ಯವಹಾರ ನಡೆಸಬೇಕಾಯಿತು. ಉದಾಹರಣೆಗೆ ಕೊಡಗಿನ ಮಾದಾಪುರ ಮಠವನ್ನು ತೆಗೆದುಕೊಳ್ಳಬಹುದು. ಈ ಮಠದ ಮತ್ತು ಆ ಸಂಬಂಧವಾದ ದೊಡ್ಡ ಜಮೀನುಗಳ ಹಕ್ಕುದಾರಿಯನ್ನು ಉಳಿಸಿಕೊಳ್ಳಬೇಕಾದರೆ ಸಂಸ್ಥಾನಕ್ಕೆ ಬಹಳ ಶ್ರಮ ಸಾಧ್ಯವಾಯಿತು.

ಮಹಾಸ್ವಾಮಿಯವರ ಆಡಳಿತಕಾಲದಲ್ಲಿ ಅನೇಕ ಕಟ್ಟಡಗಳು ಕಟ್ಟಲ್ಪಟ್ಟವು. ಚಿತ್ರದುರ್ಗ ಬೃಹನ್ಮಠದ ಮಹಾದ್ವಾರ, ಹುಣಿ ... ಕಟ್ಟಡಗಳೂ, ಕೊಲ್ಲಾಪುರ (ಕರವೀ




ಜಗದ್ಗುರು ಜಗದಾಚಾರ್ಯ ಸ್ವಾಮೀ ವಿರೂಪಾಕ್ಷ ಒಡೆಯರವರ ಪಾಲಕ್ಕಿ ಉತ್ಸವ.



ಸ್ವಾಮಿ ವಿರೂಪಾಕ್ಷ ಒಡೆಯರವರೂ ಸಹೋದರರೂ.



ನಿಜಾಂ ದೇಶದಲ್ಲಿರುವ ಕೆಲವರು ವೀರಶೈವ ವಕೀಲರು.



ಹೈದರಾಬಾದು ಪರಳೀ ಪ್ರಕರಣದ ಶಾಸ್ತ್ರವಾದದಲ್ಲಿ ಭಾಗಿಗಳಾಗಿದ್ದ ವೀರಶೈವ ಪಂಡಿತರು.

ರಕ್ಷೇತ್ರ) ರಾಜಧಾನಿಯಲ್ಲಿರುವ ಭವ್ಯವಾದ ಮಠವೂ ಮಹಾ
ಸ್ವಾಮಿಯವರ ಆಡಳಿತಕಾಲದಲ್ಲಿಯೇ ಕಟ್ಟಲ್ಪಟ್ಟಿತು. ಹೀಗೆ
ಅನೇಕ ಕಟ್ಟಡಗಳು ತಯಾರಾಗಿರುವುವು.

ಮಹಾಸ್ವಾಮಿಯವರು ಸಮಾಜ ಮತ್ತು ದೇಶದ ಹಿ
ತಕ್ಕೆ ಸಂಬಂಧವಾದ ಎಲ್ಲ ಕಾರ್ಯಗಳಿಗೂ ಕೈಗೊಟ್ಟು,
ತನ್ಮೂಲಕ ಸಮಾಜದ ಚಿರಕೃತಜ್ಞತೆಗೆ ಪಾತ್ರರಾಗಿರುವರು.
ಮೈಸೂರು ಪ್ರಾಂತದ ಚಿಟ್ಟದಪುರ ವಿರಕ್ತಮಠದ ಮೂರ್ತಿ
ಗಳಾದ ಶ್ರೀ|| ಚಿಕ್ಕವೀರದೇಶಿಕೇಂದ್ರ ಮಹಾಸ್ವಾಮಿಗಳ
ಪ್ರಾರ್ಥನೆಯಂತೆ ಅಲ್ಲಿಗೆ ಸನ್ನಿಧಿಯು ದಯಮಾಡಿಸಿ ಮೈಸೂ
ರಲ್ಲಿರುವ ಶ್ರೀ|| ಗಳವರ ಬೋರ್ಡಿಂಗಿಗೆ ಟ್ರಸ್ಟಿಗಳನ್ನು ಏರ್ಪ
ಡಿಸುವುದರ ಮೂಲಕ ಸುವ್ಯವಸ್ಥೆಯನ್ನು ಮಾಡಿದರು. ಉಳ
ವಿ ಕ್ಷೇತ್ರದ ವ್ಯವಸ್ಥೆಯು ಯೋಗ್ಯ ಕಮಿಟಿಯನ್ನು ನಿಯ
ಮಿಸುವುದರ ಮೂಲಕ ಮಾಡಲ್ಪಟ್ಟಿತು. ಇಂತ ಮಹತ್ವದ
ಕೆಲಸಗಳು ಮಹಾ ಪಾದದಿಂದ ನೆರವೇರಿರುವುವು. ಮಹಾ
ಯುದ್ಧಕಾಲದಲ್ಲಿ ಸಾರ್ವಭೌಮ ಸರ್ಕಾರದವರಿಗೆ ಧೈರ್ಯ
ಪರ ಶುಭಾನುವಾದಗಳಾದ ಟೆಲಿಗ್ರಾಮ್‌ಗಳನ್ನು ಕಳಿಸಿದ್ದ
ಲ್ಲದೆ, ಇಂಡಿಯಾದ ವೀರಶೈವ ಮತ್ತು ವೀರಶೈವ ಮತಾನು
ಯಾಯಿಗಳಾದ ಪ್ರಜಾ ಕೋಟಿಯವರೆಲ್ಲಾ ಸಾರ್ವಭೌಮ
ಸರ್ಕಾರಕ್ಕೆ ಬೇಕಾಗುವ ಎಲ್ಲಾ ವಿಧವಾದ ಅನುಕೂಲತೆಯ
ನ್ನೊದಗಿಸಬೇಕೆಂತಲೂ, ಸಾರ್ವಭೌಮ ಸರಕಾರದವರಿಗೆ ಜ
ಯದೊರೆಯಲೆಂದು ಜಗದೀಶ್ವರನನ್ನು ಪ್ರಾರ್ಥನೆ ಮಾಡಬೇ
ಕೆಂತಲೂ ನಿರೂಪದ್ವಾರ ಎಲ್ಲಾ ದೇಶದ ಭಕ್ತಮಂಡಳಿಯವ
ರಿಗೆ ಕಟ್ಟಪ್ಪಣೆ ದಯಪಾಲಿಸಿದರು. ತಕ್ಷಣವೇ ನೇಕ ನಾಮ
ದಾರರಾದ ವ್ಹಾಯಿಸರಾಯಿ ಪ್ರಭುಗಳವರು ಶ್ರೀ ಜಗದ್ಗುರು
ಗಳವರಿಗೆ ಮಂದನಾಪರ ಟೆಲಿಗ್ರಾಮ್ ಕಳಿಸಿದರು. ವಾರ್‌ರಿಲೀ
ಫ್ ಫಂಡಿಗೆ ಮಹಾ ಸಂಸ್ಥಾನದಿಂದ ರೋಖು ಹಣವನ್ನು
ಕೊಟ್ಟದ್ದಲ್ಲದೆ, ಯಾವತ್ತೂ ಶಿಷ್ಯಮಠಗಳಿಂದಲೂ ಸಹಾಯ
ಕೊಡಿಸಿ, ಭಕ್ತಕೋಟಿಯವರಿಗೂ ಅಪ್ಪಣೆಮಾಡಿ, ಕೊಡಿಸಿ
ದರು. ಜಗದೀಶನ ಕೃಪೆಯಿಂದ ಯುದ್ಧ ಸಮಾಪ್ತಿಯಾಗಿ,
ಇಂಡಿಯಾ ಸಾರ್ವಭೌಮರಿಗೆ ಜಯ ದೊರೆಯಲು ಸಾರ್ವಭೌ
ಮ ಸರಕಾರದವರು (ವ್ಹಾಯಿಸರಾಯ ಪ್ರಭುಗಳವರು)
ಕೂಡಲೆ ಶ್ರೀ ಜಗದ್ಗುರು ಮಹಾ ಸನ್ನಿಧಿಗೆ ಟೆಲಿಗ್ರಾಮ್
ಮೂಲಕ ತಿಳಿಸಿದರು. ತಕ್ಷಣವೇ ಮಹಾಸನ್ನಿಧಾನ
ದಿಂದ, ಅಖಿಲಭಾರತದ ಸಮಸ್ತ ಭಕ್ತಮಂಡಲಿಯು ಆನಂ
ದೋತ್ಸವ ಮಾಡಬೇಕೆಂದು ನಿರೂಪ ಕೊಡಲ್ಪಟ್ಟದ್ದರಿಂದ
ಅದರಂತೆ ಆಚರಣೆಯಾಯಿತು ; ಅಲ್ಲದೆ, ಮಹಾ ಸಂಸ್ಥಾನ
ದಲ್ಲಿ ಅನ್ನದಾನ ಉತ್ಸವಾದಿಗಳು ವೈಭವದಿಂದ ನಡೆದವು.

ಮಹಾ ಯುದ್ಧ ಸಮಯದಲ್ಲಿ ಕೊಲ್ಹಾಪುರದ ಶ್ರೀ
ಶಾಹು ಛತ್ರಪತಿ ಮಹಾರಾಜರವರ ಚಿರಂಜೀವಿಗಳು ಇಂಗ್ಲೆಂ
ಡಿನಿಂದ ಹಿಂದಿರುಗಿ ಹಡಗು ಇಳಿದು ಬೆಳಗಾವಿ ಮಾರ್ಗ
ವಾಗಿ ಸ್ವದೇಶಕ್ಕೆ ಹೊರಡುವ ಸಂದರ್ಭದಲ್ಲಿ ಮುಖ್ಯ ಮು
ಖ್ಯ ರೈಲ್ವೇಸ್ಟೇಷನ್ನುಗಳಲ್ಲಿ ಸನ್ಮಾನ ಸಮಾರಂಭ ಮಾಡು
ವಂತೆ ಸರ್ವ ವೀರಶೈವ ಮತ್ತು ವೀರಶೈವ ಮತಾನುಯಾ
ಯಿಗಳಿಗೆ ಟೆಲಿಗ್ರಾಮು ಮೂಲಕ ಅಪ್ಪಣೆಮಾಡಲು, ಮು
ಖ್ಯ ಮುಖ್ಯ ಸ್ಟೇಷನ್‌ಗಳಲ್ಲೆಲ್ಲಾ ಸನ್ಮಾನ ಸಮಾರಂಭಗಳ
ವೈಭವ ನಡೆಯಿತು.

ಮಹಾ ಸನ್ನಿಧಾನದ ಮೊಕ್ಕಾಂ ಬೆಂಗಳೂರಿನಲ್ಲಿ ಇರು
ವಾಗ್ಗೆ ಶ್ರೀ ಜಯಚಾಮರಾಜ ಒಡೆಯರವರು ಜನಿಸಿದ ಸುಸ
ಮಯದಲ್ಲಿ ಸಂಸ್ಥಾನದಿಂದ ಅಂಬಾರಿ ಉತ್ಸವವನ್ನು ಹೊರ
ಡಿಸಿ, ಸಕ್ಕರೆಯನ್ನು ಗಾಡಿಗಳ ಮೇಲೆ ಜನರ ಮುಸದಣೆಯು
ಮತೆ ಹಂಚಿದ ಅಂಶವು ಚಿರಸ್ಮರಣೀಯವಾಗಿದೆ.

ಮೈಸೂರಿನ ಶ್ರೀಮನ್ಮಹಾರಾಜಾ ಶ್ರೀ ಕೃಷ್ಣರಾಜೇಂದ್ರ
ಒಡೆಯರ್ ಬಹದ್ದೂರರವರ ರಜತೋತ್ಸವ ಸಮಯದಲ್ಲಿ
ಮಹಾ ಸಂಸ್ಥಾನದಿಂದ ನಿರೂಪ ಸಹ ಫಲಮಂತ್ರಾಕ್ಷತೆ
ಪಲ್ಲತ್ತುಗಳನ್ನು ಒಪ್ಪಿಸಿದರು. ಅಲ್ಲದೆ ಶ್ರೀ ಮಹಾ ಸ
ನ್ನಿಧಾನದ ನಿರೂಪಪ್ರಕಾರ ಈ ಮಹೋತ್ಸವಾಚರಣೆಯು ಮೈ
ಸೂರು ಪ್ರಾಂತದಲ್ಲಲ್ಲದೆ, ಮುಂಬೈ, ಮದರಾಸು, ನೈಜಾಂ,
ಮಧ್ಯ ಪ್ರಾಂತ, ಸೆಂಟ್ರಲ್ ಪ್ರಾವಿನ್ಸುಗಳಲ್ಲಿ ಸಹ ಆಚರಿಸ
ಲ್ಪಟ್ಟಿತು.

ಮೇಲ್ಕಂಡ ರೀತಿಗಳಲ್ಲಿ ಮಹಾಸ್ವಾಮಿಯವರು ವೈದಿ
ಕ ಕಾರ್ಯಗಳಲ್ಲಿ ಹೇಗೋ ಹಾಗೆಯೇ ಲೌಕಿಕ ಕಾರ್ಯಗಳಲ್ಲಿ
ಯೂ, ಕೇವಲ ಮತೀಯ ಕಾರ್ಯಗಳಲ್ಲಿ ಹೇಗೋ ಹಾಗೆ
ಯೇ ಸಾರ್ವಜನಿಕ ಕಾರ್ಯಗಳಲ್ಲಿಯೂ ಮುಂದುವರಿದು
ಕಾಲಕಾಲಕ್ಕೆ ಮಾಡಬೇಕಾದ ಕಾರ್ಯಗಳನ್ನು ಕಾಲಪರಿಸ್ಥಿತಿಗೆ
ತಕ್ಕಂತೆ ಮಾಡುತ್ತಿರುವುದರಿಂದ, ಮಹಾ ಸ್ವಾಮಿಗಳವರು
ವೀರಶೈವ ಮತ್ತು ವೀರಶೈವೇತರ ಜನಾಂಗಗಳ ಚಿರಕೃತಜ್ಞ
ತೆಗೆ ಪಾತ್ರರಾಗಿರುತ್ತಾರೆ. ಆದ್ದರಿಂದಲೇ ಸನ್ನಿಧಾನಕ್ಕೆ
ಎಲ್ಲೆಡೆಗಳಲ್ಲಿಯೂ ಬೇರೆ ಬೇರೆ ಜನಾಂಗಗಳ ಬಿನ್ನವತ್ತಳೆ
ಗಳು ಬಂದಿರುತ್ತವೆ. ಕೊಲ್ಹಾಪುರದ ಶ್ರೀ ಶಾಹು ಛತ್ರಪತಿ
ಮಹಾರಾಜಾ ಸರ್ಕಾರವು ಮಹಾಸ್ವಾಮಿಗಳ ಉತ್ಸವಕ್ಕೆ
ಸಂಪೂರ್ಣಗೌರವವನ್ನು ಕೊಟ್ಟಿರುವ ಅಂಶವೂ, ಪುಣೆಪಟ್ಟ
ಣದ ಡಾಕ್ಟರ್ ಭಾಂಡಾರಕರ್ ಮೊದಲಾದ ಪಂಡಿತವರೇಣ್ಯರು
ಜಗದ್ಗುರು ಶ್ರೀಗಳವರನ್ನು ಕಂಡು ಗೌರವಿಸಿ ವಿಜ್ಞಾಪನಾ ಪ
ತ್ರಿಕೆಗಳನ್ನು ಅರ್ಪಿಸಿರುವ ಅಂಶವೂ ಸರ್ವ ವಿಶ್ರುತ ವಿಷಯ
ವಾಗಿದೆ.

ಮಹಾ ಸನ್ನಿಧಾನದಿಂದ ವಿದ್ಯಾದಿ ವಿಷಯಗಳಿಗೆ ದ್ರವ್ಯರೂಪದಲ್ಲಿ ಆಗಿರುವ ಸಹಾಯವು ಅನಂತವಾಗಿದ್ದರೂ ಕೆಲವಂಶಗಳನ್ನು ಮಾತ್ರ ಈ ಕೆಳಗೆ ಕೊಟ್ಟಿರುತ್ತೆ. ಈ ಮೊತ್ತದ ದೇಣಿಗೆಗಳಲ್ಲದೆ ಅನೇಕ ಮಹಮದೀಯ, ರಡ್ಡಿ, ಲಂಬಾಣಿ, ಪಂಚಮ್ಮ ಮೊದಲಾದವರ ಸಂಸ್ಥೆಗಳಿಗೆ ಪ್ರತಿವರ್ಷ ಸಹಾಯ ಮಾಡುತ್ತಿರುವರು.

| | |
|---|---|
| ಧಾರವಾಡ ಶ್ರೀಮುರುಘರಾಜೇಂದ್ರ ಹಾಲಿಗೆ .... .... | ೧೨,೦೦೦ |
| ಬಾಗಲಕೋಟಿ ವೀರಶೈವ ಬೋರ್ಡಿಂಗಿಗೆ .... .... | ೧,೦೦೦ |
| ಸೊಲ್ಲಾಪುರ ವೀರಶೈವ ಬೋರ್ಡಿಂಗಿಗೆ .... .... | ೧,೦೦೦ |
| ಕೊಲ್ಹಾಪುರ ಜೈನ ಮರಾಠಿ ಮಹಮ್ಮದೀಯ ಬೋರ್ಡಿಂಗಿಗೆ .... | ೮೦೦ |
| ಸತಾರ ಅಂಜುಮನ್ ಇಸ್ಮಾಯಿಲ್ ಬೋರ್ಡಿಂಗಕ್ಕೆ .... .... | ೧೦೦ |
| ಧಾರವಾಡ ಕರ್ನಾಟಕ ಕಾಲೇಜಿಗೆ .... .... | ೫,೦೦೦ |
| ಸಾಂಗ್ಲಿ ವೀರಶೈವ ಬೋರ್ಡಿಂಗಿಗೆ .... .... | ೩,೦೦೦ |
| ಬೃಹನ್ಮಠದ ಮುಂದಿನ ಸ್ಕೂಲ ಕಟ್ಟಡ .... .... | ೧,೦೦೦ |
| ಚಿತ್ರದುರ್ಗ ಬೋರ್ಡಿಂಗ ಕಟ್ಟಡಕ್ಕೆ .... .... | ೨೦,೦೦೦ |
| ಚಿತ್ರದುರ್ಗ ಬೋರ್ಡಿಂಗ ೪೦-ವಿದ್ಯಾರ್ಥಿಗಳ ಖರ್ಚು ಪ್ರತಿ ವರ್ಷ .... | ೪,೨೦೦ |
| ತಿಬಟೂರು ವೈದಿಕ ಪಾಠಶಾಲಾ ಮತ್ತು ಬೋರ್ಡಿಂಗಿಗೆ .... | ೨೦,೦೦೦ |
| ಧಾರವಾಡ ಬೋರ್ಡಿಂಗಿಗೆ .... .... | ೨,೦೦೦ |
| ಕೊಲ್ಹಾಪುರ ವೀರಶೈವ ವಿದ್ಯಾರ್ಥಿಗಳ ವಾಸಕ್ಕೆ ರೂಮು ಬಗ್ಗೆ .... | ೫,೦೦೦ |
| ಸವಣೂರ ಅಂಜುಮನ್ ಇಸ್ಮಾಯಿಲ್ ಸಂಘಕ್ಕೆ .... .... | ೫೦೦ |
| ಚಿತ್ರದುರ್ಗದ ಆರ್ಯನ್ ಸ್ಟೂಡೆಂಟ್ಸ ರೂಮಿಗೆ .... .... | ೨೦೦ |
| ಜ್ಯಾನೇಕಲ್ ಮಹಮ್ಮದೀಯರ ಸ್ಕೂಲ ಕಟ್ಟಡ .... .... | ೫೦೦ |
| ಬೆಂಗಳೂರ ವೀರಶೈವ ಬೋರ್ಡಿಂಗಿಗೆ .... | ೩೦,೦೦೦ |
| ತುಂಕೂರು ಹಾಸ್ಟಲಿಗೆ .... .... | ೨೩,೫೦೦ |
| ಬ್ಯಾಡಗಿ ಬೋರ್ಡಿಂಗ್ ಲೈಬ್ರರಿಗೆ .... .... | ೧,೦೦೦ |
| ದಾವಣಗೆರೆ ಶಿವಯೋಗೀಶ್ವರಾಶ್ರಮಕ್ಕೆ .... .... | ೧೦,೦೦೦ |

ಸಂಸ್ಥಾನದಿಂದ ಮತೀಯ ಪರ ಮತೀಯರೆನ್ನದೆ ಸಹಾಯ ದೊರೆಯುತ್ತಿರುವುದರಿಂದ ಸಮಾಜಕ್ಕೂ ದೇಶಕ್ಕೂ ಎಷ್ಟೋ ಉಪಕಾರಗಳಾಗಿರುತ್ತವೆ. ಒಟ್ಟಿನಲ್ಲಿ ಈ ವ್ಯಕ್ತಿಗೆ ಸರಿಹೋಲುವ ಮತ್ತೊಂದು ವ್ಯಕ್ತಿಯು ಸಮಾಜದಲ್ಲಿ ಇತ್ತೀಚಿಗೆ ಉದ



ಯವಾಗಲಿಲ್ಲೆಂದೂ, ಸಮಾಜದ ಈಗಿನ ಕಳಕಳಿಗೂ, ವೈದಿಕ ಲೌಕಿಕ ಸುಧಾರಣೆಗೂ ಈಗ ಕಾಲುಶತಮಾನ(೨೫ವರ್ಷದಿಂದ ಮಹಾಸ್ವಾಮಿಯವರು ಅವಿಶ್ರಾಂತ ಶ್ರಮ ವಹಿಸಿದುದು ಮುಖ್ಯ ಕಾರಣವೆಂದೂ ಹೇಳಬಹುದಾಗಿದೆ.



ಶ್ರೀಮನ್ಮಹಾ ದಕ್ಷಿಣಕಾಶೀ ನಿಜಸಿಂಹಾಸನಾಧೀಶ್ವರ
ಚವುಡಯ್ಯದಾನಪುರ ಸಂಸ್ಥಾನದ

**ಜಗದ್ಗುರು ಜಗದಾಚಾರ್ಯ ಸ್ವಾಮಿ ವಿರೂಪಾಕ್ಷ ಒಡೆಯರವರು.**

# ಅಖಿಲಭಾರತ ವೀರಶೈವ ಮಹಾಸಭೆ.

## (ಉಗಮ)

ಅಖಿಲ ಭಾರತ ವೀರಶೈವ ಮಹಾಸಭೆಯ ಮೊದಲನೆಯ ಅಧಿವೇಶನವು ನಡೆದುದು ಮುಂಬೈ ವೀರಶೈವರ ಕೇಂದ್ರಸ್ಥಾನವಾದ ಧಾರವಾಡದಲ್ಲಿ. ಈ ಒಂದನೆಯ ಸಭೆಯ ಸ್ವಾಗತ ಸಂಘಾಧ್ಯಕ್ಷರ ಭಾಷಣದಲ್ಲಿ ವೀರಶೈವ ಮಹಾಸಭೆಯ ಉಗಮ ಎಂದರೆ ಮಹಾಸಭೆಯ ಉತ್ಪಾದಕರು ಯಾರು, ಈ ಸಭೆಯನ್ನು ಸ್ಥಾಪಿಸುವ ವಿಚಾರ ಮೊದಲು ಯಾರಲ್ಲಿ ಹುಟ್ಟಿತು, ಇದಕ್ಕೆ ಪ್ರೋತ್ಸಾಹ ಕೊಟ್ಟವರು ಯಾರು ?--ಎಂಬೀ ವಿಷಯವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಅವರ ಕೆಲವಂಶಗಳನ್ನು ಈ ಕೆಳಗೆ ಉದ್ಧರಿಸಿದೆ:—

'೧೯೦೪ನೇ ಇಸವಿಯ ಪ್ರಾರಂಭದಲ್ಲಿ ಧಾರವಾಡದ ವೀರಶೈವರು ವೀರಶೈವ ಮತಪ್ರಚಾರಕ ಸಂಘ ಎಂಬ ಸಂಸ್ಥೆಯನ್ನು ಸ್ಥಾಪಿಸಿ, ವಾರಕ್ಕೊಮ್ಮೆ ಧರ್ಮೋಪದೇಶಮಾಡುವ ಉದ್ಯೋಗವನ್ನೂ, ಸಂಸ್ಕೃತ ಅಥವಾ ಮತಸಂಬಂಧ ಪಾಠಶಾಲೆಗಳಿಲ್ಲದ ಗ್ರಾಮಗಳ ವೀರಶೈವರಿಗೆ ಪತ್ರಗಳನ್ನು ಬರೆದು ಪಾಠಶಾಲೆಗಳನ್ನು ಸ್ಥಾಪಿಸಿಕೊಳ್ಳಬೇಕೆಂದು ಸೂಚಿಸುವ ಕ್ರಮವನ್ನೂ ನಡೆಸಿದರು ...

..................ಈ ಸಭೆಯವರು ಬೇರೆ ಬೇರೆ ಪ್ರಾಂತಗಳಿಗೆ ಸೇರಿರುವ ವೀರಶೈವ ಮಹನೀಯರು ತಮ್ಮ ತಮ್ಮ ಸೀಮೆಗಳಲ್ಲಿ ಸಮಾಜೋನ್ನತಿಯ ಉದ್ಯೋಗಗಳನ್ನು ನಡೆಸಿರುವ ಸಂಗತಿಗಳನ್ನು ಕೇಳಿ, ಬೇರೆ ಬೇರೆ ಪ್ರಾಂತಗಳೊಳಗಿನ ಪ್ರಮುಖ ವೀರಶೈವರು ವರ್ಷಕ್ಕೊಂದುಸಾರಿ ಒಂದು ಸ್ಥಳದಲ್ಲಿ ಸೇರಿ ಧಾರ್ಮಿಕ ಮತ್ತು ವ್ಯವಹಾರಿಕ ವಿಷಯಗಳನ್ನು ಕುರಿತು ಪರ್ಯಾಲೋಚಿಸಿ, ಸಮ್ಮನಸ್ಸಿನಿಂದ ವರ್ತಿಸಿದರೆ ಸಮಾಜಸುಧಾರಣೆಯು ತೀವ್ರವಾಗಿ ಆಗುವದೆಂದು ಯೋಚಿಸುತ್ತಿರುವಷ್ಟರಲ್ಲಿ ತುಮಕೂರಿನ ಅಡ್ವೋಕೇಟರಾದ ಮ|| ರಾ|| ರಾ|| ಪಿ. ಮಹದೇವಯ್ಯನವರ (ಇವರು ಈಗ ಶಿವಮೊಗ್ಗದಲ್ಲಿ ಡಿ|| ಜಡ್ಜರಾಗಿರುವರು.) ಆಗಮನವೂ, ಮ|| ರಾ|| ಜಿ. ಶಾಂತವೀರಪ್ಪ ಅಣ್ಣಾ ಬಿ.ಎ., ಹಾಸನ, (ಇವರು ಈಗ ಬೆಂಗಳೂರಿನಲ್ಲಿ ಪೋಲೀಸ್ ಇನ್ಸ್‌ಪೆಕ್ಟರ್ ಜನರಲ್‌ರವರ ಅಸಿಸ್ಟೆಂಟರಾಗಿರುವರು) ಇವರ ಆಗಮನವೂ ಹೋದವರ್ಷ ಜನವರಿ ತಿಂಗಳಿನಲ್ಲಿ ಆದವು. ಇವರ ಆಗಮನಗಳಿಂದ ವೀರಶೈವ ಮಹಾಸಭೆಯನ್ನು ನೆರೆಯಿಸುವುದು ಅವಶ್ಯಕವಾದದ್ದೆಂದು ಸರ್ವರಿಗೂ ತೋರಹತ್ತಿತು. ಮುಂದೆ ಮೇ ತಿಂಗಳಿನಲ್ಲಿ ನಮ್ಮ ಸುದೈವದಿಂದ ಶ್ರೀ ಬಸವೇಶ ಪುರಾಣಮಂಗಲಕ್ಕಾಗಿ ಇಲ್ಲಿಯ ವೀರಶೈವ ಮತಪ್ರಚಾರಕಸಭೆಯವರು ಸವದತ್ತಿಗೆ ಹೋಗಬೇಕಾಯಿತು. ಈ ಮಹಾ ಸಮಾರಂಭಕ್ಕೆ ಹುಬ್ಬಳ್ಳಿಯ ಮೂರುಸಾವಿರಮಠದ ಶ್ರೀಗಳವರೂ, ಅಥಣಿ ಶಿವಯೋಗಿಗಳಾದ ಶ್ರೀ ಮುರಿಗೆಪ್ಪ ಸ್ವಾಮಿಗಳವರೂ, ಹಾನಗಲ್ಲಿನ ಶ್ರೀ ಕುಮಾರಸ್ವಾಮಿಗಳವರೂ, ಇನ್ನೂ ಅನೇಕ ದೇಶಿಕೋತ್ತಮರೂ ದಯಮಾಡಿಸಿದ್ದರು. ಆ ಕಾಲಕ್ಕೆ ಸಮಾಜೋನ್ನತಿಯಬಗ್ಗೆ ಚರ್ಚೆನಡೆದು, ಸ್ವತಂತ್ರ ಧರ್ಮಬೋಧಕರನ್ನು ನೇಮಿಸಬೇಕೆಂದು ಗೊತ್ತಾಯಿತು. ಈ ಕೆಲಸಕ್ಕೆ ಹಾನಗಲ್ಲಿನ ಶ್ರೀಗಳವರು ತಮ್ಮ ತಪೋಮಹಿಮೆಯ ಹಸ್ತ ೧೦೦೦ ರೂಪಾಯಿಗಳನ್ನು ಕೊಟ್ಟಿದ್ದನ್ನು ನೋಡಿ, ಉಳಿದ ವೀರಶೈವ ಸದ್ಗೃಹಸ್ಥರು ೨೦೦ ರೂಪಾಯಿಗಳನ್ನು ವರ್ಗಣಿಯಿಂದ ಕೂಡಿಸಿದರು. ಬಳಿಕ ಕೆಲವು ದಿನಗಳು ಗತಿಸುವಷ್ಟರಲ್ಲಿಯೇ ಹುಬ್ಬಳ್ಳಿಯಲ್ಲಿ ಮೂರುಸಾವಿರಮಠದ ಶ್ರೀಗಳವರ ಅಡ್ಡಪಲ್ಲಕ್ಕಿಯ ಉತ್ಸವವು ಆಯಿತು. ಈ ಉತ್ಸವಕ್ಕೆ ಬೇರೆ ಬೇರೆ ಪ್ರಾಂತಗಳಿಗೆ ಸೇರಿದ ವೀರಶೈವ ಸದ್ಗೃಹಸ್ಥರು ಬಂದಿದ್ದರು. ಇವರೆಲ್ಲರೂ ಕೂಡಿ ಸಮಾಜಸುಧಾರಣೆಯ ಪ್ರಸ್ತಾಪ ತೆಗೆದು, ವೀರಶೈವ ಮಹಾಸಭೆಯನ್ನು ವರ್ಷಕ್ಕೊಮ್ಮೆ ಬೇರೆಬೇರೆ ಪ್ರಸಿದ್ಧ ಪಟ್ಟಣಗಳಲ್ಲಿ ನೆರೆಸಬೇಕೆಂತಲೂ ಮೊದಲನೆಯ ಸಭೆಯನ್ನು ಧಾರವಾಡದಲ್ಲಿ ೧೯೦೪ನೇ ಇಸವಿ ಡಿಶಂಬರು ತಿಂಗಳಿನಲ್ಲಿ ಕೂಡಿಸಬೇಕೆಂತಲೂ ಹಾನಗಲ್ಲಿನ ಶ್ರೀಗಳವರ ಸಮ್ಮುಖದಲ್ಲಿ ನಿಶ್ಚೈಸಿದರು. ಆಮೇಲೆ ಈ ಮಹಾಸ್ವಾಮಿಗಳವರು ಧಾರವಾಡಕ್ಕೆ ಕೂಡಲೆ ದಯಮಾಡಿಸಿ, ಭಕ್ತಜನರನ್ನು ಕಲೆಸಿಕೊಂಡು ಅವರಿಗೆ ಉತ್ತೇಜನಕೊಟ್ಟು ಧನವನ್ನು ಕೂಡಿಸಿದರು. ಆಮೇಲೆ ನಿಯಮಿತವಾದಮೇರೆಗೆ ಡಿಶಂಬರು ತಿಂಗಳಿನಲ್ಲಿ ಸಭೆಯನ್ನು ನೆರೆಸುವಬಗ್ಗೆ ಪ್ರಕಟನೆಯಪತ್ರಗಳು ಜೂನ ೨೨ನೇ ತಾರೀಖಿಗೆ ಸುತ್ತಲೂ ಕಳುಹಿಸಲ್ಪಟ್ಟವು

ಮೇಲೆಕಂಡ ವಿಷಯಸಂಗ್ರಹದಿಂದ ಮಹಾಸಭಾ ಸ್ಥಾಪನೆಯು ಯಾವಾಗ, ಹೇಗೆ, ಯಾರಿಂದ ಉಂಟಾಯಿತೆಂಬ ಬಗ್ಗೆ ಮಾಹಿತಿಬರುವುದು.



ಶ್ರೀಮನ್ನಿರಂಜನ ಜಗದ್ಗುರು ಶ್ರೀ ಗುರುಸಿದ್ಧರಾಜ ಯೋಗೀಂದ್ರ ಮಹಾಸ್ವಾಮಿಗಳವರು
ಮೂರುಸಾವಿರ ಮಠ, ಹುಬ್ಬಳ್ಳಿ



ಶ್ರೀಮನ್ನಿರಂಜನ ಜಗದ್ಗುರು
ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರು, ಗದಗ



ಶ್ರೀ ಚನ್ನಬಸವ ಶಿವಾಚಾರ್ಯ ಸ್ವಾಮಿಗಳವರು, ಬ್ರಹ್ಮಸಮುದ್ರ



ಶ್ರೀ ನಿಜಲಿಂಗೇಶ್ವರ ಮಹಾಸ್ವಾಮಿ, ದುರ್ಮುಂಡೇಶ್ವರ ಮಠ, ನಿಡಸೂಸಿ



ಶ್ರೀ ರೇವಣಸಿದ್ಧ ಮಹಾಸ್ವಾಮಿಗಳು, ಹಿರೇಮಠ, ಕೆಳದಿ.



ಪಟ್ಟಾಧ್ಯಕ್ಷ ಶ್ರೀ ಶಾಂತವೀರಸ್ವಾಮಿಗಳು ಹಿರೇಮಠ. ಬಬಲೇಶ್ವರ.



ಶಿವಪಾದ ಯೋಗಿಗಳು, ನಂಜನಗೂಡು



ಶ್ರೀ ಶಿವಲಿಂಗ ಮಹಾಸ್ವಾಮಿ, ದುರಮುಂಡೇಶ್ವರ ಮಠ.



ಹುಣಸನಾರನಹಳ್ಳಿ, ಶ್ರೀಮಠಾಧ್ಯಕ್ಷ ಶ್ರೀ ನಂಜೇಸ್ವಾಮಿಗಳು



ಶ್ರೀ ಜಾಬಾಲಪುರಿ ಮಠದ ಶ್ರೀ ಚಂದ್ರಶೇಖರ ದೇಶೀಕೇಂದ್ರ ಸ್ವಾಮಿಗಳು



ಹಿರೇಹಾಳು ಮಳೇಮಠದ ಪಟ್ಟಾಧ್ಯಕ್ಷ ಶ್ರೀ ವಿರೂಪಾಕ್ಷ ಸ್ವಾಮಿಗಳು



ಶ್ರೀ ಹಾನಗಲ್ ಕುಮಾರಸ್ವಾಮಿಗಳವರು



ಅಥಣಿಯ ಶ್ರೀ ಮುರುಘೇಂದ್ರ
ಶಿವಯೋಗಿಗಳು



ಶ್ರೀ ಗುರುಬಸವ ಮಹಾಸ್ವಾಮಿಗಳವರು, ವೀಳೂರು



ಶ್ರೀ ಸಂಗನ ಬಸವ ಸ್ವಾಮಿಗಳು, ಬಂಥನಾಳ
ವೀರಶೈವ ವಿದ್ಯಾಲಯದ ಅಧಿಪತಿಗಳು, ಆಲಮಟ್ಟಿ.



ಶ್ರೀ ಮತುಕೂರು ನಂಜುಂಡ ಶಿವಯೋಗಿಗಳು



ಶ್ರೀ ೧೧ನೇ ಹುಚ್ಚೇಶ್ವರ ಸ್ವಾಮಿಗಳು, ಕಮತಗಿ



ಶ್ರೀ ಚನ್ನಬಸವ ಸ್ವಾಮಿಗಳು,
ಶ್ರೀ [illegible]



ದೇವನೂರು ಮಠದ ಶ್ರೀ ಭಿಕ್ಷಾವೃತ್ತಿ
ರಾಚಪ್ಪಸ್ವಾಮಿಗಳು



ಮಿಸೆಸ್ ಪಿ. ಯಂ. ಬಸಪ್ಪನವರು ಬೆಂಗಳೂರು ಸಿಟಿ



ಲೇಡಿ ಪುಟ್ಟಣ್ಣಶೆಟ್ಟರು
ಸೌ|| ಪಾರ್ವತಮ್ಮನವರು.



ರಾಣಿ ಗೌರಮ್ಮಣ್ಣಿಯವರು
ನೆಲ್ಯಾಳಂ, ನೀಲಗಿರಿ



ಸೌ|| ಕೃಷ್ಣಾಬಾಯಿ ಪಾಟೀಲ್ ಯಂ. ಬಿ. ಬಿ ಎಸ್
ಕೊಲ್ಲಾಪುರ ಎಡಿನ್ ಬರೋ ಯೂನಿವರ್ಸಿಟಿ



ರಾಣಿ ಬೌರಮ್ಮಣ್ಣಿಯವರು
ನೆಲ್ಯಾಳಂ, ನೀಲಗಿರಿ



ಧರ್ಮಧುರಂಧರ ಅರಳಗುಪ್ಪೆ ಚಂದ್ರೇಗೌಡರು, ಕಾಫೀಪ್ಲಾಂಟರು.
ಬೆಂಗಳೂರು ಸಿಟಿ



ಗುರಪ್ಪಗೌಡ ಪಾಟೀಲ್



ಕೈ|| ಯಜಮಾನ್ ವೀರಸಂಗಪ್ಪನವರು
ಮೈಸೂರು



ಕೈ|| ಎಂ. ಬಸವಯ್ಯನವರು, ಬಿ.ಎ. ಬಿ.ಎಲ್.,
ಮೈಸೂರು.



ಕೈ. ಬಿ. ಗಂಗಯ್ಯನವರು,
ಬೆಂಗಳೂರು.



ಯಂ. ಸಿ. ತುಂಮಿನಕಟ್ಟಿ ಬಿ. ಯಸ್. ಸಿ. ಪಿ. ಹೆಚ್. ಡಿ.



ಯಂ. ಯಸ್. ಸರದಾರ್ ಬಿ. ಎ. ಬಾರಟ್ಲಾ, ಸೋಲಾಪುರ



ಆರ್. ಸಿ. ಪಾಟೀಲ್ ಬಿ. ಎಜಿ. ಮತ್ತು ಅವರ ಪತ್ನಿ
ಸೌ|| ಕೃಷ್ಣಾಬಾಯಿ ಪಾಟೀಲ್ ಯಂ. ಬಿ. ಸಿ. ಯಂ.



ಡಿ. ಸಿ. ಪಾವಟೆ ಬಿ. ಎ. (ಆಕ್ಸಫರ್ಡ) ಬೆಳಗಾವಿ

# ಗತಿಸಿದ ವೀರಶೈವ ಮಹನೀಯರು.

**ಶ್ರೀಮಂತ ಲಿಂಗಪ್ಪನವರು, ಜಾಯಪ್ಪನವರು, ಸರ್ ದೇಶಾಯಿ, ಶಿರಸಿಂಗಿ ಸಂ. ನವಲಗುಂದ.**

ವೀರಶೈವ ಮುಂದಾಳುಗಳಲ್ಲಿಯೂ, ದಾನ ಶೂರರಲ್ಲಿಯೂ ಶ್ರೀಮಂತ ಸರ್ ದೇಶಾಯಿ ಸಿರಸಿಂಗಿಯವರು ಅಗ್ರಗಣ್ಯರು. ಇವರ ಜನ್ಮವು ಮುಂಬೈ ಕರ್ನಾಟಕದ ವನಸಿಗ್ಗಲಿ ಎಂಬ ಗ್ರಾಮದಲ್ಲಿ ೧೮೬೨ನೇ ಇಸ್ವಿ ಜನವರಿ ೧೦ನೇ ತಾರೀಖಿನ ದಿನ ಅಲ್ಲಿಯ ಒಂದು ಸಭ್ಯಮನೆತನದಲ್ಲಿ ಆಯಿತು. ಆಗಿನ ಕಾಲಕ್ಕೆ ಶಿರಸಿಂಗಿಯ ದೇಶಾಯರಾಗಿದ್ದ ಶ್ರೀಮಂತ ಜಾಯಪ್ಪನವರು ಮಕ್ಕಳಿಲ್ಲದವರಾಗಿದ್ದುದರಿಂದ ಭಂದು ಮನೆತನದವರಾದ ಇವರನ್ನು ದತ್ತಸ್ವೀಕಾರಮಾಡಿ ರಾಯಪ್ಪ ಎಂಬ ಹಿಂದಿನ ಹೆಸರನ್ನು ಬದಲಾಯಿಸಿ ತಮ್ಮ ತಂದೆಯ ಹೆಸರಿನಂತೆ ಲಿಂಗಪ್ಪ ಎಂದು ಕರೆದರು. ಈ ಮಹನೀಯರ ಸಂಭಂದದಿಂದ ಶಿರಸಿಂಗಿಯವರ ಮನೆತನವು, ವೀರಶೈವರಲ್ಲಿ ಅತ್ಯಂತ ಪ್ರಸಿದ್ಧವೂ ಚಿರಸ್ಮರಣೀಯವೂ ಆಯಿತು.

ಇವರು ಅಧಿಕಾರಕ್ಕೆ ಬಂದ ಸ್ವಲ್ಪ ದಿನಗಳಲ್ಲಿಯೇ ಆ ಪ್ರಾಂತ್ಯದ ಜನರಲ್ಲಿ ಬಹಳ ಗೌರವವನ್ನು ಸಂಪಾದಿಸಿಕೊಂಡರು. ವೀರಶೈವರ ಪುರೋಭಿವೃದ್ಧಿಯಲ್ಲಿ ಇವರಿಗಿದ್ದ ಆದರವನ್ನೂ ಅದಕ್ಕಾಗಿ ಇವರುಮಾಡುತ್ತಿದ್ದ ಪ್ರಯತ್ನವನ್ನೂ ನೋಡಿ ದಾರವಾಡದಲ್ಲಿ ನಡೆದ ಮೊದಲನೆಯ ವೀರಶೈವ ಮಹಾಸಭೆಗೆ ಜನರಿಂದ ಇವರೇ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು. ಇವರು ಮಹಾಸಭೆಯ ಕಾರ್ಯಗಳನ್ನು ಅತ್ಯಂತ ಸಮರ್ಪಕವಾಗಿ ನಡೆಸಿದ್ದಲ್ಲದೆ ನೆರೆದಿದ್ದ ಎಲ್ಲಾ ಕಡೆಯ ವೀರಶೈವರ ಪ್ರೀತಿ ವಿಶ್ವಾಸಗಳಿಗೂ ಗೌರವಕ್ಕೂ ಪಾತ್ರರಾಗಿ ಮುಂದೆ ಬೆಂಗಳೂರಲ್ಲಿ ನಡೆದ ೨ನೆಯ ಮಹಾ ಸಭೆಗೆ ಸರ್ವ ಸಮ್ಮತದಿಂದ ಮತ್ತೆ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟರು.

ದೇಶಾಯರು ಮೊದಲಿಂದ ವೀರಶೈವ ಸಮಾಜದ ಉತ್ಕರ್ಷದ ಕಡೆಗೆ ಮನವಿಟ್ಟವರು. ತಮ್ಮ ಧರ್ಮ ಪತ್ನಿಯವರ ಸ್ಮರಣಾರ್ಥವಾಗಿ ಧಾರವಾಡದಲ್ಲಿ ಒಂದು ವೀರಶೈವ ಬೋರ್ಡಿಂಗನ್ನು ಸ್ಥಾಪಿಸುವ ಬಗ್ಗೆ "ಅಮ್ಮನಗಿ" ಎಂಬ ಗ್ರಾಮವನ್ನು ಲಿಂಗಾಯಿತ ಎಜ್ಯುಕೇಷನ್ ಫಂಡಿಗೆ ದಾನ ಮಾಡಿದ್ದರಾದರೂ ತಮ ಸಂಸ್ಥಾನವು ದತ್ತಕ ಮಕ್ಕಳಿಂದಲೇ ಮೊದಲಿನಿಂದಲೂ ಬಂದುದೂ ತಮಗಾದರೂ ಸಂತತಿಯಾಗದಿರುವದೂ ಅವರ ಹೃದಯದಲ್ಲಿ ತಟಯಹತ್ತಿತ್ತು. ತಮ್ಮ ಹೆಸರು ತಮ್ಮ ತರುವಾಯ ಕಡೆತನಕ ಬಾಳಲೆಂದೂ ಹಿಂದುಳಿದ ಲಿಂಗಾಯಿತರು ಸುಶಿಕ್ಷಿತರಾಗಲೆಂದೂ ಬಯಿಸಿ ತಮ್ಮ ಮರಣಕಾಲಕ್ಕೆ ಮೃತ್ಯು ಪತ್ರದಲ್ಲಿ ತಮ್ಮ ಸಂಸ್ಥಾನವನ್ನು ಲಿಂಗಾಯತ ಸಮಾಜಕ್ಕೆ ಧಾರೆ ಎರೆದುಬಿಟ್ಟರು, ಮತ್ತು ಮೃತ್ಯುಪತ್ರದಂತೆ ತಮ್ಮ ಮಾತನ್ನು ನಡೆಯಿಸುವ ಸಲುವಾಗಿ ತಮ್ಮ ಮಿತ್ರರಾದ ರಾ. ಬ. ರುದ್ರಗೌಡರುಅರಟಾಳ, ಐ.ಎಸ್.ಓ., ಇವರ ವಚನ ತಕ್ಕೊಂಡರು. ೧೯೧೬ ಅಗಸ್ಟು ೨೪ ಎಂದರೆ ಗಣೇಶ ಚೌತಿಯ ದಿನ ಸಿ. ದೇಸಾಯಿಯವರು ಬಡ ಶರೀರವನ್ನು ಬಿಟ್ಟು ಶಿವೈಕ್ಯರಾದರು. ೧೯೧೬ ಅಗಸ್ಟು ೨೮ನೇ ತಾರೀಖಿಗೆ ಬೆಳಗಾವಿಯ ಕಲೆಕ್ಟರ ಕಚೇರಿಯಲ್ಲಿ ಮೃತ್ಯು ಪತ್ರವನ್ನು ಒಡೆದರು. ಆಗಿನ ಕಲೆಕ್ಟರ ಕಡೆಗೆ ಕಬ್ಜಾ ಕೊಡಿಸುವ ಸಲುವಾಗಿ ರಾ. ಬ. ಅರಟಾಳರು ಸರಕಾರಕ್ಕೆ ವಿನಂತಿಯಅರ್ಜಿ ಮಾಡಿಕೊಂಡರು. ಕೆಲವು ಕುಹಕರು ಬಾಯಿಯವರ ಪಕ್ಷದಿಂದ ವಿರುದ್ಧದಾವೆಮಾಡಿದರು. ಪ್ರಿವ್ಹಿಕೌನ್ಸಿಲ್‌ನವರೆಗೆ ವ್ಯಾಜ್ಯ ನಡೆದು ಕಡೆಗೆ ಲಿಂಗಾಯತರಂತೆಯೇ ಆಯಿತು. ೧೯೧೮ ಅಕ್ಟೋಬರ ಕಡೆಗೆ ಸಿರಸಂಗಿ ಟ್ರಸ್ಟ್‌ಕಮಿಟಿಯೊಂದನ್ನುಮಾಡಿ ಬೆಳಗಾವಿಯ ಕಲೆಕ್ಟರನ್ನು ಅಧ್ಯಕ್ಷರನ್ನಾಗಿ ಮಾಡಿದರು. ೧೯೨೬ನೇ ಇಸವಿಯ ಅಗಸ್ಟು

ತಿಂಗಳಲ್ಲಿ ೪೪,೭೮೦—೭—೮ ರೂ. ರೋಕು ಶಿಲ್ಕು ಹಣ ವಿತ್ತು. ಗವರ್ನ್‌ಮೆಂಟ್ ನೋಟುಗಳು ೧,೮೭,೪೦೦ ರೂ. ಗಳವು ಇದ್ದವು. ಸ್ಕಾಲರ್ಶಿಪ್ಪು ಕೊಟ್ಟ ಹಣವು ೨,೨೮,-೩೨೨—೦—೯ ಆಗಿತ್ತು. ಸದ್ಯಕ್ಕೆ ಸಂಸ್ಥಾನದ ವಾರ್ಷಿಕ ಉತ್ಪನ್ನವು ೭೦,೦೦೦ಕ್ಕೆ ಮಾರಿರುವದು.

ಇಂತಹ ದಾನಶೂರರು ನಮ್ಮ ಸಮಾಜದಲ್ಲಿ ಹುಟ್ಟರು ವಂತೆಯೇ ಎಷ್ಟೋ ಜನ ಪದವೀಧರರು ಆಗಿಹೋಗಿರು ನರು, ಆಗುತ್ತಿರುವರು. ಇವರು ದತ್ತತಕೊಂಡಿದ್ದರೆ ತಮ್ಮ ಸಂಸ್ಥಾನವು ಸ್ಥಿರವಾಗಿ ಉಳಿಯುತ್ತಿತ್ತು; ತಮ್ಮದೊಂದು ವಂಶವು ನಡೆಯುತ್ತಿತ್ತು. ಆದರೆ ಲಿಂಗಾಯತ ಸಮಾಜ ವನ್ನೇ ತಮ್ಮ ದಾನದಿಂದಗೆಲ್ಲಲೆಳಸಿದರು ಲಿಂಗಾಯತ ಸಮಾಜವನ್ನೆ ದತ್ತಕ್ಕೆ ತಕ್ಕೊಂಡರು. ಇಂತಹ ವಿಭೂತಿ ಗಳಿರುವದರಿಂದಲೇ "ಉದಾರಚರಿತಾನಾಂ ತು ವಸುಧೈವ ಕುಟುಂಬಕಂ" ಎಂಬುವ ನುಡಿಯಾಗಿದೆ. ದೇವರು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ.

---

### ಕೈ॥ ರಾವಬಹದ್ದೂರ ಗುರುಸಿದ್ಧಪ್ಪನವರು, ವೀರಬಸಪ್ಪ ನವರು ಗಿಲಗಿಂಜಿ,

---

ಮರಣ ೧೮೯೧,

ಕರ್ನಾಟಕದಲ್ಲಿ ಹತ್ತೊಂಭತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ವೀರಶೈವ ಲಿಂಗಾಯತ ಸಮಾಜದಲ್ಲಿ ಪ್ರಸಿದ್ಧಿಗೆ ಬಂದ ಸಮಾಜ ಭಾಂಧವರಲ್ಲಿ ರಾವಬಹದ್ದೂರ ಗಿಲಗಿಂಜಿಯವರೊಬ್ಬರು. ಇವರ ಚರಿತ್ರೆಯನ್ನು ತಿಳಿಯದ ಕರ್ನಾಟಕಸ್ಥರೇ ವಿರಳ.

ಗುರುಸಿದ್ದಪ್ಪನವರು ಸಣ್ಣ ಕಾರ್ಖಾನಿಯ ನೌಕರಿ ಯಿಂದ ಸರಕಾರದಲ್ಲಿ ಕ್ರಮೇಣ ಡಿಸ್ಟ್ರಿಕ್ಟ್ ಡೆಪ್ಯುಟಿ ಕಲೆಕ್ಟರ ವರೆಗೆ ಏರಿದವರು. ಇವರ ವಿದ್ಯಾಭಿರುಚಿಯೂ, ಪ್ರಾಮಾಣಿಕತನವೂ, ಕರ್ತವ್ಯ ಶಕ್ತಿಯೂ ಹೊಗಳತಕ್ಕಂತವು. ರಾ. ಬ. ಅರಟಾಳ ರಂತಹ ಮಿತ್ರರ ಸಹಾಯ ದಿಂದ ಇವರು ೧೮೮೩ನೇ ಇಸ್ವಿಯ ಸೆಪ್ಟಂಬರ ೩೦ರಲ್ಲಿ ಧಾರವಾಡದಲ್ಲಿ ಲಿಂಗಾಯತ ಎಜ್ಯುಕೇಷನ್ ಫಂಡನ್ನು ಸ್ಥಾಪನೆ ಮಾಡಿದರು. ಧಾರವಾಡ ಜಿಲ್ಲೆಯಿಂದ ಇವರಿಗೆ ಬೆಳಗಾವಿಗೆ ವರ್ಗಾವಾಯಿತು. ತಮ್ಮ ಸರಕಾರಿ ಕೆಲಸ ಮಾಡುತ್ತಾ ಇವರು ಲಿಂಗಾಯತ ಫಂಡನ್ನು ಕೂಡಿಸಹತ್ತಿದರು. ಇವರು ಕೂಡಿಸಿದ ಹಣವು ಒಟ್ಟಿಗೆ ೪೫,೯೫೦-೧೧-೦ ರೂಪಾಯಿಗಳು ಆಗಿವೆಯೆಂದು ತಿಳಿಯುತ್ತದೆ. ಇವರು ಬೇಗನೆ ಎಂದರೆ ೧೮೯೧ನೇ ಇಸ್ವಿಯ ಮೇ ೨೨ರಲ್ಲಿ ಶಿವೈಕ್ಯರಾದುದ ರಿಂದ ಲಿಂಗಾಯತ ಸಮಾಜಕ್ಕೆ ಬಹಳೇ ಹಾನಿಯಾಯಿತು. ಈಶ್ವರನು ಇವರ ಆತ್ಮಕ್ಕೆ ಶಾಂತಿಯನ್ನೀಯಲಿ. ಈಗ್ಗೆ ಬೆಳಗಾವಿಯಲ್ಲಿರುವ 'ಗಿಲಗಂಜಿ ಅರ್ಟಾಳ ಹಯಸ್ಕೂಲ' ಇವರ ಸ್ಮಾರಕಕ್ಕಾಗಿಯೇ ಇಡಲ್ಪಟ್ಟು ಈ ಮಹನೀಯರಲ್ಲಿ ನಮ್ಮ ಮುಂಬೈ ಕರ್ನಾಟಕದ ವೀರಶೈವ ಬಾಂಧವರಿಗಿರುವ ಅಸಾಧಾರಣ ಗೌರವವನ್ನು ತೋರಿಸುತ್ತಿದೆ.

---

### ಕೈ. ವಾ. ಮಲ್ಲೇಶಪ್ಪ, ಫಕೀರಪ್ಪ ಮಾನ್ವಿ, ಗದಗ.

---

ಇವರು ಗದಗಿನಲ್ಲಿ ಪ್ರಸಿದ್ಧ ವರ್ತಕರೂ ವೀರಶೈವ ಮುಂದಾಳುಗಳೂ ಆಗಿದ್ದರು. ಗದಗಿನ ಹತ್ತಿಯ ಬಾಜಾರವು (Cotton Market) ಇವರ ಹೆಸರಿನಿಂದ ಕಟ್ಟಲ್ಪಟ್ಟಿ ತೆಂದ ಮೇಲೆ ಅಲ್ಲಿಯ ವರ್ತಕರಿಗೆ ಇವರಲ್ಲಿದ್ದ ಗೌರವವೆಷ್ಟೆಂಬುದು ಗೋಚರವಾಗುವುದು. ಇವರು ಬಹಳಕಾಲ ಗದಗ್ ಮುನಿಸಿಪಾಲಿಟಿಯ ವೈಸ್ ಪ್ರೆಸಿಡೆಂಟರಾಗಿದ್ದು ಪ್ರಜಾ ಸೇವೆ ಮಾಡಿದರು.

---

### ಕೈ. ವಾ. ರಾವ್‌ಸಾಹೇಬ್ ವಿರೂಪಾಕ್ಷಪ್ಪ ಮಾನ್ವಿ, ಗದಗ.

---

ಇವರೂ ಮಾನ್ವಿಮನೆತನದಲ್ಲಿ ಜನ್ಮ ತಾಳಿದ ಪ್ರಸಿದ್ಧ ವರ್ತಕರು. ಬ್ರಿಟಿಷ್ ಸರ್ಕಾರದಿಂದ 'ರಾವ್ ಸಾಹೇಬ' ಪ್ರಶಸ್ತಿಯನ್ನು ಪಡೆದಿದ್ದರು. ಬಹು ವರ್ಷಗಳ ಕಾಲ ಗದಗ್ ಮುನಿಸಿಪಾಲಿಟಿಯ ವೈಸ್ ಪ್ರೆಸಿಡೆಂಟರಾಗಿ ಕೆಲಸಮಾಡಿದರು.

---

### ಕೈ. ಚನ್ನಬಸಪ್ಪ, ದಾರವಾಡ.

ಅಧಿಕಾರಕಾಲ ೧೮೭೦-೮೦.

ಕರ್ನಾಟಕ ಭಾಷಾ ಪ್ರೇಮವುಳ್ಳ ಪ್ರತಿಯೊಬ್ಬರೂ ಈ ಮಹನೀಯರ ಹೆಸರನ್ನು ಕೇಳಿರುವರು. ಧಾರವಾಡ ಪ್ರಾಂತದಲ್ಲಿ ಡಿಪುಟ ಚನ್ನಬಸಪ್ಪನವರೆಂದು ಇವರ ಪ್ರೀತಿಯ ನಾಮವು. ಇವರು ಮೊದಲು ಪೂನಾ ಇಂಜನೀಯರಿಂಗ್ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದು ಗಣಿತ ಶಾಸ್ತ್ರನಲ್ಲಿ ಉಚ್ಚ ಶಿಕ್ಷಣವನ್ನು ಪಡೆಯುವ ಬಗ್ಗೆ ವಿದೇಶಕ್ಕೆ ಸರ್ಕಾರದವರು ಕಳುಹಿಸುವಂತೆ ದಾದಾಬಾಯಿ ನವರೋಜಿಯವರಿಂದ ಶಿಪಾರಸು ಹೊಂದಿದರು. ಆದರೆ ಸರ್ಕಾರದವರು ಈ ಯೋಚನೆಯನ್ನು ಮಧ್ಯದಲ್ಲಿಯೇ ಕೈ ಬಿಟ್ಟದ್ದರಿಂದ ಚನ್ನಬಸಪ್ಪನವರು ಧಾರವಾಡ ಟ್ರೈನಿಂಗ್ ಕಾಲೇಜಿನ ಪ್ರಿನ್ಸಿಪಾಲರಾಗಿ ಬಹಳ ದಿನಗಳನ್ನು ಕಳೆಯಬೇಕಾಗಿ ಬಂತು.

ಚನ್ನಬಸಪ್ಪನವರು ಹದಿನಾರಾಣೆ ಕನ್ನಡಿಗರು. ಆಗ ಧಾರವಾಡ ಪ್ರಾಂತದಲ್ಲಿ ಮರಾಠರ ಕಾಟದಿಂದ ಕನ್ನಡವು ಹೊಂದಿದ್ದ ದುರ್ದಶೆಯನ್ನು ನೋಡಿ ಮಾತೃಭಾಷೋಜ್ಜೀವನದ ಸಲವಾಗಿ ಕಳಕಳಿಸುತ್ತಾ ಈ ಪರಿಸ್ಥಿತಿಯನ್ನು ಸರಿಪಡಿಸುವ ಸುಸಮಯುವನ್ನು ನಿರೀಕ್ಷಿಸುತ್ತಿದ್ದರು. ಸಮಯುವೂ ಒದಗಿತು. ಆಗಿನ ವಿದ್ಯಾಶಾಖೆಯ ದಕ್ಷಿಣಭಾಗದ ಇನಸ್ಪೆಕ್ಟರಾದ ಕೈ. ವಾ. ರಸ್ಸೆಲ್ ಎಂಬ ಐರೋಪ್ಯ ಸಜ್ಜನರ ಕೈಕೆಳಗೆ ಚನ್ನಬಸಪ್ಪನವರು ಧಾರವಾಡದ ಡೆಪ್ಯುಟಿ ಇನ್ಸ್ಪೆಕ್ಟರಾಗಿ ನೇಮಿಸಲ್ಪಟ್ಟರು. ಆಗ ಧಾರವಾಡದಲ್ಲಿ ಕನ್ನಡ ಶಾಲೆಗಳೇ ಇರಲಿಲ್ಲ. ನೂರು ವರ್ಷಗಳ ಕಾಲದ ಪೇಶ್ವೆಗಳ ಆಡಳಿತದಿಂದ ದೇಶವೆಲ್ಲವೂ ಮರಾಠೀ ಮಯುವಾಗಿ ಹೋಗಿತ್ತು. ಚನ್ನಬಸಪ್ಪನವರು ಕೂಡಲೇ ಜಿಲ್ಲೆಯ ಮುಖ್ಯ ಸ್ಥಳಗಳಲ್ಲೆಲ್ಲಾ ಕನ್ನಡ ಶಾಲೆಗಳನ್ನು ಏರ್ಪಾಡುಮಾಡಿ ಶಾಲೋಪಾಧ್ಯಾಯರನ್ನು ಒದಗಿಸಲು ಬೆಳಗಾವಿಯಲ್ಲಿ ಒಂದು ಕನ್ನಡ ಟ್ರೈನಿಂಗ್ ಸ್ಕೂಲನ್ನು ತೆಗೆದರು. ಇವರು ಅಧಿಕಾರಕ್ಕೆ ಬಂದ ೮-೧೦ ವರ್ಷಗಳೊಳಗಾಗಿಯೇ ದೇಶದಲ್ಲಿ ಕರ್ನಾಟಕ ಜಾಗ್ರತಿಯು ಹುಟ್ಟಿ ಕರ್ನಾಟಕ ಸಾಹಿತ್ಯಕ್ಷೇತ್ರದಲ್ಲಿ ಧಾರವಾಡವು ಈಗ್ಗೆ ಹೊಂದಿರುವ ಉಚ್ಚಸ್ಥಾನವನ್ನು ದೊರಕಿಸಿಕೊಳ್ಳಲು ಕಾರಣವಾಯಿತು. ಆ ಪ್ರಾಂತ್ಯದಲ್ಲಿ ಮೊಟ್ಟಮೊದಲು ಆದ ಗಂಗಾಧರ ಮಡಿವಾಳೇಶ್ವರ ತೋರಮುರಿ, ಶೇಷಗಿರಿರಾವ್ ಚೂರಮುರಿ, ವೆಂಕಟರಂಗೂ ಕಟ್ಟಿ ಮೊದಲಾದ ಕವಿಗಳು ಚನ್ನಬಸಪ್ಪನವರ ಪ್ರೋತ್ಸಾಹದಿಂದಲೇ ಕನ್ನಡದಲ್ಲಿ ಗ್ರಂಥರಚನೆ ಮಾಡತೊಡಗಿದರು. ಕನ್ನಡ ನುಡಿಯು ಈ ಮಹನೀಯರಲ್ಲಿ ಚಿರ ಋಣಿಯಾಗಿರುವಳು.

---

### ಕೈ. ಗಂಗಾಧರ ಮಡಿವಾಳೇಶ್ವರ ತೋರಮುರಿ, ಧಾರವಾಡ.

---

ಮುಂಬೈ ಕರ್ನಾಟಕದ ವೀರಶೈವರಲ್ಲಿ ಆಗಿಹೋದ ಧಾರವಾಡ ಕರ್ನಾಟಕ ಗ್ರಂಥಕರ್ತರಲ್ಲಿ ಇವರು ಅತ್ಯಂತ ಪ್ರಸಿದ್ಧರು. ಇವರು ಅನೇಕ ವರ್ಷಗಳು ಧಾರವಾಡದ ಟ್ರೈನಿಂಗ್ ಕಾಲೇಜಿನಲ್ಲಿ ಉಪಾಧ್ಯಾಯರಾಗಿದ್ದರು. ಇವರ ಭಾಷಾಜ್ಞಾನವನ್ನೂ ಪ್ರತಿಭೆಯನ್ನೂ ನೋಡಿ ಮುಂಬೈ ಸರಕಾರದವರು ಇವರನ್ನು ಮುಂಬೈ ಗೌವರ್ನಮೆಂಟಿನ ಕನ್ನಡ ಭಾಷಾಂತರಕಾರರಾಗಿ ನಿಯಮಿಸಿದರು.

ಇವರ ಗ್ರಂಥಗಳಲ್ಲಿ 'ಕಾದಂಬರಿ' ಯು ಪ್ರಸಿದ್ಧವಾದುದು. ಇವರ ಶೈಲಿಯು ಪ್ರೌಢವಾಗಿದ್ದರೂ ರಸಾತ್ಮಕವಾಗಿ ಸಾಧಾರಣರಿಗೂ ಮನಗಾಣುವಂತಿರುವುದು.

ಇವರು ಬರೆದ ಗ್ರಂಥಗಳಲ್ಲಿ ಈ ಕೆಳಗಿನವು ಮುಖ್ಯವಾದವು.

(೧) "ಕರ್ನಾಟಕ ಕಾದಂಬರಿ" ಬಾಣ ಭಟ್ಟನ ಪ್ರಸಿದ್ಧ ಗ್ರಂಥದ ಭಾಷಾಂತರ.
(೨) ಕರ್ನಾಟಕ ಶಬ್ದ ಮಂಜರಿ.
(೩) ಷಡಕ್ಷರಿಯ ರಾಜಶೇಖರ ವಿಲಾಸದ ಮೇಲಿನ ಟಿಪ್ಪಣಿ.
(೪) ಕಾವ್ಯ ಸಂಗ್ರಹ.
(೫) ಕರ್ನಾಟಕ ಛಂದಸ್ಸು.

---

### ಶ್ರೀಯುತ ಶಿದ್ದಪ್ಪನವರು ವಾಗಾವಿ, ಹಾವೇರಿ.

---

ಜನನ ೧೮೭೫ (ಸುಮಾರು). ಮರಣ ೧೯೨೫ ಕಾರ್ತೀಕ ಶು|| ೩.

ಇವರ ಒಂದು ಸಾಧಾರಣ ಮನೆತನದಲ್ಲಿ ಜನಿಸಿದರಾದರೂ ತಮ್ಮ ಕುಶಲತೆಯಿಂದಲೂ ಪ್ರಾಮಾಣಿಕ ತನದಿಂದಲೂ ಕೆಲವು ವರ್ಷಗಳೊಳಗಾಗಿ ಹಾವೇರಿ ಮುಂತಾದ ಸ್ಥಳಗಳಲ್ಲಿ ಲಕ್ಷಾಂತರ ರೂಪಾಯಿ ವ್ಯಾಪಾರ ಮಾಡುತ್ತಿದ್ದ ಪ್ರಸಿದ್ಧವರ್ತಕರಾದರು. ಹಾವೇರಿಯ ಸ್ಟೇಷನ್ ಮಾರ್ಗದಲ್ಲಿಯೂ ಕಟ್ಟೆಯ ಕೂಟದಲ್ಲಿಯೂ ಮಾರ್ಗಸ್ಥರ ಅನುಕೂಲಕ್ಕಾಗಿ ಭಾವಿ ತೋಟಗಳನ್ನು ನಿರ್ಮಿಸಿರುತ್ತಾರೆ. ವರ್ತಕ ತನವೇ ಪ್ರಧಾನವಾಗುಳ್ಳ ವೀರಶೈವರಲ್ಲಿ ಇಂಥವರು ಆದರ್ಶಪ್ರಾಯರೆಂದು ಹೇಳಬಹುದು.

---

### ರಾವ್ ಸಾಹೇಬ್ ಮಲ್ಲಪ್ಪ ಬನಪ್ಪ ವಾರದ ಉರ್ಫ್ ಅಪ್ಪಾಸಾಹೇಬ್, ಸೊಲ್ಲಾಪುರ,

---

ವೀರಶೈವರಿಗೆ—ಮುಖ್ಯವಾಗಿ ಮರಾಠಾ ಪ್ರಾಂತದ ವೀರಶೈವರಿಗೆ 'ವೀರಶೈವ' ಎಂದರೇನೆಂಬುದನ್ನು ತಿಳಿಸಿದವರು ಕೈವಾರದ ಮಲ್ಲಪ್ಪನವರೆಂದರೆ ಅಂಥಾ ಅತಿಶಯೋಕ್ತಿಯೇನಲ್ಲವು. ಇವರು ಆಗರ್ಭ ಶ್ರೀಮಂತರು, ಆದರೂ ಕುಳಿತು ಉಂಡವರಲ್ಲ, ಗಂಡು ವ್ಯಾಪಾರಿಗಳು. ದೊಡ್ಡ ಸಂಸ್ಕೃತ ಪಂಡಿತ ಪದವೀಧರರಲ್ಲದಿದ್ದರೂ, ಸುಸಂಸ್ಕೃತರು. ಲೌಕಿಕರಾಗಿದ್ದರೂ ವೈದಿಕ ವೃತ್ತಿಯುಳ್ಳವರಾಗಿ ಸದಾಚಾರ ಸಂಪನ್ನರು. ಸಮಾಜದ ಹಿತವೇ ಅವರ ಪರಮ ಧ್ಯೇಯವಾಗಿದ್ದಿತು.

ವೀರಶೈವ ಜನಸಾಮಾನ್ಯವು ತಮ್ಮ ಮತಸಂಬಂಧವಾದ ಗ್ರಂಥಗಳಿವೆಯೆಂಬುದನ್ನೇ ತಿಳಿಯದ ಆ ಕಾಲದಲ್ಲಿ ಅನೇಕ ವೀರಶೈವ ಗ್ರಂಥಗಳನ್ನು ಬಾಳಬಂಧ ಲಿಪಿಯಲ್ಲಿ ಸ್ವಂತ ಖರ್ಚಿನಿಂದ ಮುದ್ರಿಸಿ ಪ್ರಕಟಿಸಿದರು. ತಮ್ಮಲ್ಲಿ ಒಂದು ಸಂಸ್ಕೃತ ಪಾಠಶಾಲೆಯನ್ನೇರ್ಪಡಿಸಿ, ಅನೇಕ ಶಾಸ್ತ್ರಿಗಳನ್ನು

ಹೊರಗೆಡಹಿ, ತನ್ಮೂಲಕ ಉಂಟಾದ ಎಲ್ಲ ವಿಧವಾದ ಧರ್ಮ ಜಾಗ್ರತಿಗೂ ಕಾರಣರಾದರು. ತಮ್ಮಲ್ಲಿ ಒಂದು ವಿದ್ಯಾವರ್ಧಕ ಫಂಡನ್ನು ಸಹ ಏರ್ಪಡಿಸಿದರು. ವಿದ್ಯಾರ್ಥಿಗಳಿಗೆ ಇವರೇ ಸ್ವತಃ ವೇತನಗಳನ್ನು ಕೊಡುತ್ತಿದ್ದರು. ಈಗಿನ ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರು ಸಹ ಪೂರ್ವಾಶ್ರಮದಲ್ಲಿ ಕಾಶೀಕ್ಷೇತ್ರದಲ್ಲಿ ಅಭ್ಯಾಸ ಮಾಡುತ್ತಿದ್ದಾಗ ಕೈ. ವಾರದ ಮಲ್ಲಪ್ಪನವರ ಸಹಾಯವನ್ನು ಪಡೆದರು ಎಂದಮೇಲೆ ಇವರಿಂದ ಸಮಾಜಕ್ಕೆ ಮಹದುಪಕಾರವಾಗಿರುವುದೆಂದು ಒತ್ತಿ ಹೇಳಬೇಕಾಗಿಲ್ಲ. ಈ ಮಹನೀಯರ ಆದ್ಯಂತ ಚರಿತ್ರವನ್ನೇ ಶ್ರೀ ಮಂಜಪ್ಪ ಹರ್ಡೇಕರ್, ಆಲನುಟ್ಟೆ—ಇವರು ಬರೆದಿರುವುದರಿಂದ ಇಲ್ಲಿ ಲಂಬಿಸ ಕೆಲಸವಿಲ್ಲ.

---

## ಶ್ರೀ ಸೌ. ವಿದ್ಯಾವತೀ ಭಾಗೀರಥೀಬಾಯಿ ಪಾಟೀಲ

---

**ಜನ್ಮ—ಶ್ರಾವಣ ಶುದ್ಧ ೧೯೭೮,**
**ಮರಣ—ಮಾಘ ಬಹುಳ ೫, ೧೯೧೪.**

ಈ ಸತೀಮಣಿಯು ಸೊಲ್ಲಾಪುರ ಜಿಲ್ಲೆಯೊಳಗಿನ ವೈರಾಗ ಪಟ್ಟಣದಲ್ಲಿ ಆಪಾರಾವ್ ಶೈವಡಕರ್ ಎಂಬ ಸದ್ಗೃಹಸ್ಥನ ಮಗಳಾಗಿ ಹುಟ್ಟಿದಳು. ಈಕೆಗೆ ಬಾಲ್ಯದಲ್ಲಿಯೇ ಕೈಲಾಸವಾಸಿ ರಾವ್‌ಬಹದ್ದೂರ್ ಅಪ್ಪಾಸಾಹೇಬವಾರದ ಯವರ ಧರ್ಮಪತ್ನಿಯೂ ಸೊಲ್ಲಾಪುರದ ಸರಸ್ವತೀಮಂದಿರದ ಅಧ್ಯಕ್ಷರೂ ಆಗಿದ್ದ ಶ್ರೀಮತಿ ಬಸವ್ವಾವಾರದ ಇವರ ಭೂದೆಯೂ ಸನ್ನಹವಾಸವೂ ಘಟಿಸಿದ್ದರಿಂದ ಅವರ ಸಂಗಡ ಮೇಲಿಂದ ಮೇಲೆ ಸರಸ್ವತೀಮಂದಿರಕ್ಕೆ ಹೋಗಿ ಅಲ್ಲಿ ನಡೆಯುವ ವ್ಯಾಖ್ಯಾನಗಳನ್ನು ಕೇಳುವ ಪ್ರಸಂಗವು ಬರುತ್ತಿತ್ತು. ಇದರಿಂದ ಇವರ ಸಹಜವಾದ ಬುದ್ಧಿಕೌಶಲ್ಯವು ಚಿಕ್ಕವಯಸ್ಸಿನಲ್ಲೇ ಪರಿಪಕ್ವಸ್ಥಿತಿಗೆ ಬಂದು ಆ ಪ್ರಾಂತ್ಯದ ಸ್ತ್ರೀಸಮಾಜದಲ್ಲಿ ಗೌರವಾರ್ಹವಾದ ಪದವಿಯನ್ನು ಹೊಂದಿದರು.

ಬಾಲ್ಯದ ವಿದ್ಯಾಭ್ಯಾಸವು ಕಳೆಯುತ್ತಲೇ ಅಂದರೆ ಭಾಗೀರಥೀಬಾಯಿಯು ಸುಮಾರು ೧೨ ವರ್ಷದವಳಿದ್ದಾಗ ಸೊಲ್ಲಾಪುರದ ಮಲ್ಲಿಕಾರ್ಜುನಪ್ಪ ಅಪ್ಪಾರಾವ್ ಪಾಟೀಲಯವರಿಗೆ ಕೊಟ್ಟು ವಿವಾಹವಾಯಿತು. ಪಾಟೀಲರು ಒಳ್ಳೆ ವಿಶಾಲಹೃದಯರೂ ಸುಶಿಕ್ಷಿತರೂ ಆಗಿದ್ದುದರಿಂದ ವಿವಾಹವಾದ ಮೇಲೆ ಹೆಂಡತಿಯ ಓದಿಗೆ ಆಡ್ಡಬರಲಿಲ್ಲ. ಭಾಗೀರಥೀಬಾಯಿಯು ಪತಿಯ ಸಹಾಯದಿಂದ ಮನೆಯಲ್ಲೇ ಅಭ್ಯಾಸಮಾಡುತ್ತಾ ವೀರಶೈವಮತ ತತ್ವಗಳನ್ನೂ ಸ್ತ್ರೀಧರ್ಮವನ್ನು ಚೆನ್ನಾಗಿ ಅರಿತುಕೊಂಡಳು. ಮೊದಲು ಮರಾಠಿಯಹೊರತು ಕನ್ನಡದ ಪರಿಚಯವಿರಲಿಲ್ಲ. ಆದರೆ ಪತಿಗೃಹಕ್ಕೆ ಬಂದೊಡನೆ ಅಲ್ಲಿ ಕನ್ನಡದ ಪ್ರಯೋಗವೇ ಹೆಚ್ಚಾಗಿದ್ದುದರಿಂದ ಒಂದೆರಡು ತಿಂಗಳಲ್ಲಿ ಓದಿ ಬರೆಯುವುದನ್ನು ಅಭ್ಯಾಸಮಾಡಿದಳು. ಈ ಮಧ್ಯೆ ಪತಿಯ ಪ್ರಕೃತಿಯು ಕೆಟ್ಟದ್ದರ ದೆಸೆಯಿಂದ ಆರೋಗ್ಯದ ಸಲವಾಗಿ ಮುಂಬೈ ಪಟ್ಟಣಕ್ಕೆ ಹೋಗಿ ವಾಸಿಸಬೇಕಾದ ಪ್ರಸಂಗ ಬಂತು. ಭಾಗೀರಥಿಬಾಯಿಯು ಪತಿಗೆ ಔಷಧೋಪಚಾರಗಳನ್ನು ಮಾಡುತ್ತಾ ಪತಿಯು ಪರಿಚಯ ಮಾಡಿಕೊಟ್ಟ ವಿದ್ವನ್ಮಣಿಗಳಾದ ಗುಜರಾತಿ ಪಾರ್ಶಿ ಮತ್ತು ಬ್ರಾಹ್ಮಣ ಸ್ತ್ರೀಯರೊಡನೆ ಸಖ್ಯತ್ವವನ್ನು ಬೆಳೆಸಿದಳು. ಮುಂಬೈ ನಗರದ ಈ ದೀರ್ಘವಾಸದಿಂದ ಭಾಗೀರಥೀಬಾಯಿಯ ಸಂಸ್ಕೃತಿಯು ಕುಂದಣಕ್ಕೆ ಮೆರಗು ಹಚ್ಚಿದಂತಾಯಿತು.

ಮುಂಬೈಯಿಂದ ಹಿಂತಿರುಗಿದ ಕೆಲ ಕಾಲಾನಂತರ ಭಾಗೀರಥಿ ಬಾಯಿಗೆ ಪುತ್ರಸಂತಾನವಾಗಿ ಮಾರನೆಯ ದಿವಸವೇ ಆ ಮಗುವೂ ಮೃತಿಹೊಂದಿತು. ಇದು ಮೊದಲು ಆಕೆಯ ಆರೋಗ್ಯವು ಕೆಟ್ಟು ಮನಸ್ಸಿನ ಪರಿಸ್ಥಿತಿಯೇ ಬದಲಾಯಿಸಿತು. ನಾಲ್ಕಾರು ತಿಂಗಳು ಕಳೆದು ಹಾಸಿಗೆಯನ್ನು ಬಿಟ್ಟೇಳುತ್ತಲೆ ಆಕೆಯು ವ್ರತನಿಯಮ ಪೂಜಾದಿಗಳಿಗೆ ಪ್ರಾರಂಭಿಸಿದಳು. ಕ್ರಮವಾಗಿ ಸಂಸಾರದಲ್ಲಿ ಜಿಗುಪ್ಸೆಯು ಹುಟ್ಟಿ ದೈವಭಕ್ತಿ ಹಾಗೂ ಸಮಾಜಸೇವೆಯಲ್ಲಿ ಮನಸಿಟ್ಟವಳಾಗಿ ಮೂರು ಹೊತ್ತು ಮತಗ್ರಂಥಗಳನ್ನು ಪಠನ ಮಾಡುವುದು, ಇಲ್ಲವೇ ಸ್ತ್ರೀಯರ ಅಭ್ಯುನ್ನತಿಗೂ ಉದ್ಧಾರಕ್ಕೂ ಪ್ರಯತ್ನಿಸುವುದು ಇವುಗಳಲ್ಲಿ ತತ್ಪರಳಾಗಿದ್ದಳು. ಪಾಟೀಲರೂ ಆಕೆಯ ಸಮಾಜ ಕಾರ್ಯಕ್ಕೆ ಸಾಕಾದಷ್ಟು ಪ್ರೋತ್ಸಾಹವನ್ನು ಕೊಡುತ್ತಿದ್ದರು.

ಭಾಗೀರಥೀಬಾಯಿಯ ಸಮಾಜ ಸೇವೆಯು ಸ್ತ್ರೀಯರ ಸಲವಾಗಿ. ಆಕೆಯು ಮೊದಲು ಸೊಲ್ಲಾಪುರದ ಸರಸ್ವತೀ ಮಂದಿರದಲ್ಲಿ ಸೆಕ್ರೆಟರಿಯವರಾಗಿ ಕೆಲಸ ಮಾಡಿದರು. ಆದರೆ ವೀರಶೈವ ಹೆಂಗೆಳೆಯರು ಅಲ್ಲಿಗೆ ಹೆಚ್ಚಾಗಿ ಪ್ರವೇಶಮಾಡುತ್ತಿರಲಿಲ್ಲ. ಇದರಿಂದ ಈಕೆಯು ಮಂದಿರಕ್ಕೆ ಸೇರಿದಂತೆ ಒಂದು ಕನ್ಯಾಶಾಲೆಯನ್ನು ಸ್ಥಾಪಿಸಿ ಅಲ್ಲಿ ಮನೆತನಸ್ಥರಾದ ವೀರಶೈವ ಗೃಹಿಣಿಯರಿಗೆ ಪಾಠ ಹೇಳುತ್ತಿದ್ದಳು. ಹಾಗೂ ಶಾಲೆಗೆ ಬರಲು ನಾಚುತ್ತಿದ್ದ ಹೆಂಗಸರ ಮನೆಗೆ ತಾನೇ ಹೋಗಿ ಪಾಠ ಹೇಳುತ್ತಿದ್ದಳು. ಕೆಲದಿನಗಳಲ್ಲೇ ಶಾಲೆಗೆ ಬರುವ ವೀರಶೈವ ಸ್ತ್ರೀಯರ ಸಂಖ್ಯೆಯು ಹೆಚ್ಚಿದ್ದರಿಂದ ಅವರ ಸಲವಾಗಿ ಅಪ್ಪಾಸಾಹೇಬವಾರದಯವರ ಪ್ರೋತ್ಸಾಹದಿಂದ ಸೊಲ್ಲಾಪುರದಲ್ಲಿ ವೀರಶೈವ ಮಹಿಳಾ ಜ್ಞಾನ ಮಂದಿರವನ್ನು ಸ್ಥಾಪಿಸಿದರು. ಇದು ಈಗ ಅಭಿವೃದ್ಧಿ ಹೊಂದಿ ಸೊಲ್ಲಾ-

ಪುರದ ವೀರಶೈವ ಮಹಿಳೆಯರಲ್ಲಿ ಜ್ಞಾನದ ಬೆಳಕನ್ನು ಬೀರುತ್ತಲಿದೆ.

ಭಾಗೀರಥೀಬಾಯಿಯು ಒಳ್ಳೆಯ ವಾಕ್ಪಟುವೂ ಸ್ತ್ರೀ ಸಂಬಂಧವಾದ ವಿಷಯಗಳ ಮೇಲೆ ಪ್ರೌಢಿಯಿಂದ ಮಾತಾಡಬಲ್ಲವಳೂ ಆಗಿದ್ದಳು. ಸಾಧಾರಣವಾಗಿ ಯಾವ ಊರಿಗೆ ಹೋದರೂ ಅಲ್ಲಿಯ ಮಹಿಳೆಯರನ್ನು ಸೇರಿಸಿ ಉಪನ್ಯಾಸ ಮಾಡುವಳು. ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘಾ ರಾಜೇಂದ್ರ ಮಹಾಸ್ವಾಮಿಗಳು ಪೂನೆಗೆ ಹೋಗಿದ್ದಾಗ ಅವರ ಸಮ್ಮುಖದಲ್ಲಿ ವಿದ್ವತ್ಸಭೆಯು ಸೇರಿ ಅಲ್ಲಿ ಈಕೆಯು ಸ್ತ್ರೀಧರ್ಮ ಎಂಬ ವಿಷಯದ ಮೇಲೆ



ಕೈ. ಬಾಗೀರಥೀಬಾಯಿ

ಉಪನ್ಯಾಸ ಮಾಡಿದಳು ; ಜಗದ್ಗುರುಗಳು ಕೇಳಿ ಪ್ರೀತರಾಗಿ 'ವಿದ್ಯಾವತಿ' ಎಂಬ ಪ್ರಶಸ್ತಿಯನ್ನು ಕೊಟ್ಟರು. ಅಲ್ಲದೆ ಬೆಳಗಾವಿಯಲ್ಲಿ ನಡೆದ ವೀರಶೈವ ಎರಡನೇ ಮಹಿಳಾ ಪರಿಷತ್ತಿನ ಅಧ್ಯಕ್ಷಳಾಗಿದ್ದಳು. ಆಗ ಈಕೆಯು ಮಾಡಿದ ಭಾಷಣವು ಎಲ್ಲರನ್ನೂ ಬೆರಗು ಮಾಡಿತು. ಈಕೆಯು ಮರಾಠಿ ಭಾಷೆಯನ್ನು ಚನ್ನಾಗಿ ಅರಿತಿದ್ದು ಕವಿತೆಗಳನ್ನೂ ಮಾಡಬಲ್ಲವರಾಗಿದ್ದರು. ವೇ|| ಶಿ. ರಾ. ರಾ. ಜಗದೀಶಶಾಸ್ತ್ರಿ ನಾಲವಾರಯವರು ಬರೆದಿರುವ ಈಕೆಯ ಚರಿತ್ರೆಯಲ್ಲಿ ಈಕೆಯು ಕೆಲಸಂದರ್ಭಗಳಲ್ಲಿ ರಚಿಸಿದ ಮರಾಠಿ ಕವಿತೆಗಳೂ ಕೊಡಲ್ಪಟ್ಟಿವೆ.

ಬಾಯಿಯವರು ತೀರಿಕೊಂಡಾಗ ಅವರಿಗೆ ೩೬ ವರುಷಗಳು ಮಾತ್ರ ಆಗಿದ್ದವು. ಆದರೂ ಅವರು ತಮ್ಮ ಅಲ್ಪಾಯುವನ್ನು ಸಮಾಜ ಸೇವೆಯಲ್ಲಿಯೂ, ಪತಿಭಕ್ತಿ ದೈವಭಕ್ತಿಯಲ್ಲಿಯೂ ಕಳೆದು ವೀರಶೈವ ಮಹಿಳೆಯರಿಗೆ ಆದರ್ಶಪ್ರಾಯರಾಗಿರುವರು.

---

## ಶ್ರೀಮತಿ ವೀರಮ್ಮನವರು, ಮೈಸೂರು.

ಜನ್ಮ. ೧೮೭೩. ಮರಣ ಸುಮಾರು ೧೯೨೦.

ಈಕೆಯು ಗುಬ್ಬಿ ತಾ|| ಕಣಾಲಗ್ರಾಮದಲ್ಲಿ ಪ್ರಸಿದ್ಧರಾದ ಶ್ರೀಯುತ ನಂಜುಂಡಪ್ಪನವರ ಐದನೆಯ ಪುತ್ರಿಯು. ಮೈಸೂರಿನ ಶ್ರೀ ಭದ್ರಪ್ಪ ಎಂಬುವವರಿಗೆ ಈಕೆಯನ್ನು



ಕೊಟ್ಟು ವಿವಾಹವಾಗಿತ್ತು. ಪತಿವಿಯೋಗ ಹೊಂದಿದುದರಿಂದಲೂ, ಸಂತಾನವಿಲ್ಲದ್ದರ ದೆಸೆಯಿಂದಲೂ ಈಕೆಯು ಸಾಯುವ ಮೊದಲು ತನ್ನ ಆಸ್ತಿಯೆಲ್ಲವನ್ನು ದಾನಧರ್ಮಗಳಲ್ಲಿ ವಿನಿಯೋಗಿಸಬೇಕೆಂದು ಸಂಕಲ್ಪ ಮಾಡಿಕೊಂಡು, ತನ್ನ ಆಸ್ತಿಯ ಉತ್ಪನ್ನದಲ್ಲಿ ಸುಮಾರು ೨೫೦ ರೂಪಾಯಿಗಳಷ್ಟನ್ನು ಮೈಸೂರು ಕೋಟೆ ತ್ರಿಣಯನ ದೇವಸ್ಥಾನಕ್ಕೂ ಮತ್ತು ವೀರನಗರೆ ಬಸವೇಶ್ವರ ದೇವಸ್ಥಾನಕ್ಕೂ ಕೊಡತಕ್ಕದ್ದೆಂದೂ, ಉಳಿದ ಹಣದಲ್ಲಿ ವೀರಶೈವರಿಗಾಗಿ ಒಂದು ಅನಾಥಾಲಯವನ್ನು ಸ್ಥಾಪಿಸಬೇಕೆಂದೂ ದಾನಶಾಸನವನ್ನು ಬರೆದಳು.

ಈಕೆಯ ಉದಾರ ದಾನದ ಫಲವಾಗಿ ಮೈಸೂರಿನಲ್ಲಿ ವೀರಶೈವ ಅನಾಥಾಲಯವು ೧೯೨೨ ರಲ್ಲಿ ಸ್ಥಾಪಿಸಲ್ಪಟ್ಟು ಸುಮಾರು ೩೫ ಜನ ವಿದ್ಯಾರ್ಥಿಗಳು ಪೋಷಿಸಲ್ಪಡುತ್ತಿರುವರು.

## ಶ್ರೀಮಂತ ಕೈ॥ ಮಹಾಂತಪ್ಪ ಪರಪ್ಪಾ ಶೆಟ್ರ ಬಾಗಲಕೋಟೆ

ಜನನ. ೧೮೫೫ ಮರಣ. ೧೯೨೦



ಇವರು ಬಡ ಮನೆತನದಲ್ಲಿ ಜನಿಸಿದರೂ ತಮ್ಮ ಬುದ್ಧಿ ಬಲದಿಂದ ವ್ಯಾಪಾರ ಮಾಡಿ ಲಕ್ಷಾಂತರ ರೂಪಾಯಿಗಳನ್ನು ಗಳಿಸಿದರು. ೮ ಸಹಸ್ರ ರೂಪಾಯಿಗಳನ್ನು ವೆಚ್ಚ ಮಾಡಿ ಬಾಗಲಕೋಟೆಯಲ್ಲಿ ಶ್ರೀ ಅಡವೀಶಿವಯೋಗಿಗಳ ಮಠವನ್ನು ಕಟ್ಟಿಸಿದರು. ಸದ್ಯಕ್ಕೆ ಈ ಮಠದಲ್ಲಿ ರಾ. ಬ. ವಾರದ ಫ್ರೀ ಬೋರ್ಡಿಂಗ್ ಸಂಸ್ಥೆಯು ನಡೆಯುತ್ತಿರುವುದು. ಈ ಮಹನೀಯರು ಮೃತರಾಗುವ ಮೊದಲು ವೀರಶೈವ ವಿದ್ಯಾರ್ಥಿಗಳ ಉಪಯೋಗಾರ್ಥವಾಗಿ ೨೦ ಸಹಸ್ರ ರೂಪಾಯಿಗಳ ನಿಧಿಯನ್ನು ಬಿಟ್ಟು ಹೋಗಿರುವರು. ಇದರ ಉತ್ಪನ್ನದಲ್ಲಿ ವರ್ಷ ಒಂದಕ್ಕೆ ರೂ. ೩೦೦ ಗಳನ್ನು ವಾರದ ಫ್ರೀ ಬೋರ್ಡಿಂಗಿಗೆ ಕೊಟ್ಟು ಉಳಿದ ಹಣವನ್ನು ವಿದ್ಯಾರ್ಥಿಗಳಿಗೆ ವೇತನ ರೂಪವಾಗಿ ಹಂಚುತ್ತಿದ್ದಾರೆ.

---

## ಕೈ॥ ಕಬ್ಬಳ್ಳಿ ಚನ್ನಬಸಪ್ಪನವರು.



ಇವರು ಮೈಸೂರು ಡಿಸ್ಟ್ರಿಕ್ಟ ಗುಂಡ್ಲುಪೇಟೆ ತಾಲ್ಲೂಕಿನ ವಾಸಸ್ಥರು. ದೊಡ್ಡ ಸಾಹುಕಾರರು. ಭೂಸ್ಥಿತಿಯುಳ್ಳವರು. ಮೈಸೂರಿನಲ್ಲಿ ವಿಶ್ವವಿದ್ಯಾಲಯದಲ್ಲಿ ಅಭ್ಯಾಸ ಮಾಡುವ ವೀರಶೈವ ವಿದ್ಯಾರ್ಥಿಗಳ ಸೌಲಭ್ಯಕ್ಕಾಗಿ ಮೈಸೂರು ಸ್ಟೇಷನ್ನಿನ ಬಳಿಯಲ್ಲಿ ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. ನಿಲಯವಿರುವ ಭವ್ಯವಾದ ಬಂಗಲೆಯನ್ನು ೪೦ ಸಹಸ್ರ ರೂಪಾಯಿಗಳಿಗೆ ಕೊಂಡುಕೊಂಡು ಸುಮಾರು ೭ ಸಹಸ್ರ ರೂಪಾಯಿಗಳ ಕರ್ಚಿನಿಂದ ರಿಪೇರಿಯನ್ನು ಮಾಡಿಸಿಕೊಟ್ಟರು. ಸದ್ಯ ನಿಲಯದಲ್ಲಿ ೬೦ ಜನ ವಿದ್ಯಾರ್ಥಿಗಳಿರುವರು.

ಇಂತ ಉದಾರ ಹೃದಯರೂ ಸಮಾಜ ಸೇವಕರೂ ಆದ ಮಹನೀಯರು ಮೊನ್ನೆತಾನೆ ಅಕಾಲ ಮರಣಕ್ಕೆ ಗುರಿಯಾದರು. ಇವರು ಪ್ರಯಾಣ ಮಾಡುತ್ತಿದ್ದ ಮೋಟಾರು ಗಾಡಿಯು ಮೊಗಚಿಬಿದ್ದು ಈ ಮಹನೀಯರ ಪ್ರಾಣಘಾತವಾಯಿತು. ಇವರು ಇನ್ನೂ ಕೆಲವು ದಿನಗಳು ಜೀವಿಸಿದ್ದಲ್ಲಿ ವೀರಶೈವ ಸಮಾಜವು ಬಹು ವಿಧವಾಗಿ ಉಪಕೃತವಾಗುತ್ತಿತ್ತೆಂದು ಹೇಳಬಹುದು.

---

**ಶ್ರೀಯುತ ಕೈ. ಮಾಳಿ, ಧಾರವಾಡ.**



ಚಿತ್ರ ಶಿಲ್ಪದಲ್ಲಿ ಚತುರರಾಗಿದ್ದರು. ಕನ್ನಡದಲ್ಲಿ ಲೇಖನಗಳನ್ನು ಕವಿತೆಗಳನ್ನು ಬರೆಯುತ್ತಿದ್ದರು. ಚಿಕ್ಕ ವಯಸ್ಸಿನಲ್ಲೇ ಅಕಾಲಮೃತ್ಯುವಿಗೆ ತುತ್ತಾದರು.

---

**ಕೀರ್ತಿಶೇಷರಾದ ರಾವ್ ಬಹದ್ದೂರ್ ಎಲೆ ಮಲ್ಲಪ್ಪ ಶೆಟ್ಟರು, ಬೆಂಗಳೂರು.**



ಬಳ್ಳಾರಿಯ ಸಕ್ಕರೆ ಕರಡಪ್ಪನವರಂತೆ ಬೆಂಗಳೂರಲ್ಲಿ ಇವರು ಅತ್ಯಂತ ಪ್ರಸಿದ್ಧರಾದವರು. ಇವರ ತಂದೆಯವರ ಹೆಸರು ಮರಿಸಿದ್ಧಪ್ಪಶೆಟ್ಟರು. ಇವರು ಬೆಂಗಳೂರಲ್ಲಿ ದೊಡ್ಡ ವ್ಯಾಪಾರಸ್ಥರಾಗಿಯೂ ಕಂಟ್ರಾಕ್ಟರಾಗಿಯೂ ಇದ್ದರು.

ಧಾತು ಈಶ್ವರ ಸಂವತ್ಸರದಲ್ಲಿ ಪ್ರಾಪ್ತವಾದ ವೀರಕ್ಷಾಮದಲ್ಲಿ ಇವರು ಜಾತಿಮತಭೇದವನ್ನಿಡದೆ ಎಲ್ಲ ಸಂಗಡಗರಿಗೂ ಮೂರು ವರ್ಷಕಾಲ ಅನ್ನದಾನ ಮಾಡಿ ಹಿಂದೂ ಮತವನ್ನು, ಮುಖ್ಯವಾಗಿ ವೀರಶೈವರನ್ನು ಉದ್ಧಾರ ಮಾಡಿದರು. ಇವರಿಂದ ಸಹಾಯ ಹೊಂದಿದವರನೇಕರು ಈಗಲೂ ಜೀವಿಸಿರುವರು.

ಬೆಂಗಳೂರು ಮಲ್ಲೇಶ್ವರದಲ್ಲಿ ಸುಪ್ರಸಿದ್ಧವಾದ ಕಾಡು ಮಲ್ಲೇಶ್ವರ ದೇವಸ್ಥಾನವನ್ನು ೫೦ ಸಹಸ್ರ ರೂಪಾಯಿ ವೆಚ್ಚದಿಂದ ಇವರು ಕಟ್ಟಿಸಿದರು. ಮತ್ತು ಬೆಂಗಳೂರಿನ ಹೊಸಕೋಟೆ ತಾ॥ ನಲ್ಲಿ ಒಂದು ಭಾರಿ ಕೆರೆಯನ್ನು ೧೫ ಸಹಸ್ರ ರೂಪಾಯಿ ಮುಟ್ಟಿಸಿ ಕಟ್ಟಿಸಿದರು. ಕಳೆದ ವರ್ಷ ಬೆಂಗಳೂರಲ್ಲಿ ನೀರಿಗೆ ಬರ ಬಂದಾಗ ಬೆಂಗಳೂರಿಗೂದಂಡಿಗೊ ನೀರನ್ನು ಒದಗಿಸಿದ್ದು ಈ ಕೆರೆಯೇ.

ಇದಲ್ಲದೆ ಇವರು ಬೆಂಗಳೂರಿನ ಸ್ತ್ರೀಯರ ಮತ್ತು ಮಕ್ಕಳ ಆಸ್ಪತ್ರೆಯನ್ನು ಕಟ್ಟಿಸಲು ಅರ್ಧ ಹಣವನ್ನು ಕೊಟ್ಟಿರುವರು ಮತ್ತು ಬೌರಿಂಗ್‌ಪೇಟೆಯಲ್ಲಿ ೩೦ ಸಹಸ್ರ ರೂಪಾಯಿಗಳನ್ನು ಮುಟ್ಟಿಸಿ ಒಂದು ಸತ್ರವನ್ನು ಕಟ್ಟಿಸಿರುವರು.

ಈ ಮಹನೀಯರು ಕೈಲಾಸವಾಸಿಗಳಾದಾಗ ಅವರಿಗೆ ಸುಮಾರು ೭೦ ವರ್ಷ ವಯಸ್ಸು.

---

**ರಾವಸಾಹೇಬ ಗುರುಮಲ್ಲಪ್ಪ ರುದ್ರಪ್ಪ ಕೋಟೀವಾಲೆ, ನಿಪ್ಪಾಣಿ.**



ನಿಪ್ಪಾಣಿಯಲ್ಲಿ ಪ್ರಸಿದ್ಧ ವ್ಯಾಪಾರಿಗಳು. ಅಲ್ಲಿನ ಮುನ್ಸಿಪಾಲಿಟಿಯಲ್ಲಿ ವೈಸ್ ಪ್ರೆಸಿಡೆಂಟರಾಗಿದ್ದು ಸುಧಾರಿಸಿದರು.

**ಸಕ್ಕರೆ ಕರಡಪ್ಪನವರು, "ಧರ್ಮಾವತಾರ" ಬಳ್ಳಾರಿ.**

ಮರಣ—ಕ್ರಿ. ೧೮೭೪ ಕಾರ್ತಿಕ.

ಬಳ್ಳಾರಿ ಪ್ರಾಂತ್ಯದಲ್ಲಿ ಆಗಿಹೋದ ವೀರಶೈವ ಸತ್ಪುರುಷರಲ್ಲಿ ಇವರು ಸುಪ್ರಸಿದ್ಧರಾಗಿರುವರು. ಇವರು ಬಳ್ಳಾರಿಯ ಸಕ್ಕರೆ ಸಂಗನ ಬಸಪ್ಪ ಎಂಬ ಸದ್ಗೃಹಸ್ತರ ಪುತ್ರರು. ಇವರಿಗೆ ಬಾಲ್ಯದಲ್ಲಿ ಬಸವಪ್ಪನೆಂಬ ಹೆಸರಿಡಲ್ಪಟ್ಟಿತ್ತಾದರೂ ತಂದೆತಾಯಿಗಳೊಡನೆ ಆಗ ಬಳ್ಳಾರಿಯಲ್ಲಿದ್ದ ಪ್ರಸಿದ್ಧ ಶಿವಯೋಗಿಗಳಾದ ಮರಿ ಸ್ವಾಮಿಗಳೆಂಬುವರನ್ನು ನೋಡಲು ಹೋದಾಗ ಅವರು ಇವನನ್ನು ನೋಡಿ 'ಮುಂದೆ ಇವನು ತನ್ನ ಮತವನ್ನೂ, ಗುರುಲಿಂಗಜಂಗಮವನ್ನೂ ಕರಡಿಯಂತೆ ತಬ್ಬಿಕೊಳ್ಳುವನೆಂದು 'ಕರಡೀ ಕರಡೀ' ಎಂದು ಕರೆಯಲುಪಕ್ರಮಿಸಿದ್ದರಿಂದ ತಪಸ್ವಿಗಳು ಕರೆದ ಆ ಹೆಸರೇ ಇವರಿಗೆ ಸ್ಥಿರವೂ ಸಾರ್ಥಕವೂ ಆಯಿತು.

ಕರಡಪ್ಪನವರ ೨೨ ವರ್ಷ ಸುಮಾರಿನಲ್ಲಿ ತಂದೆತಾಯಿಗಳು ತೀರಿಕೊಂಡರು. ೨೪ನೇ ವಯಸ್ಸಿನಲ್ಲಿ ಲಗ್ನವಾಯಿತು. ಸಕ್ಕರೆ ಕರಡಪ್ಪನವರು ತಂದೆಯು ಮಾಡುತ್ತಿದ್ದ ವ್ಯಾಪಾರವನ್ನೇ ಅಭಿವೃದ್ಧಿಪಡಿಸಿಕೊಂಡು ತಮ್ಮ ನೈಪುಣ್ಯದಿಂದ ಕೆಲವು ವರ್ಷಗಳಲ್ಲಿಯೇ ಲಕ್ಷಾಧಿಕಾರಿಯಾಗಿ ಪ್ರತಿನಿತ್ಯವೂ ಬಂದ ಅನಾಥರನ್ನೂ ಜಂಗಮರನ್ನೂ ಅನ್ನಪಾನಾದಿಗಳಿಂದ ತೃಪ್ತಿಪಡಿಸುವ ನಿಯಮವನ್ನಿಟ್ಟುಕೊಂಡರು. ಈ ವಾರ್ತೆಯು ದೇಶ ಮಧ್ಯದಲ್ಲಿ ಪ್ರಸಾರವಾಗಿ ಪ್ರತಿನಿತ್ಯ ಮೂರು ಸಾವಿರ ಜಂಗಮರೂ ಅನಾಥರೂ ಬಳ್ಳಾರಿಗೆ ಬಂದು ಊಟಮಾಡಿ ಹೋಗುತ್ತಿದ್ದರಂತೆ. ಈ ಅನ್ನದಾನವಲ್ಲದೆ ಸಕ್ಕರೆ ಕರಡಪ್ಪನವರು ಅನಾಥರಲ್ಲಿಯೂ ದರಿದ್ರರಲ್ಲಿಯೂ ಅತ್ಯಂತ ಕರುಣೆಯನ್ನು ತೋರಿಸುತ್ತಾ ಅವರ ವಿವಾಹೋಪನಯನಗಳಲ್ಲಿ ಧನ ಸಹಾಯ ಮಾಡುತ್ತಲೂ ಭೂಮ್ಯಾದಿಗಳನ್ನು ಕ್ರಯಕ್ಕೆ ತೆಗೆದುಕೊಡುತ್ತಲೂ ಇದ್ದರು. ಇದರಿಂದ ಜಂಗಮರಲ್ಲಿ ಈತನು ಬಸವೇಶ್ವರನ ಅವತಾರವೆಂಬ ಪ್ರತೀತಿಯುಂಟಾಯಿತು. ಸಮಾಜಸೇವೆಗೆ ಅನ್ನದಾನಕ್ಕಿಂತ ವಿದ್ಯಾದಾನವು ಹೆಚ್ಚು ಅವಶ್ಯಕವೆಂಬುದನ್ನು ಇವರು ತಿಳಿಯದಿರಲಿಲ್ಲ. ವೀರಶೈವರಲ್ಲಿ ಸಂಸ್ಕೃತಾಭ್ಯಾಸವು ಹರಡುವಂತಾಗಬೇಕೆಂಬುದ್ದೇಶದಿಂದ ಚಾಕಿ ಯೆಂಬ ಹೆಸರಿನಿಂದ ಒಂದು ವಿದ್ಯಾಲಯವನ್ನು ಕಟ್ಟಿಸಿ ವೇ|| ಶಂಕರಶಾಸ್ತ್ರಿಗಳೇ ಮುಂತಾದ ಪಂಡಿತರಿಂದ ವೀರಶೈವ ವಟುಗಳಿಗೆ ತರ್ಕ ವ್ಯಾಕರಣಾಲಂಕಾರಾದಿ ಶಾಸ್ತ್ರಗಳನ್ನು ಪಾಠಹೇಳಿಸಲು ಮೊದಲುಮಾಡಿದರು ಕೈ|| ರಟ್ಟಿಗಲ್ಲು ಮುರಿಗೆಪ್ಪನವರು, ಕೋರಟಗಿ ಬಸವಲಿಂಗದೇವರು, ಮುದಗಲ್ಲು ಅಮರಪ್ಪ ಶಾಸ್ತ್ರಿಗಳು, ಮತ್ತು ಪ್ರಕೃತ ಜೀವಿಸಿರುವ ವೇ|| ಕಂದಗಲ್ಲ ಪರ್ವತ ಶಾಸ್ತ್ರಿಗಳು, ಹರಪನಹಳ್ಳಿ ಬಸವಲಿಂಗ ಶಾಸ್ತ್ರಿಗಳು, ಕೊಟ್ಟೂರು ರೇವಣ ಶಾಸ್ತ್ರಿಗಳು ಮುಂತಾದವರು ಈ ಶಾಲೆಯಲ್ಲಿ ಅಭ್ಯಾಸ ಮಾಡಿದವರು. ಕ್ರಿ. ಶ. ೧೮೬೭ನೆಯ ಕ್ಷಯ ಸಂವತ್ಸರದ ವೀರಕ್ಷಾಮದಲ್ಲಿ ಸಕ್ಕರೆ ಕರಡಪ್ಪನವರ ದಾತೃತ್ವವೂ ದಯಾರ್ದ್ರ ಹೃದಯವೂ ಚನ್ನಾಗಿ ಪ್ರಕಾಶಗೊಂಡಿತು. ಆ ದುಷ್ಕಾಲದಲ್ಲಿವರು ತಮ್ಮ ಶ್ರೇಯೋಭಿವೃದ್ಧಿಗಳ ಮೇಲೆ ಲಕ್ಷ್ಯವನ್ನಿಡದೆ ಆರು ತಿಂಗಳ ಕಾಲ ಒಂದೇ ಸವನೆ ಪ್ರತಿದಿನ ಸುಮಾರು ಹತ್ತುಸಾವಿರ ಜನರಿಗೆ ಜಾತಿಬೇಧವಿಲ್ಲದೆ ಅನ್ನದಾನ ಮಾಡುತ್ತಿದ್ದರು. ಈ ಮಹಾನುಭಾವರ ಪ್ರೋತ್ಸಾಹದಿಂದ ಬಳ್ಳಾರಿಯ ವರ್ತಕರು ಕ್ಷಾಮ ಮುಗಿಯವವರೆಗೂ ದಿನಕ್ಕೆ ಅಂಗಡಿಯೊಂದಕ್ಕೆ ೨೦ ಶೇರು ಜೋಳವನ್ನು ಕೊಡುತ್ತಿದ್ದರು. ಈ ರೀತಿಯಾಗಿ ಪ್ರತಿನಿತ್ಯ ಬಳ್ಳಾರಿಯೊಂದರಲ್ಲಿ ೨೦೦೦ ಸೇರು ಜೋಳವು ಸಂಗ್ರಹವಾಗುತ್ತಿತ್ತು. ಸಕ್ಕರೆ ಕರಡಪ್ಪನವರು ಉಳಿದ ಜೋಳವನ್ನೂ ಇತರ ಸಾಮುಗ್ರಿಗಳನ್ನೂ ತಮ್ಮ ಕೈಯಿಂದ ಹಾಕಿ ತಾವೇ ನಿಂತು ಅಡಿಗೆಯನ್ನು ಮಾಡಿಸಿ, ದೀನಾನಾಥರ ಊಟವು ಮುಗಿದಮೇಲೆ ತಾವು ಹೋಗಿ ಭೋಜನ ಮಾಡುತ್ತಿದ್ದರು. ಬ್ರಿಟಿಷ್ ಸರಕಾರದವರು ಇವರ ದಾನಶೀಲತೆಯನ್ನೂ ಇವರು ಕ್ಷಾಮದಲ್ಲಿ ಮಾಡಿದ ಪ್ರಜಾಸೇವೆಯನ್ನೂ ಮನಗಂಡವರಾಗಿ ಅನೇಕ ಪ್ರಶಂಸಾ ಪತ್ರಿಕೆಗಳನ್ನು ಕಳುಹಿಸಿದರು.

ಈ ಮಹನೀಯರ ಅವಸಾನವು ಶಾ|| ೧೭೯೭ ರಲ್ಲಿ ಆಯಿತು. ಕೊನೆಯ ವರಿವಿಗೂ ಇವರು ತಮ್ಮ ಅನ್ನದಾನ ವ್ರತವನ್ನು ತಪ್ಪದೆ ನಡೆಸುತ್ತಿದ್ದರು. ಇವರ ಚರಿತ್ರೆಯನ್ನು ರಾಯಚೂರು ವೇ|| ವಿರೂಪಾಕ್ಷ ಶಾಸ್ತ್ರಿಗಳು ಪದ್ಯರೂಪದಿಂದ ಬರೆದಿರುವರು.

---

**ಕೈ|| ಶ್ರೀಮತಿ ಹೀರದ ಸೂಗಮ್ಮನವರು, ಬಳ್ಳಾರಿ.**

ಈಕೆಯು ಬಳ್ಳಾರಿಯ ಶ್ರೀ ಗಡಗಿ ಷಡಾಕ್ಷರಪ್ಪನವರ ಪುತ್ರಿಯೂ ಶ್ರೀಯುತ ಹೀರದ ಸಿದ್ದಲಿಂಗಪ್ಪನವರ ಪತ್ನಿಯೂ ಆಗಿದ್ದರು. ವೀರಶೈವ ಸಂಸ್ಕೃತ ಜ್ಯೋತಿಷ ವೈದಿಕ ಪಾಠಶಾಲೆಗೋಸ್ಕರ ಬಳ್ಳಾರಿಯಲ್ಲಿ ೨೦ ಸಹಸ್ರ ರೂಪಾಯಿ ಬಾಳುವ ಒಂದು ಮನೆಯನ್ನು ಕಟ್ಟಿಸಿರುವರಲ್ಲದೆ, ಶಾಲೆಯ ಸುಸ್ಥಿತಿಗಾಗಿ ಬೇರೆ ಕೆಲವು [illegible]ಸ್ತಿಗಳನ್ನೂ ಬಿಟ್ಟಿರುವರು! ಮದ್ರಾಸು ವೀರಶೈ[illegible] [illegible]ದ್ಯಾಪ[illegible]ಕ ಸಂಘದಿಂದ ಬಳ್ಳಾರಿಯಲ್ಲಿ ಸ್ಥಾಪಿಸಲ್ಪ[illegible] [illegible] ತರಗತಿಯ ಬಾಲಕರ ಶಾಲೆಯು ಈ ಕಟ್ಟ[illegible]ಲ್ಲೇ [illegible]ಪ್ಪಡುತ್ತದೆ.

---

### ಕೈ|| ದೇಶದ ಯಜಮಾನ್ ಬಸಪ್ಪನವರು.

ಇವರು ಇದೇ ವರ್ಷದಲ್ಲಿ ಕೈಲಾಸವಾಸಿಗಳಾದರು. ಈ ಪ್ರಾಂತದ ಪೂರ್ವದ ತರಹೆಯ ದೊಡ್ಡ ಮನುಷ್ಯರಲ್ಲಿ ಇವರೇ ಕೊನೆಯವರೆಂದು ಹೇಳಬಹುದು. ಆಚಾರಶೀಲರು, ಧೈರ್ಯವಂತರು; ಬುದ್ಧಿಶಾಲಿಗಳು, ಮಾತುಬಾರಿಗಳು. ಪೇಟೆ



ಮನೆಯ ಬಿಕ್ಕಟ್ಟನ್ನು ಕಾಪಾಡುವುದರಲ್ಲಿ ಇವರಿಗೆ ಬಹಳ ಆಸಕ್ತಿ. ಬೆಂಗಳೂರು ಸಿಟಿಯ ಎಲ್ಲ ವೀರಶೈವ ಸಂಸ್ಥೆಗಳಲ್ಲಿಯೂ ಕಮಿಟಿ ಮೆಂಬರಾಗಿ ಕೆಲಸ ಮಾಡಿದರು. ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘವು ಹುಟ್ಟಿದಂದಿನಿಂದಲೂ ತಾವು ಕೈಲಾಸವಾಸಿಗಳಾಗುವವರೆಗೂ ಇವರು ಅದರ ಕಮಿಟಿ ಮೆಂಬರಾಗಿ ಕೆಲಸ ಮಾಡಿದರು. ಇದಲ್ಲದೆ ಸರ್ಕಾರಿ ಡಿಸ್ಟ್ರಿಕ್ಟ್ ಬೋರ್ಡು, ಪ್ರಜಾಪ್ರತಿನಿಧಿ ಸಭೆ— ಈ ಸಭೆಗಳಲ್ಲೆಲ್ಲ ಕೆಲವು ಕಾಲ ಮೆಂಬರಾಗಿದ್ದರು. ರಾವ್ ಬಹದ್ದೂರ್ ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪನವರು ಮತ್ತು ಕೈ|| ಅತ್ತಿಬೆಲೆ ಶಿಡಲಬಸಪ್ಪನವರು ಇವರುಗಳು ಧರ್ಮಕಾರ್ಯಗಳನ್ನು ಮಾಡಲು, ಹೆಚ್ಚಿಗೆ ಪ್ರೋತ್ಸಾಹಮಾಡಿದವರಲ್ಲಿ ಇವರೊಬ್ಬರು. ಕೈ|| ತೋಟದಪ್ಪನವರ ಎಸ್ಟೇಟಿಗೆ ಎಕ್ಸಿಕ್ಯೂಟರಾಗಿದ್ದು, ಆ ಕೆಲಸವನ್ನು ಸಮರ್ಪಕವಾಗಿ ನಡೆಸಿದ ಬಗ್ಗೆ, ಮತ್ತು ಮಹಾ ಯುದ್ಧಕಾಲದಲ್ಲಿ ಇವರು ಸರ್ಕಾರಕ್ಕೆ ಹಣವನ್ನು ಒದಗಿಸಿಕೊಟ್ಟ ವಿಷಯದಲ್ಲಿಯೂ ಸರ್ಕಾರದಿಂದ ಇವರಿಗೆ ಬಹುಮಾನ ಪತ್ರಗಳು ಬಂದಿರುವುವು.

———

### ಕೈ|| ಅಪ್ಪಾಜಿ ಗೌಡರು, ತ್ಯಾಮಗೊಂಡ್ಲು.

ಜಮೀನ್‌ದಾರರೂ ಮತ್ತು ಪಟೇಲರು. ಅನೇಕ ವರ್ಷಗಳು ಗ್ರಾಮ ಮುನಿಸೀಫರಾಗಿ ಕೆಲಸ ಮಾಡಿದಕ್ಕಾಗಿ ಮೈಸೂರು ಮಹಾರಾಜರಿಂದ ಪ್ರಶಸ್ತಿಗಳನ್ನು ಹೊಂದಿರುವರು. ಕೈಲಾಸವಾಸಿಗಳಾದಾಗ ಇವರಿಗೆ ೭೦ ವರ್ಷ ವಯಸ್ಸು.

———

### ಕೈ|| ಚಾರ್ಮಾನಿ ಬಸವಲಿಂಗಪ್ಪನವರು, ದಾವಣಗೆರೆ.

ಜ-೧೮೬೮. ಮ-೧೯೨೬.

ಇವರು ಒಂದು ಬಡತನದ ಸದ್ವಂಶದಲ್ಲಿ ಜನಿಸಿದರಾದರೂ ತಮ್ಮ ಧೈರ್ಯ ಸಾಹಸ ಪರಿಶ್ರಮಗಳಿಂದ ಕೆಲವು ವರ್ಷಗಳೊಳಗೆ ದಾವಣಗೆರೆಯಲ್ಲೆಲ್ಲಾ ಪ್ರಸಿದ್ಧರಾದ ವರ್ತಕರಾದರು. ಇವರ ಶಾಖಾಮಳಿಗೆಗಳು ಅರಸೀಕೆರೆ ಚಿತ್ರದುರ್ಗ ಮೊದಲಾದ ಸ್ಥಳಗಳಲ್ಲಿರುವವು.

ವ್ಯಾಪಾರದಲ್ಲಿ ನಿರತರಾಗಿದ್ದರೂ ಇವರಿಗೆ ತೀರ್ಥಯಾತ್ರೆ ಗುರುಪೂಜೆ ಎಂದರೆ ಅತ್ಯಂತ ಪ್ರೇಮ. ತಮ್ಮ ಸಕಲ ಬಂಧುಮಿತ್ರರೊಡನೆ ಉಳವಿ, ಅಥಣಿ ಮೊದಲಾದ ಸ್ಥಳಗಳಲ್ಲಿ ಯಾತ್ರೆ ಮಾಡಿರುವರು. ದಾವಣಗೆರೆಯಲ್ಲಿ ಎಂಟನೆಯ ವೀರಶೈವ ಮಹಾಸಭೆಯು ನಡೆದಾಗ ಸಭೆಯ ಸುವ್ಯವಸ್ಥೆಯ ಅನುಕೂಲಕ್ಕಾಗಿ ಸೇರಿಸಲ್ಪಟ್ಟ "ಚಿರಸ್ಥಾಯಿ" ಫಂಡಿಗೆ ಮೂರು ಸಹಸ್ರ ರೂಪಾಯಿಗಳನ್ನು ಕೊಟ್ಟಿರುವರು.



ದಾವಣಗೆರೆಯಲ್ಲಿಯ ಶ್ರೀ ವಿಶ್ವನಾಥಾ ಜಿನ್ನಿಂಗ್ ಫ್ಯಾಕ್ಟರಿಯು ಸ್ಥಾಪಿಸಲ್ಪಟ್ಟದ್ದು ಇವರಿಂದಲೇ. ದಾವಣಗೆರೆಯ ವಿದ್ಯಾವರ್ಧಕ ಸಂಘದ ಸ್ಥಾಪಕರಲ್ಲೂ ಸಹಾಯಕರಲ್ಲೂ ಇವರೊಬ್ಬರು. ಇವರು ಮೃತಿಯನ್ನೈದಿದಾಗ ದಾವಣಗೆರೆಯ "ವಿದ್ಯಾವರ್ಧಕ ಸಂಘದ" ಅಡಿಗಲ್ಲು ಸಡಲಿತೆಂದು ಉದ್ಗಾರ ತೆಗೆದರು. ಪ್ರಕೃತದಲ್ಲಿ ಇವರ ಸೋದರರಾದ ಶ್ರೀಯುತ ಚನ್ನಪ್ಪನವರೇ ಇವರ ಆಡಳಿತಗಳನ್ನು ಚತುರತೆಯಿಂದ ನಿರ್ವಹಿಸುತ್ತಿರುವರು.

———

### ಆಸ್ಥಾನ ವಿದ್ವಾನ್ ಕೈ|| ಬಿ. ರಾಚಪ್ಪನವರು.

ಪ್ರಸಿದ್ಧ ನಟರು ಮತ್ತು ಸಂಗೀತ ವಿದ್ವಾಂಸರು; ಮೈಸೂರು ಮಹಾರಾಜರ ಕೃಪಾಪೋಷಿತವಾಗಿದ್ದ ಚಾಮರಾಜೇಂದ್ರ ಕರ್ಣಾಟಕ ನಾಟಕ ಸಭೆಯಲ್ಲಿ ಮುಖ್ಯ ಪುರುಷ ಪಾತ್ರವನ್ನು ವಹಿಸುತ್ತಿದ್ದರು. ಬಳಿಕ ಚಾಮುಂಡೇಶ್ವರೀ ಕರ್ಣಾಟಕ ನಾಟಕ ಕಂಪನಿಯನ್ನು ಸ್ಥಾಪಿಸಿ, ಅದರಲ್ಲಿ ದುಷ್ಯಂತ, ಅರ್ಜುನ, ಕೀಚಕ ಮುಂತಾದ ಪಾತ್ರಗಳನ್ನು



ಬಹು ಚನ್ನಾಗಿ ಅಭಿನಯಿಸುತ್ತಿದ್ದರು. ಮೈಸೂರು ಮದ್ರಾಸು ಕೊಯಮುತ್ತೂರು ಪ್ರಾಂತದ ಮಹಾಜನರಿಂದ ಅನೇಕ ಪದಕಗಳನ್ನೂ, ಪ್ರಶಸ್ತಿ ಪತ್ರಗಳನ್ನೂ ಹೊಂದಿದ್ದರು. ಮೈಸೂರು ಮಹಾರಾಜರ ಆಸ್ಥಾನ ವಿದ್ವಾಂಸರೂ, ಮನೋಹರವೂ ಸುಶ್ರಾವ್ಯವೂ ಆದ ಶಾರೀರಸಂಪತ್ತಿಯುಳ್ಳವರೂ ಆಗಿ ಈಗ್ಗೆ ೧ ವರ್ಷದ ಮೊದಲು ಅಕಾಲ ಮರಣಕ್ಕೆ ತುತ್ತಾದರು.

---

### ಕೈ|| ಪಗಡದಿನ್ನೆ ಮಠದ ನನ್ನಪ್ಪ ಶಾಸ್ತ್ರಿಗಳು, ಸಿಂಧನೂರು (ರಾಯಚೂರು.)

ಸಂಸ್ಕೃತದಲ್ಲೂ ಕನ್ನಡದಲ್ಲೂ ಒಳ್ಳೆಯ ಪರಿಶ್ರಮ ಹೊಂದಿದ್ದರು. ಧರ್ಮಬೋಧೆಯಿಂದ ಸಮಾಜ ಸೇವೆಯನ್ನು ಮಾಡುತ್ತಿದ್ದುದಲ್ಲದೆ ಈ ಕೆಳಗಿನ ಗ್ರಂಥಗಳನ್ನು ಬರೆದಿರುವರು :—ನವ ಮುಗ್ಧಲೀಲೆ, ತ್ರಿಷಷ್ಠಿ ಪುರಾತನ ಚರಿತ್ರೆ, ವೇದಾಂತ ಪಟಲ, ಶಿಖಾಧಾರಣ ಖಂಡನ ಇತ್ಯಾದಿ.

---

### ಕೈ|| ಷಾಪ್ ಗುಬ್ಬಿ ಹುಚ್ಚಯ್ಯನವರು, ತುಮಕೂರು.

ಜನನ-ಸುಮಾರು ೧೮೪೦. ಮರಣ-೧೯೨೩.

ತುಮಕೂರಿನ ಪ್ರಸಿದ್ಧ ಆರಾಧ್ಯರ ವಂಶದಲ್ಲಿ ಜನಿಸಿದರು, ಬಾಲ್ಯದಲ್ಲಿ ಬಡತನದಲ್ಲಿ ಬೆಳೆದರೂ ವ್ಯಾಪಾರಾದಿಗ



ಳಿಂದ ನಿಷ್ಕರೂ, ದೊಡ್ಡ ಕುಟುಂಬಿಗಳೂ ಆಗಿ ಬಾಳಿದರು. ಮೃತಿಹೊಂದುವ ಮೊದಲು ತಮ್ಮ ಆಸ್ತಿಯಲ್ಲಿ ೭|| ಸಹಸ್ರ ರೂಪಾಯಿಗಳನ್ನು ದಾನವಾಗಿ ತೆಗೆದಿಟ್ಟು ಅದರ ಉತ್ಪನ್ನದಲ್ಲಿ ತುಂಕೂರಿನ ಶ್ರೀಜಗದ್ಗುರು ಜಯದೇವ ಮುರಘರಾಜೇಂದ್ರ ಹಾಸ್ಟಲಿನಲ್ಲಿ ಕೆಲಮಂದಿ ಬಾಲಕರಿಗೆ ಅನ್ನಾಹಾರವನ್ನು ಏರ್ಪಡಿಸಿದರು. ಈ ಮಹನೀಯರ ಉದಾರ ದಾನದಿಂದ ಈಗ್ಗೆ ೫ ಮಂದಿ ಅನಾಥ ಹುಡುಗರು ವಿದ್ಯಾಭ್ಯಾಸ ಮಾಡುತ್ತಿರುವರು.

---

### ಶಿಂಧ್ಗಿ ಮುರಿಶಿದ್ದಪ್ಪನವರು, ಬಳ್ಳಾರಿ.

ಜನನ ೧೮೫೩. ಮರಣ ೧೯೦೮.

ಇವರು ಬಳ್ಳಾರಿಯ ಮುನಿಸಿಪಲ್ ಚೇರಮೆನ್ನರಾಗಿ ಬಹಳ ದಿನಗಳು ಕೆಲಸ ಮಾಡಿದ್ದಲ್ಲದೆ ಇನ್ನೂ ಅನೇಕ ವಿಧದಿಂದ ಸಮಾಜ ಸೇವೆಯನ್ನು ಮಾಡಿರುವರು. ಬಳ್ಳಾರಿಯ ಆನರರಿ ಬೆಂಚ್ ಮೇಜಿಸ್ಟ್ರೇಟರೂ, ಹಿಂದೂ ಟೆಂಪಲ್ ಕಮಿಟಿಯ ಅಧ್ಯಕ್ಷರೂ, ವೈಸ್ರಾಯರಿಂದ ಮೆರಿಟ್ ಪ್ರಶಸ್ತಿಯನ್ನು ಹೊಂದಿದವರೂ ಆಗಿದ್ದರು.

ಇವರು ಹಿಂದೂದೇಶದಲ್ಲೆಲ್ಲೆಯಲ್ಲಿ ಪರ್ಯಟನ ಮಾಡಿದುದಲ್ಲದೆ, ರಾಷ್ಟ್ರೀಯ ಮಹಾಸಭಾ ಕಾರ್ಯಗಳಲ್ಲಿ ಹೆಚ್ಚಿಗೆ ಭಾಗಿಗಳಾಗಿದ್ದರು.

---

## ಕೈ॥ ಗುರುಕಾರ್ ಮರಿಮರಿಪ್ಪನವರು, ಮೈಸೂರು.

ಜನನ ೧೮೧೮, ಮರಣ ೧೮೭೧ ಡಿಸೆಂಬರ್.

ಇವರ ಜನ್ಮಸ್ಥಳವು ಚಿಕ್ಕನಾಯಕನ ಹಳ್ಳಿ. ಇನ್ನೂ ಹುಡುಗರಾಗಿರುವಾಗಲೇ ಅರಮನೆಯಲ್ಲಿ ಕೆಲಸಕ್ಕೆ ಸೇರಿ ತಮ್ಮ ಚತುರತೆಯಿಂದಲೂ. ಸದ್ಗುಣಗಳಿಂದಲೂ, ಶೀಘ್ರದಲ್ಲೇ ರಾಜಾನುಗ್ರಹವನ್ನು ಸಂಪಾದಿಸಿದರು. ಇವರಿಗೆ ಕನ್ನಡ-ಸಂಸ್ಕೃತಗಳು ಚನ್ನಾಗಿ ಬರುತ್ತಿದ್ದಿತಲ್ಲದೆ, ಇಂಗ್ಲೀಷಿನಲ್ಲಿ ಸ್ವಲ್ಪಮಟ್ಟಿಗೆ ಪರಿಚಯವಿತ್ತು. ಅನೇಕ ವರ್ಷಗಳು ಸಮ್ಮುಖದ ತೊಟ್ಟಿ ಗುರುಕಾರರಾಗಿದ್ದರು.



ಇವರ ಕಾಲದಲ್ಲಿ ಮೈಸೂರಿನ ವೀರಶೈವರು ವಿದ್ಯೆಯಲ್ಲಿ ಬಹಳ ಹಿಂದುಳಿದಿದ್ದರು. ಈ ನ್ಯೂನತೆಯನ್ನು ಹೇಗಾದರೂ ಹೋಗಲಾಡಿಸಬೇಕೆಂಬುದೇ ಮರಿಮಲ್ಲಪ್ಪನವರ ಯೋಚನೆಯಾಗಿತ್ತು. ಇದರ ಪರಿಣಾಮರೂಪವಾಗಿ ಮೃತಿಹೊಂದುವ ಪೂರ್ವ ಮರಿಮಲ್ಲಪ್ಪನವರು ತಮ್ಮ ಆಸ್ತಿಯ ಮುಖ್ಯಾಂಶವನ್ನು ದಾನವಾಗಿಕೊಟ್ಟು ಮೈಸೂರಿನಲ್ಲಿ ಒಂದು ಶಾಲೆಯನ್ನು ಸ್ಥಾಪಿಸುವ ಏರ್ಪಾಡುಮಾಡಿದರು.

ಮರಿಮಲ್ಲಪ್ಪನವರಿಗೆ ಸಂತಾನವಿರಲಿಲ್ಲ. ಪತ್ನಿಯೂ ಐದು ಜನ ಸಹೋದರರೂ ಮಾತ್ರವಿದ್ದರು. ಬಂಧು ಮಿತ್ರರು ದತ್ತ ಸ್ವೀಕಾರ ಮಾಡಲು ಹೇಳಿದರೂ ಕೇಳದೆ ಸಾಯುವ ಮೊದಲು ತಮ್ಮ ಆಸ್ತಿಯಲ್ಲಿ ಐದುಜನ ಸಹೋದರರಿಗೆ ಹಿಂದೊಂದು ಸಹಸ್ರ ರೂಪಾಯಿಗಳನ್ನು ಕೊಟ್ಟು, ಉಳಿದ ಸುಮಾರು ೨೮ ಸಹಸ್ರ ರೂಪಾಯಿಗಳ ಹಣವನ್ನು ಮೇಲೆ ಹೇಳಿದಂತೆ ಶಾಲೆಯ ನಿಮಿತ್ತವಾಗಿ ಉಪಯೋಗಿಸುವಂತೆ ಮರಣಶಾಸನವನ್ನುಬರೆಸಿದರು. ಆಗ್ಗೆ ಅರಮನೆಯ ಕಂಟ್ರೋಲರರಾಗಿದ್ದ ರಂಗಾಚಾರ್ಯರವರೇ ಈ ಪತ್ರವನ್ನು ಬರೆದವರು. ಕೆಲವು ಇಷ್ಟಮಿತ್ರರ ಹೇಳಿಕೆಯಂತೆ ರಂಗಾಚಾರ್ಯರು ಉಯಲಿನಲ್ಲಿ ಮರಿಮಲ್ಲಪ್ಪನವರ ಧರ್ಮಪತ್ನಿಯು ಯಾರಾದರೂ ಯೋಗ್ಯ ಬಾಲಕನನ್ನು ದತ್ತ ಸ್ವೀಕಾರ ಮಾಡಬಹುದೆಂದು ಒಂದು ಕಲಮನ್ನು ಹಾಕಿದ್ದರು. ರುಗ್ನಶಯ್ಯೆಯಲ್ಲಿದ್ದ ಮರಿಮಲ್ಲಪ್ಪನವರು ಇದನ್ನು ಕೇಳಿದೊಡನೆಯೇ ಕೋಪದಿಂದ ಎದ್ದುಕುಳಿತು-ದತ್ತಸ್ವೀಕಾರವು ಕೂಡದೆಂದು ನಾನು ಮೊದಲೇ ಹೇಳಲಿಲ್ಲವೆ? ನೂರಾರು ಹುಡುಗರಿಗೆ ವಿದ್ಯಾದಾನಮಾಡುವ ಶಾಲೆಗಿಂತ ನನಗೆ ಬೇರೆ ಮಗನೇಕೆ? ಈ ವಿಷಯದಲ್ಲಿ ನನ್ನಭಿಮತಕ್ಕೆ ಯಾರಾದರೂ ವಿರೋಧವಾಗಿ ನಡೆದರೆ ಪಿಶಾಚಿಯಾಗಿ ಆಜೀವವೂ ಅವರನ್ನು ಹಿಂಸಿಸುವೆನು ಎಂದು—ಹೇಳಿದರು. ಬಳಿಕ ಅವರ ಇಷ್ಟದಂತೆ ಪತ್ರವು ಬದಲಾಯಿಸಲ್ಪಟ್ಟಿತು. ಆದಿನ ರಾತ್ರಿಯೇ ಮರಿಮಲ್ಲಪ್ಪನವರು ಶಾಂತಚಿತ್ತರಾಗಿ ಶಿವಸನ್ನಿಧಿಯನ್ನೈದಿದರು.

ಮರಿಮಲ್ಲಪ್ಪನವರ ಅಂತ್ಯೇಚ್ಛೆಯಂತೆ ಅವರು ಮೃತಿಹೊಂದಿದ ಕೆಲವು ವರ್ಷಗಳಲ್ಲೇ ಅಂದರೆ ೧೯೧೬ ರಲ್ಲಿ ಶಾಲೆಯು ಅವರು ಬಿಟ್ಟುಹೋಗಿದ್ದ ಮನೆಯಲ್ಲಿಯೇ ಪ್ರಾರಂಭಿಸಲ್ಪಟ್ಟಿತು. ಶಾಲೆಯ ಮೂಲಧನವಾಗಿ ಬಿಟ್ಟು ಹೋಗಿದ್ದ ೨೮ ಸಹಸ್ರ ರೂಪಾಯಿಗಳ ಮೇಲಿನ ಬಡ್ಡಿಯಿಂದಲೂ ಸರ್ಕಾರವು ಕೊಡುತ್ತಿದ್ದ ಗ್ರಾಂಟನಿಂದಲೂ ಶಾಲೆಯ ವೆಚ್ಚವು ನಡೆಯುತ್ತಿತ್ತು. ಶ್ರೀಯುತ ರಂಗಾಚಾರ್ಯ ಯವರೇ ಬಹಳ ವರ್ಷ ಟ್ರಸ್ಟಿ ಕಮಿಟಿಯ ಮುಖ್ಯ ವ್ಯವಸ್ಥಾಪಕರಾಗಿದ್ದರು. ಪ್ರಕೃತದಲ್ಲಿ ಶಾಲೆಯು ಒಂದು ಭವ್ಯವಾದ ಸ್ವಂತ ಕಟ್ಟಡದಲ್ಲಿ ನಡೆಸಲ್ಪಡುತ್ತಿದ್ದು, ಕೈ॥ ಮರಿಮಲ್ಲಪ್ಪನವರ ಕೀರ್ತಿಯು ಪ್ರತಿಯೊಬ್ಬ ವೀರಶೈವನ ಹೃದಯದಲ್ಲೂ ಚಿರಸ್ಥಾಯಿಯಾಗಿ ನಿಲ್ಲುವಂತೆ ಮಾಡುತ್ತಿರುವುದು.

---

## ಸಿದ್ಧಲಿಂಗಪ್ಪ ಮಹಲಿಂಗಪ್ಪ ಹಂಶೆಟ್ಟಿ, ನಿಪ್ಪಾಣಿ.

ಮರಣ-೧೯೨೭.

ಪ್ರಸಿದ್ಧ ಗ್ರಂಥಕರ್ತರು. ಇವರ "ಶ್ರೀ ಶಿವಾಜಿ ಮಹಾರಾಜಾಂಚಾ ಧಾರ್ಮಿಕ ಯೋಗ್ಯತಾ" ಎಂಬ ಮರಾಠೀ ಗ್ರಂಥವು, ಅನೇಕ ಪತ್ರಿಕಾಕರ್ತರ ಮತ್ತು ಲೇಖಕರ ಹೊಗಳಿಕೆಗೆ ಪಾತ್ರವಾಗಿರುವುದು. ವೀರಶೈವರಲ್ಲಿ ಸಮಾಜ ಸುಧಾರಣೆಯ ಕಾರ್ಯಗಳನ್ನು ಮಾಡುವುದರಲ್ಲಿ ಇವರಿಗೆ ಬಹಳ ಆಸಕ್ತಿ ಇತ್ತು. ಜೀವಿತ ಕಾಲವೆಲ್ಲವೂ ಹಿಂದೂಗಳಲ್ಲಿ ಅಸ್ಪೃಶ್ಯತೆಯನ್ನು ನಿವಾರಣ ಮಾಡಲು ಪ್ರಯತ್ನಪಡುತ್ತಿದ್ದರು.

## ರಾವ್ ಬಹದ್ದೂರ್ ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪನವರು.

ಇವರ ಜನ್ಮಸ್ಥಳವು ಗುಬ್ಬಿಯಾದರೂ ಚಿಕ್ಕವಯಸ್ಸಿನಲ್ಲಿಯೇ ಬೆಂಗಳೂರಿಗೆ ಬಂದು, ಅಲ್ಲಿ ಅಡಕೆಯ ವ್ಯಾಪಾರವನ್ನು ಚಿಕ್ಕದಾಗಿ ಪ್ರಾರಂಭಿಸಿ, ಲಕ್ಷಾಂತರ ಹಣವನ್ನು ಸಂಪಾದನೆ ಮಾಡಿದರು. ಇವರು ಅಪುತ್ರವಂತರು. ರಾಜಸಭಾಭೂಷಣ, ದಿವಾನ್ ಬಹದ್ದೂರ್, ಸರ್ ಕೆ. ಪಿ. ಪುಟ್ಟಣ್ಣಶೆಟ್ಟರವರ ಸೂಚನೆಯ ಪ್ರಕಾರ ಕೈ|| ಬಿ. ದೊಡ್ಡ ಗಂಗಯ್ಯನವರು



ಮತ್ತು ಕೈ|| ದೇಶದ ಯಜಮಾನ್ ಬಸಪ್ಪನವರು ಇವರುಗಳ ಪ್ರೋತ್ಸಾಹದ ಮೇಲೆ ಕೈ. ತೋಟದಪ್ಪನವರು ಉತ್ತಮವಾದ ಒಂದು ಕಟ್ಟಡವನ್ನು ಕಟ್ಟಿಸಿರುವರು ; ಇದಕ್ಕೆ ಸುಮಾರು ೧|| ಲಕ್ಷ ರೂಪಾಯಿಗಳಿಗೆ ಮೇಲ್ಪಟ್ಟು ವೆಚ್ಚವು ಮುಟ್ಟಿರುವುದು. ಈ ಕಟ್ಟಡವು ತೋಟದಪ್ಪನವರ ಧರ್ಮಸತ್ರವೆಂದು ಹೆಸರುಗೊಂಡು, ಬೆಂಗಳೂರು ಸಿಟಿಯ ರೈಲ್ವೆ ಸಿಲ್ದಾಣಕ್ಕೆ ಬಹು ಸಮೀಪದಲ್ಲಿರುವುದರಿಂದ ಪ್ರಯಾಣಿಕರಿಗೆ ಬಹಳ ಪ್ರಯೋಜನಕಾರಿಯಾಗಿರುವುದು. ಇದಲ್ಲದೆ ವೀರಶೈವ ಬಡ ವಿದ್ಯಾರ್ಥಿಗಳ ವಸತಿಗೂ ಈ ಕಟ್ಟಡದಲ್ಲಿಯೇ ಅನುಕೂಲ ಮಾಡಿಕೊಟ್ಟು, ಅವರ ಫ್ರೀ ಬೋರ್ಡಿಂಗಿಗಾಗಿ ಮೊದಲು ೩೦ ಸಾವಿರ ರೂಪಾಯಿಗಳ ದೇಣಿಗೆಯನ್ನು ಕೊಟ್ಟರು. ಕೆಲಕಾಲಾನಂತರ ಈ ಮಹನೀಯರು ಶಿವಸಾಯುಜ್ಯವನ್ನು ಹೊಂದುವ ಸಮಯದಲ್ಲಿ ಮತ್ತೆ ೭೦ ಸಾವಿರ ರೂಪಾಯಿಗಳ ಉದಾರವಾದ ದೇಣಿಗೆಯನ್ನು ಕೊಟ್ಟರು. ಇದರಿಂದ ಇವರ ಒಟ್ಟು ದಾನವು ೨|| ಲಕ್ಷ ರೂಪಾಯಿಗಳಿಗೆ ಮೇಲ್ಪಡುವುದು. ಈ ಪುಣ್ಯಾತ್ಮರ ದಾನಶೂರತ್ವದ ಗುರುತಿಗಾಗಿ ಶ್ರೀಮನ್ಮಹಾರಾಜಾ ಸರ್ಕಾರದವರು ಧರ್ಮಪ್ರವರ್ತಕ ಎಂಬ ಅನನ್ಯ ಸಾಧಾರಣವಾದ ಪ್ರಶಸ್ತಿಯನ್ನು, ಸಾರ್ವಭೌಮ ಸರ್ಕಾರದವರು ರಾವ್ ಬಹದ್ದೂರ್ ಎಂಬ ಪ್ರಶಸ್ತಿಯನ್ನೂ ದಯಪಾಲಿಸಿದರು. ಇವರು ಕೈಲಾಸವಾಸಿಗಳಾದಮೇಲೆ ಇವರ ಧರ್ಮಗಳ ಆಡಳಿತವು ಬೆಂಗಳೂರಿನ ಕೆಲಮಂದಿ ವೀರಶೈವ ದೊಡ್ಡಮನುಷ್ಯರ ಒಂದು ಟ್ರಸ್ಟ್ ಕಮಿಟಿಗೆ ಒಪ್ಪಿಸಲ್ಪಟ್ಟಿರುವುದು.

## ವೇ|| ಪತ್ರಿ ಶ್ರೀಮಂತ ಕೈ|| ಯಜಮಾನ್ ರುದ್ರಪ್ಪಯ್ಯನವರು ಬೀರೂರು.

ಇವರು ಬೀರೂರಿನಲ್ಲಿ ಪ್ರಸಿದ್ಧ ವರ್ತಕರೂ ಕಾಫೀ ಪ್ಲಾಂಟರೂ ಆಗಿದ್ದರು. ಸ್ವಪ್ರಯಾಸದಿಂದ ಅಪಾರ ಆಸ್ತಿ



ಯನ್ನು ಸಂಪಾದಿಸಿ ಆ ಪ್ರಾಂತ್ಯದ ವೀರಶೈವರಿಗೆ ಸಹಾಯಕರಾಗಿದ್ದರು. ಇವರು ಬೀರೂರಿನಲ್ಲಿ ಒಂದು ವೈದಿಕ ಪಾಠಶಾಲೆಯನ್ನು ಸ್ಥಾಪಿಸಿ ಬಹಳ ವರ್ಷಗಳು ನಡೆಸಿದರು, ಹಾಗೂ ಸಾರ್ವಜನಿಕವಾಗಿ ವಿದ್ಯಾರ್ಥಿಗಳಿಗೋಸ್ಕರ ಒಂದು ಇಂಗ್ಲಿಷ್ ಸ್ಕೂಲನ್ನು ಕಟ್ಟಿಸಿಕೊಟ್ಟಿರುವರು.



ಇವರ ಪತ್ನಿಯವರಾದ ಶ್ರೀಮತಿ ರುದ್ರಮ್ಮನವರು ಇನ್ನೂ ಜೀವಂತರಿರುವರು. ಅವರಿಗೆ ಈಗ ಸುಮಾರು ೭೦ ವರ್ಷ ವಯಸ್ಸಾಗಿರುವುದು. ಪತಿಯು ಮರಣಕಾಲದಲ್ಲಿ ಆಜ್ಞೆ ಮಾಡಿದ ಮೇರಿಗೆ ಬೀರೂರು ಉಬ್ರಾಣಿ ಮಠದ ವೇ|| ಶಿವಲಿಂಗಪ್ಪಯ್ಯನವರ ದ್ವಿತೀಯ ಕುಮಾರ ರುದ್ರಾರಾಧ್ಯರೆಂಬುವರನ್ನು ದತ್ತಕ ತೆಗೆದುಕೊಂಡಿರುವರು.

## ಧರ್ಮವೀರ ಶಂಕರಣ್ಣನವರು, ಯಾದಗಿರಿ.

ಜನನ-ಸುಮಾರು ೧೮೫೭. ಮರಣ-೧೯೨೬.

ಈ ಮಹನೀಯರು ಹೈದರಾಬಾದಿನ ಕಲ್ಬುರ್ಗಿ ಜಿಲ್ಲೆಯ ಎಲೇರಿ ಎಂಬ ಗ್ರಾಮದಲ್ಲಿ ಸುಮಾರು ೭೦ ವರ್ಷಗಳ ಹಿಂದೆ ಜನಿಸಿದರು. ಇವರ ತಂದೆಯ ಹೆಸರು ಹಂಪಣ್ಣನವರೆಂದು. ಬಾಲ್ಯವು ಕಳೆದು ತರುಣಾವಸ್ಥೆಯು ಪ್ರಾಪ್ತವಾದೊಡನೆಯೇ ಇವರು ಸ್ವಗ್ರಾಮವನ್ನು ತ್ಯಜಿಸಿ ವ್ಯಾಪಾ



ರದ ಸಲವಾಗಿ ಯಾದಗಿರಿಯಲ್ಲಿ ಬಂದು ನೆಲಸಿದರು. ಪಿತ್ರಾರ್ಜಿತವಾದ ಆಸ್ತಿಯು ಅಪಾರವಾಗಿದ್ದರೂ ಸ್ವಾರ್ಜಿತದಿಂದ ಜೀವಿಸುವುದೇ ಉತ್ತಮವೆಂದು ಮೊದಲು ಸಣ್ಣ ಪ್ರಮಾಣದಿಂದ ವ್ಯಾಪಾರ ಮಾಡಲಿಕ್ಕೆ ಹತ್ತಿ, ಹತ್ತಾರುವರ್ಷಗಳಲ್ಲಿ ಆ ಪ್ರಾಂತದಲ್ಲಿ ಗಣ್ಯರಾದ ಶ್ರೀಮಂತರೆನಿಸಿದರು. ಹೆಚ್ಚಿಗೆ ವಿದ್ಯಾಭ್ಯಾಸವಿಲ್ಲದೇ ಇದ್ದರೂ ಇವರ ಬುದ್ಧಿಯು ಬಹಳ ವಿಲಕ್ಷಣವಿದ್ದುದರಿಂದ ತಮ್ಮ ೭-೮ ಅಂಗಡಿಗಳನ್ನು ಬಹಳ ಚತುರತೆಯಿಂದ ನಡೆಸಿಕೊಂಡು ಹೋಗುತ್ತಿದ್ದರಲ್ಲದೆ ಸತ್ಯಸಂಧತೆಯಲ್ಲಿ ಇತರ ಎಲ್ಲ ವರ್ತಕರಿಗೆ ಮಾರ್ಗದರ್ಶಕರಾಗಿದ್ದರು. ಇವರಲ್ಲಿದ್ದ ಶ್ರೇಷ್ಠ ಗುಣಗಳಲ್ಲಿ ಬಡಜನರ ಮೇಲಿದ್ದ ಅಪಾರವಾದ ಕರುಣವೂ ಒಂದು. ಈಗ ಸುಮಾರು ೧೦ ವರ್ಷಗಳ ಮೊದಲು ಹೈದರಾಬಾದ್ ಪ್ರಾಂತದಲ್ಲಿ ದೊಡ್ಡ ಕ್ಷಾಮವು ಬಂದಾಗ ಪ್ರತಿನಿತ್ಯ ಸಹಸ್ರಾರು ದೀನ ದರಿದ್ರರಿಗೆ ಅನ್ನೋದಕಗಳನ್ನು ಕಾಣಿಸಿ ಪ್ರಾಣದಾನ ಮಾಡಿದರು. ಇದರಂತೆಯೇ ಈಗ ೫ ವರ್ಷಗಳ ಕೆಳಗೆ ರೂಪಾಯಿಗೆ ಮೂರು ಸೇರು ಜೋಳವಾಗಿ ಬಡವರು ಹೊಟ್ಟೆಗಿಲ್ಲದೆ ಪ್ರಾಣ ಬಿಡುತ್ತಿದ್ದಾಗ ಸುಮಾರು ೮ ತಿಂಗಳು ಪ್ರತಿನಿತ್ಯ ೧೫೦೦ ಜನರಿಗೆ ಅನ್ನ ಹಾಕಲು ಪ್ರಾರಂಭ ಮಾಡಿದರು. ಈ ಉದಾರ ಬುದ್ಧಿಯನ್ನು ನೋಡಿ ಸಂತುಷ್ಟರಾದ ನೈಜಾಂ ಸರಕಾರದವರು ಶಂಕರಣ್ಣನವರಿಗೆ ಅನೇಕ ಪ್ರಶಂಸಾ ಪತ್ರಗಳನ್ನು ಕೊಟ್ಟರುವುದಲ್ಲದೆ, ಅವರ ಗುಣ ಗಾನವನ್ನೂ ಮನೋಹರವಾಗಿ ಮಾಡಿರುತ್ತಾರೆ.



ಶ್ರೀಮತಿ ಗಂಗಮ್ಮನವರು.

ಕ್ಷಾಮವು ಕಳೆದ ಕೂಡಲೇ ಶಂಕರಣ್ಣನವರಲ್ಲಿ ನೆಲೆಸಿದ್ದ ಧರ್ಮಬುದ್ಧಿಯು ಮತ್ತೊಂದು ದಾರಿಯಲ್ಲಿ ಹರಿಯತೊಡಗಿತು. ಬಡಬಗ್ಗರ ಸಲವಾಗಿ ಒಂದು ಅನ್ನಛತ್ರವನ್ನು ಕಟ್ಟಿಸಿ ಅದು ನಿರಂತರವೂ ನಡೆಯುವಂತೆ ಏರ್ಪಡಿಸಬೇಕೆಂದು ಅವರು ಹಗಲಿರುಳೂ ಚಿಂತಿಸತೊಡಗಿದರು. ಈ ಪ್ರವೃತ್ತಿಯು ರೂಪುಗೊಳ್ಳುವ ಮೊದಲು ಪ್ರಸಿದ್ಧ ಶಿವಯೋಗಿಗಳಾದ ಶ್ರೀ ಮನ್ನಿರಂಜನ ಶಾಂತವೀರ ಮಹಾಸ್ವಾಮಿ ಗುರುಮಠಕಲ್ಯವರು ಇವರಿಗೆ ದರ್ಶನ ಕೊಟ್ಟರು. ಶಂಕರಣ್ಣನವರು ಸ್ವಾಮಿಗಳಲ್ಲಿ ತಮ್ಮ ಮನೋಭೀಷ್ಟವನ್ನು ಬಿನ್ನವಿಸಿಕೊಳ್ಳಲು ಸ್ವಾಮಿಗಳು, ವೀರಶೈವರ ಸಲವಾಗಿ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸುವಂತೆ ಹೇಳಿದರು. ಹೀಗೆ ಮೊದಲು ಹತ್ತುಸಾವಿರ ರೂಪಾಯಿಗಳಿಂದ ಛತ್ರವನ್ನು ಸ್ಥಾಪಿಸಬೇಕೆಂದಿದ್ದ ಶಂಕರಣ್ಣನವರ ಆಕಾಂಕ್ಷೆಯು ಸ್ವಲ್ಪ ದಿನಗಳಲ್ಲಿಯೇ ಲಕ್ಷದ ಮೊನೆಯನ್ನು ಮುಟ್ಟಿ ಒಂದು ಸಂಸ್ಕೃತ ಕಾಲೇಜನ್ನು ಸ್ಥಾಪಿಸುವದಕ್ಕಾಗಿ ಕಳೆದ ರಕ್ತಾಕ್ಷಿನಾಮ ಸಂವತ್ಸರದ ವೈಶಾಖ ಬಹುಳ ಪಂಚಮಿಯಲ್ಲಿ ಸ್ಥಿರ ಚರಾಸ್ತಿಗಳಿಂದ ಕೂಡಿದ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟು, ಆ ಫಂಡಿಗೆ ೧೨ ಜನ ಮೆಂಬರರನ್ನು ಮಾಡಿ, ತಾವೂ ಒಬ್ಬ

ಮೆಂಬರರಾಗಿ ಕೊಟ್ಟ ಆಸ್ತಿಯಮೇಲೆ ತಮ್ಮ ಹಕ್ಕು ಇಲ್ಲವೆಂತಲೂ, ಬಡ್ಡಿಯಿಂದಲೇ ಕಾರ್ಯವು ನಡೆಯಬೇಕಲ್ಲದೆ ಮೂಲ ಧನದಲ್ಲಿ ಖರ್ಚಾಗಬಾರದೆಂತಲೂ ರಿಜಸ್ಟರು ಮಾಡಿಸಿದರು. ಇವರ ದಾನವೀರತ್ವವನ್ನು ನೋಡಿ ಗುರುಮಠಕಲ್ಲು ಎಂಬುವ ಗ್ರಾಮದಲ್ಲಿ ನಡೆದ ನಿಜಾಂಪ್ರಾಂತದ ಮೂರನೇ ಧರ್ಮೋದ್ಧಾರಿಣಿ ಸಭೆಯವರು ಸನ್ಮಾನ ಪೂರ್ವಕವಾಗಿ ಮಾನಪತ್ರವನ್ನು ಕೊಟ್ಟು ಧರ್ಮೋದ್ಧಾರದ ಕಾರ್ಯವನ್ನು ಮಾಡಿದ ಕಾರಣ 'ಧರ್ಮವೀರ' ಎಂಬುವ ಪದವಿಯನ್ನು ಕೊಟ್ಟು ಶಂಕರಣ್ಣನವರಲ್ಲಿದ್ದ ತಮ್ಮ ಅಭಿಮಾನವನ್ನು ವ್ಯಕ್ತಗೊಳಿಸಿದರು.

ಕೈ. ವಾ|| ಶಂಕರಣ್ಣನವರು ತಮ್ಮ ಕಾಲೇಜು ವೃದ್ಧಿಯಾಗುತ್ತಿರುವದನ್ನು ನೋಡಿ ಪುನಃ ಕಾಲೇಜಿಗೆ ದೇಣಿಗಿಯನ್ನು ಕೊಡಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡಿರುವಲ್ಲಿ ಅಕಸಾತ್ತಾಗಿ ಇವರಿಗೆ ವಾತರೋಗವು ಪ್ರಬಲವಾಗಲು ತಮ್ಮ ಸಂಸ್ಥೆಯ ಪ್ರಸಿಡೆಂಟರನ್ನು ಮರಣಕ್ಕಿಂತ ೨ ದಿನಗಳ ಪೂರ್ವದಲ್ಲಿ ಬರಮಾಡಿಕೊಂಡು ಅವರೆದುರಲ್ಲಿ ಪುನಃ ಕಾಲೇಜಿಗಾಗಿ ೫೦ ಸಾವಿರ ರೂಪಾಯಿಗಳನ್ನು ಕೊಡುತ್ತೇವೆಂದು ವಚನಕೊಟ್ಟರು. ಪತ್ನಿಯವರಾದ ಗಂಗಮ್ಮನವರನ್ನೂ, ಅಳಿಯಂದಿರಾದ ಚನ್ನಪ್ಪನವರನ್ನೂ ಕರೆದು ಇಂತಿಷ್ಟು ಆಸ್ತಿಗಳನ್ನು ಕಾಲೇಜಿಗೆ ಕೊಡತಕ್ಕದ್ದೆಂದು ಹೇಳಿದರು. ಇಷ್ಟಾದ ಒಂದೆರಡು ತಾಸಿನಲ್ಲಿಯೇ 'ಧರ್ಮವೀರ' ರಿಗೆ ಮಾತಾಡಲಿಕ್ಕೆ ಬಾರದಂತಾಗಿ ಇಹಲೋಕದ ಯಾತ್ರೆಯು ಮುಗಿಯಿತು.

ಈ ರೂಪಾಯಿಗಳ ಬಗ್ಗೆ ಯಾವ ವ್ಯವಸ್ಥೆಯಾಗಲಿ ಕಾಗದ ಪತ್ರಗಳಾಗಲಿ ನಡೆಯದಿದ್ದರೂ ಇವರ ಧರ್ಮಪತ್ನಿಯವರಾದ ಶ್ರೀಮತಿ ಗಂಗಮ್ಮನವರು ಪತಿಯ ಅಂತಿಮ ಆಜ್ಞೆಯನ್ನು ಪಾಲಿಸಿ ಶಂಕರಣ್ಣನವರು ಮೃತರಾದ ಎಂಟನೇ ದಿವಸವೇ ಕಾಲೇಜಿನ ವ್ಯವಸ್ಥಾಪಕ ಮಂಡಲಿಯ ಅಧ್ಯಕ್ಷರನ್ನು ಕರೆಸಿ ಸರ್ವರ ಸಮಕ್ಷಮ ಪತ್ನಿಯ ಇಚ್ಛೆಯಂತೆ ೫೦ ಸಹಸ್ರ ರೂಪಾಯಿಗಳನ್ನು ಕೊಟ್ಟರು. ಅಧ್ಯಕ್ಷರು ಇಂತ ದುಃಖ ಸಮಯದಲ್ಲಿ ಈ ಎಲ್ಲ ತೊಂದರೆಯನ್ನು ಹಚ್ಚಿಕೊಳ್ಳುವ ಅಗತ್ಯವಿಲ್ಲೆಂದೂ, ಕೆಲವು ದಿನಗಳು ಕಳೆದ ಮೇಲೆ ಕೊಡಬಹುದೆಂದೂ ಹೇಳಿದ್ದಕ್ಕೆ ಶ್ರೀಮತಿಯವರು "ನನ್ನ ಪತಿಯ ವಾಗ್ದಾನವನ್ನು ನಾನು ನಡೆಸದೆ ಹೋದರೆ ಅವರ ಧರ್ಮಪತ್ನಿಯೆನಿಸುವುದಿಲ್ಲ. ಪರಶಿವನನ್ನು ಸೇರಿದ ಅವರ ಆತ್ಮಕ್ಕೆ ನೀವು ಚಿರ ಶಾಂತಿಯನ್ನು ಕೊಡುವಿರಾದರೆ ಈ ಹಣವನ್ನು ಒಡನೆ ತೆಗೆದುಕೊಳ್ಳಿರಿ" ಎಂದರು.

ಈಗ ಶ್ರೀಮತಿಯವರಿಗೆ ಸುಮಾರು ೪೫ ವರ್ಷಗಳಾಗಿದೆ. ಅವರ ಜೀವನದ ನಿತ್ಯ ಧ್ಯೇಯವು ತಮ್ಮಿಬ್ಬರು ಪುತ್ರಿಯರ ಶುಭಚಿಂತನೆ ಮತ್ತು ತಮ್ಮ ಪತಿಯು ಸ್ಥಾಪಿಸಿದ ಕಾಲೇಜಿನ ಶ್ರೇಯೋಭಿವೃದ್ಧಿಯಾಗಿರುವುದು. ವೀರಶೈವರಲ್ಲಿ ಇಂತ ಮಾತೆಯರೂ ಸಾಧ್ವಿಯರೂ ಆದರ್ಶರೂಪವಾಗಿರಲೆಂಬುದೇ ನಮ್ಮ ಕೋರಿಕೆ.

---

**ಕೈ|| ಪಂಡಿತ ಪ್ರಭುವಪ್ಪನವರು, ನ್ಯಾಮತಿ**

ಜ-೧೮೮೪. ಮ-೧೯೨೦.

ನ್ಯಾಮತಿಯಲ್ಲಿ ಕನ್ನಡ ಶಾಲೋಪಾಧ್ಯಾಯರಾಗಿದ್ದರು. ಕನ್ನಡ ಮತ್ತು ಸಂಸ್ಕೃತದಲ್ಲಿ ಉದ್ದಾಮ ಪಂಡಿತರು. ಅನೇಕ ವರ್ಷಗಳ ಪರಿಶೋಧದಿಂದ ಹಳಗನ್ನಡದ ಶಬ್ದಕೋಶವನ್ನು ಬರೆದಿರುವರು. ಇವರ ಅಕಾಲ ಮೃತ್ಯುವಿನಿಂದ ಇಂತಹ ಉತ್ತಮಗ್ರಂಥವು ಅಪೂರ್ಣವಾಗಿ ಉಳಿದರೂ ಇವರ ಅಣ್ಣಂದಿರಾದ ಶ್ರೀಯುತ ಶಾಂತವೀರಪ್ಪನವರು ಬಹಳ ಪರಿಶ್ರಮದಿಂದ ಅದನ್ನು ಸಂಪೂರ್ಣಮಾಡಿರುವರು. ಗ್ರಂಥವು ಬಹಳ ದೊಡ್ಡದಿದ್ದು ಮುದ್ರಣಕ್ಕೆ ಮಾತ್ರ ೫ ಸಹಸ್ರ ರೂಪಾಯಿಗಳು ಬೇಕಾಗಿರುವುದು. ಇಂತಹ ಉದ್ಗ್ರಂಥವು ಪ್ರಕಟವಾದಲ್ಲಿ ವೀರಶೈವ ಸಮಾಜಕ್ಕೆ ಗೌರವ ಬರುವುದರಲ್ಲಿ ಸಂಶಯವಿಲ್ಲ. ಮುದ್ರಣದ ಬಗ್ಗೆ ಶ್ರೀಯುತ ಶಾಂತವೀರಯ್ಯನವರು ಸಾಹಿತ್ಯಾಭಿಮಾನಿಗಳಾದ ವೀರಶೈವರಲ್ಲಿ ಧನ ಸಹಾಯವನ್ನು ಕೋರುತ್ತಿರುವರು. ಅವರ ಪ್ರಯತ್ನವು ಸಫಲವಾಗಿ ಗ್ರಂಥವು ಕ್ಷಿಪ್ರದಲ್ಲಿ ಪ್ರಕಟವಾಗುವುದೆಂದು ಹಾರೈಸುವೆವು.

---

**ಅಪ್ಪಯ್ಯಶಾಸ್ತ್ರಿಗಳು ಸೊಲಬಯ್ಯ ಸ್ವಾಮಿ, ಖಾನಾಪುರ.**

ಮರಣ ೧೯೧೬.

ಇವರು ಸಂಸ್ಕೃತ ತರ್ಕ ವ್ಯಾಕರಣ ಪಂಡಿತರು. ಬೆಂಗಳೂರು, ಬಾಗಲಕೋಟೆ, ಧಾರವಾಡ ಮುಂತಾದ ಸ್ಥಳಗಳಲ್ಲಿ ನಡೆದ ಮಹಾಸಭೆಗಳಲ್ಲಿ ಉಪನ್ಯಾಸ ಮಾಡಿರುವರು. ಅಕಾಲ ಮರಣದಿಂದ ಇವರು ಬರೆಯಬೇಕೆಂದಿದ್ದ ಧರ್ಮ ಗ್ರಂಥಗಳ ಕಾರ್ಯವು ನಿಷ್ಫಲವಾಯಿತು. ಇವರ ಸ್ವಸ್ಥಾನವಾದ ಖಾನಾಪುರವು ವಂಟುಮುರಿ ಸರ್ ದೇಶಾಯರ ಸಂಸ್ಥಾನಕ್ಕೆ ಸೇರಿದ್ದು ಅವರಿಂದ ಕೊಡಲ್ಪಟ್ಟ ಜಹಗೀರುಗಳನ್ನುಳ್ಳದ್ದಾಗಿದೆ. ಇವರಲ್ಲಿ ಅಭ್ಯಾಸ ಮಾಡಿದವರಲ್ಲಿ ಅನೇಕರು ಈಗ ಪ್ರಸಿದ್ಧ ಲೇಖಕರೂ ಬೋಧಕರೂ ಆಗಿರುವರು.

---

### ಕೈ ವೇ|| ಬಸವಪ್ಪ ಶಾಸ್ತ್ರಿಗಳು; ಅಸ್ಥಾನ ವಿದ್ವಾಗ್, ಮೈಸೂರು.

ಕರ್ಣಾಟಕದಲ್ಲಿ ಆಗಿಹೋದ ಇತ್ತೀಚಿನ ಕವಿಗಳಲ್ಲಿ ಇವರು ಅತ್ಯಂತ ಪ್ರಸಿದ್ಧರು. ೧೮ ವರ್ಷದವರಾಗಿರುವಾಗಲೇ ಶ್ರೀ ಕೃಷ್ಣರಾಜಾಭ್ಯುದಯವೆಂಬ ಚಂಪೂ ಪ್ರಬಂಧವನ್ನು ರಚಿಸಿ ಒಪ್ಪಿಸಿದರು. ಅಲ್ಲದೆ ಶ್ರೀಮಚ್ಚಾಮರಾಜ ಒಡೆಯರ್ ಬಹದ್ದೂರ್ ಯವರಿಗೆ ವಿದ್ಯಾಬೋಧಕರಾಗಿಯೂ, ಆಸ್ಥಾನ ಕವಿಗಳಾಗಿಯೂ, ಅಭಿನವ ಕಾಳಿದಾಸ ಎಂಬ ಪ್ರಶಸ್ತಿಯನ್ನು ಹೊಂದಿದವರಾಗಿಯೂ ಇದ್ದರು. ಕವಿತ್ವದಲ್ಲಲ್ಲದೆ 'ಭಾರತ' 'ರಾಜಶೇಖರ' ಮುಂತಾದ ಪದ್ಯಕಾವ್ಯಗಳನ್ನು ಓದುವುದರಲ್ಲಿ ಇವರು ನಿಪುಣರಾಗಿದ್ದರು.

ಇವರು ಕನ್ನಡದಲ್ಲೂ ಸಂಸ್ಕೃತದಲ್ಲೂ ಅನೇಕ ಗ್ರಂಥಗಳನ್ನು ಬರೆದಿರುವರು. ಅವುಗಳಲ್ಲಿ ಕೆಳಕಂಡವು ಮುಖ್ಯವಾದವು.

(೧) ಕರ್ಣಾಟಕ ಶಾಕುಂತಲಾ ನಾಟಕ. (೨) ರತ್ನಾವಳಿ. (೩) ಶೂರಸೇನ. (೪) ಭರ್ತೃಹರಿಶತಕ ತ್ರಯ. ಸಾವಿತ್ರೀ ಚರಿತ್ರೆ. (೬) ದಮಯಂತೀ ಸ್ವಯಂವರ. (೫) ಉತ್ತರರಾಮಚರಿತ್ರೆ.

ಇವರು ತಮ್ಮ ೪೮ನೇ ವರ್ಷದಲ್ಲಿ ಶಿವೈಕ್ಯರಾದರು.

---

### ಕೈ. ಬಸವಾರ್ಯ, ಕಿತ್ತೂರ.

ಧಾರವಾಡ ಪ್ರಾಂತ್ಯದಲ್ಲಿ ಆಗಿಹೋದ ವೀರಶೈವ ಕವಿಗಳಲ್ಲೊಬ್ಬರು. ಅನೇಕ ಲೇಖನಗಳನ್ನು, ಕವಿತೆಗಳನ್ನು ಪ್ರಬೋಧ ಮುಂತಾದ ಮಾಸಪತ್ರಿಕೆಗಳಲ್ಲಿ ಬರೆದಿರುವರು.

---

### ಕೈ|| ಬಸವಾರ್ಯ; ಬೂದಿಹಾಳ.

ಧಾರ್ವಾಡ ಸ್ಕೂಲ್ ಬೋರ್ಡಿನ ಸೂಪ್ರವೈಸರ್ ಆಗಿದ್ದರು. ಉಪನ್ಯಾಸ ಲೇಖಕರು. "ದಿವ್ಯಸುಂದರಿ" ಮೊದಲಾದುವನ್ನು ಬರೆದಿರುವರು.

---

### ಉಂತಕಲ್ಲು ಶಿಖಾಮಣಿ ಮಠದ ಕೈ|| ವಿರೂಪಾಕ್ಷಶಾಸ್ತ್ರಿಗಳು

ಉದ್ದಾಮ ಪಂಡಿತರು ಮತ್ತು ತರ್ಕಶಾಸ್ತ್ರಜ್ಞರು. ಸಂಸ್ಕೃತದಲ್ಲಿ ಕವಿಕರ್ಣರಸಾಯನ, ಕರಡೀಶ ಚಂಪೂ, ಸ್ತುತಿಮಾಲಿಕೆ ಮುಂತಾದುವನ್ನು ಬರೆದಿರುವರು. ಸಂಗೀತವನ್ನೂ ಅರಿತಿದ್ದರು. ಇವರು ಮಾಡಿರುವ ವರ್ಣಗಳೂ ಕೃತಿಗಳೂ ಈಗಲೂ ಬಳ್ಳಾರಿ ಪ್ರಾಂತದಲ್ಲಿ ಪ್ರಚಾರದಲ್ಲಿವೆ.

---

### ಬಳ್ಳಾರಿ ಕೈ|| ಸಿದ್ಧಮಲ್ಲ ಕರಿಬಸಪ್ಪನವರು.

ಪ್ರಸಿದ್ಧ ಮನೆತನದ ಶ್ರೀಮಂತ ವ್ಯಾಪಾರಿಗಳಾಗಿದ್ದರು. ಬಳ್ಳಾರಿಯಲ್ಲಿ ಸಾಲೇಶ್ವರ ದೇವಸ್ಥಾನವನ್ನು ೨೦ ಸಹಸ್ರ ರೂಪಾಯಿ ವೆಚ್ಚಮಾಡಿ ಕಟ್ಟಿಸಿರುತ್ತಾರೆ. ಬಳ್ಳಾರಿಯ ವೀರಶೈವರಲ್ಲಿ ಮುಖಂಡರಾಗಿದ್ದರು.

---

### ಕೈ. ವಾ. ಅಸ್ಥಾನ ವಿದ್ವಾಗ್ ಎಸ್. ಆರ್. ಕರಿಬಸವ ಶಾಸ್ತ್ರಿಗಳು, ಮೈಸೂರು.

ಜನ್ಮ-೧೮೧೨, ಮರಣ-೧೯೭೩.

ಇವರು ಕ್ರಿಸ್ತ ಶಕ ೧೮೭೨ ರಲ್ಲಿ ನಂಜನಗೂಡಿನಲ್ಲಿ ಜನಿಸಿದರು. ಇವರ ತಂದೆಯ ಹೆಸರು ರುದ್ರಪ್ಪಶಾಸ್ತ್ರಿಗಳು. ಇವರು ಬಾಲ್ಯದಲ್ಲಿ ನಂಜನಗೂಡಿನಿಂದ ಮೈಸೂರಿಗೆ ಬಂದು ಕೈ. ವಾ|| ವೀರಸಂಗಪ್ಪನವರು ಸ್ಥಾಪಿಸಿದ ಸಂಸ್ಕೃತ ಪಾಠಶಾಲೆಯಲ್ಲಿ ಅಭ್ಯಾಸಮಾಡಿದರು, ವೇ|| ಭಾಷಾರತ್ನ ಪಿ. ಆರ್. ಕರಿಬಸವ ಶಾಸ್ತ್ರಿಗಳೂ ಮತ್ತು ಕೈ|| ವೇ|| ಶ್ರೀಕಂಠಶಾಸ್ತ್ರಿಗಳೂ ಇವರ ಮುಖ್ಯಾಧ್ಯಾಪಕರಾಗಿದ್ದರು. ವ್ಯಾಸಂಗವು ಮುಗಿದೊಡನೆಯೇ ಕೈ|| ವೀರಸಂಗಪ್ಪನವರು ತಮ್ಮ "ಸ್ಟಾರ್" ಪತ್ರಿಕಾ ಆಫೀಸಿನಲ್ಲಿ ಇವರನ್ನು ಉಪಸಂಪಾದಕರಾಗಿ ನೇಮಿಸಿಕೊಂಡರು. ಕರಿಬಸವ ಶಾಸ್ತ್ರಿಗಳಲ್ಲಿ ಪತ್ರಿಕ ಲೇಖನಾಭಿರುಚಿಯು ಬಹಳವಾಗಿದ್ದು ವೀರಸಂಗಪ್ಪನವರು ಕಲ್ಪಿಸಿಕೊಟ್ಟ ಅವಕಾಶದಿಂದ ಅದು ವಿಕಾಸಹೊಂದಿ ವೀರಶೈವ ಸಮಾಜವನ್ನು ಬೆಳಗಲು ಕಾರಣವಾಯಿತು. ಒಂದೆರಡು ದಿನಗಳೊಳಗಾಗಿ ಕನ್ನಡದಲ್ಲಿ ಪ್ರಸಿದ್ಧ ಲೇಖಕರೆಂಬ ಪ್ರಶಸ್ತಿಯನ್ನು ಪಡೆದರು.

ಕರಿಬಸವಪ್ಪ ಶಾಸ್ತ್ರಿಗಳಂತ ಉದ್ದಂಡ ಭಾಷಾಸೇವಕರು ಕೇವಲ ಪತ್ರಲೇಖನದಿಂದ ಸುಮ್ಮನಿರುವುದು ಸಾಧ್ಯವಿಲ್ಲ. ಸ್ವತಂತ್ರವಾಗಿ ಗ್ರಂಥ ಪ್ರಸಾರಕ ಮಂಡಲವೆಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ "ವೀರಶೈವ ಗ್ರಂಥ ಪ್ರಕಾಶಿಕಾ" ಎಂಬ ಮಾಸಪತ್ರಿಕೆಯನ್ನು ಹೊರಡಿಸಿ ಆ ಮೂಲಕ ವೀರಶೈವ ಮತಗ್ರಂಥಗಳನ್ನು ಸಂಸ್ಕೃತದಿಂದ ಕನ್ನಡಿಸುವುದಕ್ಕೂ, ಕನ್ನಡ ಪದ್ಯಗ್ರಂಥಗಳನ್ನು ಗದ್ಯಕ್ಕೆ ಪರಿವರ್ತಿಸಿ ಪ್ರಕಟಿಸುವುದಕ್ಕೂ ಪ್ರಾರಂಭಮಾಡಿದರು. ಇವರು ಈರೀತಿ ಪ್ರಸಾರ ಮಾಡಿದ ಗ್ರಂಥಗಳಲ್ಲಿ ಈ ಕೆಳಗಿನವು ಮುಖ್ಯವಾದವು.

(೧) ವೃಷಭೇಂದ್ರ ವಿಜಯ. (೨) ಪಂಡಿತಾರಾಧ್ಯ ಚರಿತ್ರೆ. (೩) ಬಸವವಿಜಯ. (೪) ಚನ್ನಬಸವ ಪುರಾಣ (೫) ಸಿದ್ಧಾಂತ ಶಿಖಾಮಣಿ. (೬) ವೀರಶೈವ ಧರ್ಮ ಶಿರೋಮಣಿ. (೭) ಶಿವಯೋಗ ಪ್ರದೀಪಿಕಾ. (೮) ಸೌಂದರ

ಪುರಾಣ. (೯) ಸಟೀಕಾತತ್ವ ಪ್ರಕಾಶಿಕಾ. (೧೦) ಸ್ತುತಿ ಮುಕ್ತಾವಳಿ, ಇತ್ಯಾದಿ.

ಈ ಗ್ರಂಥಗಳಲ್ಲದೆ ಇವರು ಸ್ಟಾರಿನಲ್ಲಿ ಬರೆದ ಲೇಖನಗಳು ಶಾಸ್ತ್ರಾನುಭವದಿಂದ ಓದುವವರ ಮನಸ್ಸನ್ನು ಆಕರ್ಷಿಸುತ್ತಿದ್ದುವು. ಹಾಗೂ ವೀರಶೈವ ಮತವಿಚಾರದಲ್ಲಿ ಅನ್ಯಮತೀಯರಿಗೆ ಉಂಟಾಗಿದ್ದ ತಪ್ಪು ತಿಳುವಳಿಕೆಗಳನ್ನು ಶಾಸ್ತ್ರಾಧಾರದಿಂದ ಸಪ್ರಮಾಣವಾಗಿ ಖಂಡಿಸಿ ಬರೆದ ಇವರ ಲೇಖಗಳು ಚಿರಕಾಲ ಕಾಯ್ದಿಡಲು ತಕ್ಕುವಾಗಿವೆ. ಇವರಿಗೆ ಪದ್ಯರಚನೆಯಲ್ಲೂ ಪಾಂಡಿತ್ಯವಿತ್ತು. ಇವರು ವಿಶೇಷ ಸಂದರ್ಭಗಳಲ್ಲಿ ರಚಿಸಿರುವ ಪ್ರಶಂಸಾರೂಪವಾದ ಕವಿತೆಗಳಿಂದಲೂ, ಇವರ ಇತರ ಗ್ರಂಥಗಳ ಪದ್ಯರೂಪವಾದ ಪೀಠಿಕೆಯಿಂದಲೂ ಇವರ ಕವಿತಾ ಚಾತುರಿಯನ್ನು ತಿಳಿಯಬಹುದು. ೧೯೧೭ರಲ್ಲಿ ಇವರು ಮೈಸೂರು ದರಬಾರಿನ ಆಸ್ಥಾನ ವಿದ್ವಾಂಸರಾಗಿ ಮಾಡಲ್ಪಟ್ಟು, ಕೆಲವು ವರ್ಷಗಳ ಮೇಲೆ ಅಂದರೆ ೧೯೨೩ ರಲ್ಲಿ ಕೈಲಾಸವಾಸಿಗಳಾದರು.

---

### ಶ್ರೀಮತಿ ಚಿಕ್ಕಬಸಮ್ಮಯ್ಯನವರು.

ಜ-೧೮೦೦. ಮ-೧೮೯೭.

ಈಕೆಯು ಮೈಸೂರು ಮಹಾರಾಜರ ಅರಮನೆಯಲ್ಲಿ ಗುರಿಕಾರರಾಗಿದ್ದ ಬೊಪ್ಪಗೌಡನಪುರದ ಸಿದ್ದಪ್ಪನವರ ತೃತೀಯ ಪುತ್ರಿಯು. ಈಕೆಯು ಮೈಸೂರಿನ ಶ್ರೀಮನ್ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮಹಾಮಾತೃಶ್ರೀ ಸೀತಾವಿಲಾಸ ಸನ್ನಿಧಾನದಲ್ಲಿ ಗೊತ್ತುಗಾತಿಯಾಗಿ ಕೆಲಸ ಮಾಡಿದ



ಳಲ್ಲದೆ, ಈಕೆಯು ಸೋದರ ಸೋದರಿಯರೂ ಅರಮನೆಯ ಭಕ್ಷಿಗಿರಿಯೇ ಮೊದಲಾದ ಕೆಲಸಗಳಲ್ಲಿ ರಾಜಸೇವೆಯನ್ನು ಮಾಡಿರುವರು.

ಈಕೆಯು ಮೃತಿಹೊಂದುವ ಮೊದಲು ೧೩ ಸಾವಿರ ರೂಪಾಯಿ ಬಾಳುವ ಸ್ಥಿರಚರ ಸ್ವತ್ತುಗಳನ್ನು ಧರ್ಮಕಾರ್ಯಗಳಲ್ಲಿ ವಿನಿಯೋಗಿಸುವಂತೆ ವ್ಯವಸ್ಥೆ ಮಾಡಿರುವರು. ಪ್ರಕೃತದಲ್ಲಿ ಈಕೆಯ ಹೆಸರಿನಲ್ಲಿ ಒಂದು ಛತ್ರವೂ ಅನಾಥ ವೀರಶೈವ ವಿದ್ಯಾರ್ಥಿಗಳ ವಾಸಕ್ಕೋಸ್ಕರ ಒಂದು ಮನೆಯೂ ಇರುವುದಲ್ಲದೆ ಸುಮಾರು ೪೦೦ ರೂಪಾಯಿ ಉತ್ಪತ್ತಿಯುಳ್ಳ ಒಂದು ಇನಾಂ ಗ್ರಾಮದ ವರಮಾನದಿಂದ ೫ ಜನ ಅನಾಥ ಬಾಲಕರ ಪೋಷಣೆಯೂ ನಡೆಯುತ್ತಿರುವುದು. ಈಕೆಯ ಧರ್ಮದ ವ್ಯವಸ್ಥೆಯು ೭ ಜನಗಳುಳ್ಳ ಒಂದು ಟ್ರಸ್ಟ್ ಕಮಿಟಿಯುವರಿಂದ ನಡೆಯುತ್ತಿರುವುದು.

---

### ಸೂಲಬೆಲೆ ಸರಾಫ್ ನಂಜಪ್ಪ (ಶಾಮಣ್ಣನವರು.)

ಇವರು ಬೆಂಗಳೂರಿನ ಸುಪ್ರಸಿದ್ಧ ಸರಾಫ್ ವ್ಯಾಪಾರಸ್ಥರು. ಇವರು ಅಪುತ್ರವಂತರು. ಶ್ರೀ ಸರಾಫ್ ಬಸಪ್ಪನವರ ಮೂಲಕ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರವರು, ಕೆ.ಟಿ., ಸಿ. ಐ. ಇ. ಯವರ ಪ್ರೋತ್ಸಾಹದಿಂದ ತಮ್ಮ ಮರಣ ಕಾಲದಲ್ಲಿ ತಮಗಿದ್ದ ವಿಶಿಷ್ಟ ಆಸ್ತಿಯನ್ನು (ಸುಮಾರು ೬೦,೦೦೦ ರೂಪಾಯಿಗಳು) ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡಿಗೆ ವಿಲ್ ಮೂಲಕ ಬರೆದು ತಮ್ಮ ಜನ್ಮವನ್ನು ಪವಿತ್ರ



ವನ್ನಾಗಿ ಮಾಡಿಕೊಂಡ ಪುಣ್ಯಾತ್ಮರಿವರು. ಇವರು ತಮ್ಮ ಪತ್ನಿಗಾಗಿ ಎರಡೇ ಎರಡು ಸಾವಿರ ರೂಪಾಯಿಗಳ ಸ್ತ್ರೀಧನವನ್ನು ಉಳಿಸಿದರೆಂದರೆ, ಇವರಿಗೆ ತನ್ನ ಮತದ ವಿದ್ಯಾರ್ಥಿಗಳ ವಿಷಯದಲ್ಲಿ ಎಂತಹ ಅಭಿಮಾನವಿದ್ದಿತೆಂಬ ವಿಚಾರವು ವ್ಯಕ್ತವಾಗುವುದು. ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘದ ಅಭಿವೃದ್ಧಿಗೆ ಇವರ ಉದಾರವಾದ ದೇಣಿಗೆಯೇ ಕಾರಣ. ಈ ಮಹನೀಯರು ಕೇವಲ ಮಧ್ಯ ವಯಸ್ಸಿನಲ್ಲಿ ಈಗ ೧೦ ವರ್ಷಗಳ ಕೆಳಗೆ ಶಿವಸಾಯುಜ್ಯವನ್ನು ಹೊಂದಿದರು.

---

### ಕೈ॥ ಯಂ. ಬಸವಯ್ಯನವರು, ಬಿ.ಎ., ಬಿ.ಎಲ್. ಅಡ್ವೋಕೇಟ್, ಬೆಂಗಳೂರು ಸಿಟಿ.

ಇವರು ಮೈಸೂರಿನ ಶ್ರೀಯುತ ಅರಮನೆ ಗುರಿಕಾರ್ ಬಸವಲಿಂಗಪ್ಪನವರ ಮಕ್ಕಳು. ನ್ಯಾಯ ಪರೀಕ್ಷೆಯಲ್ಲಿ ಉತ್ತೀರ್ಣರಾದಮೇಲೆ ಮದ್ರಾಸಿನಲ್ಲಿ ಪ್ರಸಿದ್ಧ ವಕೀಲರಾದ

ನಾರ್ಟನ್ ಮತ್ತು ಸರ್ ಶಂಕರ ನಾಯರ್ ಇವರ ಕೈಕೆಳಗೆ ವಕೀಲಿಯನ್ನು ಅಭ್ಯಾಸ ಮಾಡಿದರು. ಬಳಿಕ ಬಳ್ಳಾರಿಯಲ್ಲಿ ಕೆಲವು ವರ್ಷಗಳ ವರೆಗೆ ಹೈಕೋರ್ಟು ವಕೀಲರಾಗಿದ್ದು, ಅಲ್ಲಿಂದ ಬೆಂಗಳೂರಿಗೆ ಬಂದರು. ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘದ ವತಿಯಿಂದ ಮೈಸೂರು ಪ್ರಜಾಪ್ರತಿನಿಧಿ (ರೆಪ್ರಜೆಂಟೆಟಿವ್ ಅಸೆಂಬ್ಲಿ) ಸಭೆಗೂ ಸಭೆಗೂ, ತನ್ಮೂಲಕ ನ್ಯಾಯವಿಧಾಯಕ ಸಭೆ (ಲೆಜಿಸ್ಲೇಟೀವ್ ಕೌನ್ಸಿಲ್) ಗೂ ಇನ್ನೂ ಇತರ ಅನೇಕ ಕಮಿಟಿಗಳಿಗೂ ಮೆಂಬರಾಗಿದ್ದು, ಪ್ರಜಾಸಾಮಾನ್ಯಕ್ಕೆ ಅನುಕೂಲವಾದ ಅನೇಕ ಕೆಲಸಗಳನ್ನು ಮಾಡಿದರು. ಮೈಸೂರು ಸಂಸ್ಥಾನಕ್ಕೆ ಬ್ರಾಹ್ಮಣೇತರ ಚಳವಳಿಯನ್ನು ಮೊದಲು ತಂದು ಜನ ಜಾಗ್ರತಿಯನ್ನುಂಟು ಮಾಡಿದವರು ಇವರೇ. ಮಹಮದೀಯರಾದಿಯಾಗಿ ಎಲ್ಲ ಬ್ರಾಹ್ಮಣೇತರ ಪಂಗಡಗಳವರು ಇವರನ್ನು ಉಗ್ರ ಬ್ರಾಹ್ಮಣೇತರ ಮುಖಂಡ (Leader of Backward Classes) ರನ್ನಾಗಿ ಭಾವಿಸಿದ್ದರಲ್ಲದೆ, ಈ ಚಳವಳಿಯ ಪ್ರಶ್ನೆ ಬಂದಾಗ ಅವರನ್ನು ತಪ್ಪದೆ ಸ್ಮರಿಸುವರು. ಜನಸಾಮಾನ್ಯಕ್ಕೆ ಸರಕಾರದಲ್ಲಿ ತಮಗಿರುವ ಹಕ್ಕು ಬಾಧ್ಯತೆಗಳನ್ನು ತಿಳಿಸಿ, ಜನ ಜಾಗ್ರತೆಯನ್ನುಂಟು ಮಾಡಲು ಕಟಿಬದ್ಧರಾಗಿ ನಿಂತಿದ್ದ ಇವರು ತಮ್ಮ ಸ್ವಂತ ವಕೀಲಿ ವ್ಯವಸಾಯವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟದ್ದರೆಂದೇ ಹೇಳಬಹುದು. ಇವರ ಯೋಗ್ಯತೆಗೂ ವಿದ್ಯೆಗೂ ತಕ್ಕ ದೊಡ್ಡ ಪದವಿಯನ್ನು ಸರ್ಕಾರದವರು ಕೊಡುವುದಾಗಿ ಹೇಳಿದರೂ ಸಹ ಅದನ್ನು ತಿರಸ್ಕರಿಸಿ, ಜನಸೇವೆಯನ್ನು ಮಾಡಿದರು. ಧೈರ್ಯಶಾಲಿಗಳು, ಹಟವಾದಿಗಳು ಮತ್ತು ಕಾರ್ಯಸಾಧನೆಗಾಗಿ ಸಮಯಯರಿತು ಕೆಲಸಮಾಡಬಲ್ಲ ಜಾಣರು, ಹಾಗೂ ವಾಕ್ಚತುರರು. ಇವರ ಧ್ಯೇಯವಾಗಿದ್ದ ಬ್ರಾಹ್ಮಣೇತರ ಚಳವಳಿಯ ಮೂಲಕವೂ, ಮತ್ತೆ ಕೆಲವು ಸಂದರ್ಭಗಳಲ್ಲಿಯೂ ಇವರಿಂದ ವೀರಶೈವ ಸಮಾಜಕ್ಕೆ ಮಹದುಪಕಾರವಾಗಿರುವುದು. ಇವರು ೧೯೧೯ನೇ ಇಸವಿಯಲ್ಲಿ ಇನ್ನೂ ಚಿಕ್ಕವಯಸ್ಸಿನವರಾಗಿರುವಾಗಲೇ ಕೀರ್ತಿಶೇಷರಾದರು. ಇವರ ಮರಣವಾರ್ತೆಯನ್ನು ಕೇಳಿ ಆಗ ಮೈಸೂರು ದೇಶದ ದಿವಾನರಾಗಿದ್ದ ಕೈ|| ಸರದಾರ್ ಕಾಂತರಾಜೇ ಅರಸ್ಯವರು "ಇವರ ಸ್ಥಾನವು ಮತ್ತೆ ತುಂಬುವುದೆಂದಿಗೆ!" ಎಂಬ ಶೋಕೋದ್ಗಾರವನ್ನು ತೆಗೆದರು. ಇವರು ಮೃತಿ ಹೊಂದಿದ ದಿನ ಬೆಂಗಳೂರಿನ ಬ್ರಾಹ್ಮಣೇತರರೆಲ್ಲರೂ ಅವರಲ್ಲಿ ತಮಗಿದ್ದ ಗೌರವವನ್ನು ಪ್ರಕಟಪಡಿಸಿದರು. ಇವರಾದ ಮೇಲೆ ಮೈಸೂರು ಪ್ರಾಂತದ ಬ್ರಾಹ್ಮಣೇತರರಲ್ಲಿ ಇಂತ ಶಕ್ತಿಶಾಲಿಗಳಾದ ಮುಖಂಡರು ಆಗಿಲ್ಲವೆಂದರೂ ಅತ್ಯುಕ್ತಿಯಾಗದು.

### ಕೈ|| ಯಜಮಾನ್ ವೀರಸಂಗಪ್ಪನವರು, ಮೈಸೂರು.

ಮೈಸೂರು ಪ್ರಾಂತ್ಯದಲ್ಲಿ ಕೈ|| ವೀರಸಂಗಪ್ಪನವರ ಹೆಸರನ್ನು ಅರಿಯದವರು ಬಹುಶಃ ಇಲ್ಲ. ಏಕೆಂದರೆ ಶುಭ ಕಾರ್ಯಗಳು ನಡೆಯುವ ಸಂದರ್ಭದಲ್ಲಿ ಇವರ ಹೆಸರಿನಮೇಲೆ ಒಂದು ತಾಂಬೂಲವು ಮೊದಲು ತೆಗೆಯಲ್ಪಟ್ಟು, ಆನಂತರ ಸಭಿಕರಿಗೆ ತಾಂಬೂಲವು ಹಂಚಲ್ಪಡುವ ಪದ್ಧತಿಯು ಬಹುತೇಕ ರೂಢಿಯಲ್ಲಿದೆ. ಕೈ|| ವೀರಸಂಗಪ್ಪನವರು ಸಮಾಜದ ಹಿತಕ್ಕಾಗಿ ತಮ್ಮ ತನುಮನಧನಗಳನ್ನು ಧಾರೆಯೆರೆದುದೇ ಇದಕ್ಕೆ ಕಾರಣವು. ಮೈಸೂರಿನ ಯಜಮಾನ ವಂಶಸ್ಥರಾದ ಇವರು ಜವಳಿ, ದಿನಸಿ, ಮತ್ತು ಚೌಬೀನಿ ವ್ಯಾಪಾರಗಳನ್ನು ಮಾಡುತ್ತಾ, ಮೈಸೂರು, ಬೆಂಗಳೂರು ರೈಲ್ವೆ ಮಾರ್ಗವಾಗುವುದಕ್ಕೆ ಮೊದಲು ಮೈಸೂರು-ಬೆಂಗಳೂರು ಟಪಾಲನ್ನೂ, ತದನಂತರ ಮೈಸೂರು-ಮಡಕೆರೆ ಟಪಾಲನ್ನೂ ನಡೆಸುತ್ತಿದ್ದರು. ಇಷ್ಟರಲ್ಲಿ ಮೈಸೂರು ಸರ್ಕಾರದ ಜನಪರಿಗಣತಿ (ಸೆನ್ಸಸ್) ಯಲ್ಲಿ ವೀರಶೈವರನ್ನು ಶೂದ್ರರ ಸಂಗಡ ಸೇರಿಸಿ, ಲೆಖ್ಖವನ್ನೆತ್ತುತ್ತಿದ್ದುದು ಇವರಿಗೆ ಸಹಿಸದೆ, ಇವರನ್ನು ಮತಸೇವಾಂಗಣಕ್ಕೆ ಎಳೆದು ತಂದಿತು. ಈಬಗ್ಗೆ ಇವರು ಮಾಡಿದ ಸಾಹಸವು ಅವರ್ಣನೀಯವು. ಚೀಫ್ ಕೋರ್ಟಿನ ವರೆಗೆ ವಾಜ್ಯ ನಡೆಸಿದರು. ಮತೀಯರಲ್ಲಿ ಜಾಗ್ರತಿಯನ್ನು ಹುಟ್ಟಿಸುವ ಸಲುವಾಗಿಯೂ, ಪರಮತೀಯರ ಕುಹಕವಾದಗಳ ಖಂಡನೆಗಾಗಿಯೂ ಇವರು ಆ ಕಾಲದಲ್ಲಿ ಎಂದರೆ ಈಗ ಸುಮಾರು ೭೦ ವರ್ಷಗಳ ಕೆಳಗೆ ಒಂದು ಮುದ್ರಣಾಲಯವನ್ನು ಸ್ಥಾಪಿಸಿ, ಮತಸಂಬಂಧವಾದ ವಾರಪತ್ರಿಕೆಯನ್ನು ಹೊರಡಿಸುವ ಸಾಹಸವನ್ನು ಮಾಡಿದರು. ಅದೇ ಈಗಿನ ಮೈಸೂರು ಸ್ಟಾರ್ ಪತ್ರವು. ಈ ಪತ್ರವೇ ವೀರಶೈವರಲ್ಲಿ ಮೊಟ್ಟಮೊದಲು ಹೊರಹೊರಟ ಪತ್ರಿಕೆಯು. ಕೈ|| ವೀರಸಂಗಪ್ಪನವರೇ ಮೊಟ್ಟಮೊದಲಿನ ವೀರಶೈವ ಪತ್ರಿಕೆಯಸಂಪಾದಕರು. ಇವರು ಸ್ವತಃ ಲೇಖಕರಾಗಿದ್ದರಲ್ಲದೆ, ವೇ|| ಪಿ. ಆರ್. ಕರಿಬಸವ ಶಾಸ್ತ್ರಿಗಳೇ ಮೊದಲಾದ ಕೆಲಮಂದಿ ಸಂಸ್ಕೃತ ಪಂಡಿತರುಗಳ ಸಹಾಯವನ್ನು ಪಡೆದು, ಈ ಪತ್ರಿಕೆಯಲ್ಲಿ ಮತಸಂಬಂಧವಾದ ಅನೇಕ ವಿಷಯಗಳನ್ನು ಹೊರಗೆ ಹಾಕಿದರು. ಇದರಿಂದ ಪ್ರತಿವಾದಿಗಳ ಬಾಯಿಗೆ ಬೀಗ ಹಾಕಿದಂತಾಯಿತಲ್ಲದೆ, ಮತೀಯರಿಗೆ ಅನೇಕ ಮತವಿಷಯಗಳು ತಿಳುವಿಗೆ ಬಂದು, ಮುಂದುವರಿಯಲು ಅವಕಾಶವಾಯಿತು. ಇದಲ್ಲದೆ ಮತದಲ್ಲಿ ವೈದಿಕವೃತ್ತಿಯು ಅಭಿವೃದ್ಧಿ ಹೊಂದಲೋಸುಗ ಒಂದು ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ನಡೆಸುತ್ತಿದ್ದರು. ಇವರು ಮತಕ್ಕೋಸ್ಕರ ಚಿರಸ್ಥಾಯಿಯಾದ ಒಂದು ಮಹದುಪಕಾರವನ್ನು ಮಾಡಿದರು. ಅದೇನೆಂದರೆ, ಮತಗ್ರಂಥ ಪ್ರಕಟನೆ. ಮತಸಿದ್ಧಾಂತ ಪ್ರತಿ

ಪಾದಕಗಳಾದ ಸಿದ್ಧಾಂತ ಶಿಖಾಮಣಿ, ಕ್ರಿಯಾಸಾರ, ಲಿಂಗ ಧಾರಣ ಚಂದ್ರಿಕೆ ಮೊದಲಾದ ಗ್ರಂಥಗಳೂ, ಸಟೀಕ ವೃಷಭೇಂದ್ರವಿಜಯ, ದೀಕ್ಷಾವಿಧಿ, ಶಿವಪೂಜಾವಿಧಿ, ವಿವಾಹವಿಧಿ, ಅನುಭವ ಸೂತ್ರ, ಶತಕತ್ರಯ ಈ ಮೊದಲಾದ ಗ್ರಂಥಗಳೂ ಇವರಿಂದಲೇ ಪ್ರಕಟಿಸಲ್ಪಟ್ಟವು. ಇವರ ಕಾಲದಲ್ಲಿ ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಪ್ರಕಟವಾದ ಮತವಿಷಯಿಕಗಳಾದ ಲೇಖಗಳನ್ನು ಆರಿಸಿ "ಸ್ಟಾರ್ ಕರೆಸ್ಪಾಂಡೆನ್ಸ್" ಎಂಬ ಪುಸ್ತಕವನ್ನು ಎರಡು ಭಾಗಗಳಲ್ಲಿ ಪ್ರಕಟಮಾಡಿದರು. ಈ ಎರಡು ಭಾಗಗಳನ್ನೂ ಓದಿದರೆ ಮತ ಸಂಬಂಧವಾದ ಎಲ್ಲ ಪ್ರಶ್ನೆಗಳಿಗೂ ಉತ್ತರ ಹೇಳುವ ಶಕ್ತಿಯುಂಟಾಗುವುದೆಂದು ಹೇಳಬಹುದು. ಗ್ರಂಥ ಪ್ರಕಟನಾದಿಗಳ ವಿಷಯದಲ್ಲಿ ಇವರನ್ನು ಸೋಲಾಪುರದ ರಾವ್‌ಸಾಹೇಬ್ ವಾರದ ಮಲ್ಲಪ್ಪನವರಿಗೆ ಹೋಲಿಸಬಹುದು.

ಈ ಮತವಿಷಯಗಳಲ್ಲಲ್ಲದೆ ಇವರು ಇತರ ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಕೆಲಸಮಾಡುತ್ತಿದ್ದರು. ಅನೇಕ ದಿವಸಗಳವರೆಗೆ ಮೈಸೂರಿನ ಮ್ಯುನಿಸಿಪಲ್. ಕೌನ್ಸಿಲರಾಗಿದ್ದರು.

ಕೈ|| ವೀರಸಂಗಪ್ಪನವರು ಕೇವಲ ಆಚಾರಶೀಲರು, ನಿಗರ್ವಿಗಳು, ಮತಕ್ಕೋಸ್ಕರ ದೇಹವನ್ನು ತೇದು, ಇದ್ದ ಆಸ್ತಿಪಾಸ್ತಿಗಳನ್ನು ಹಾಳುಮಾಡಿಕೊಂಡವರು. ಕೇವಲ ಉದಾರವಾದ ಮನಸ್ಸುಳ್ಳವರು. ಅಂತಹ ಮನಸ್ಸುಳ್ಳವರಾದುದರಿಂದಲೇ ಅವರು ಹಾಕಿದ ಸ್ಟಾರ್ ಪತ್ರಿಕಾರೂಪವಾದ ಬೀಜವು ಗಿಡವಾಗಿ, ಮರವಾಗಿ, ಈಗಲೂ ಮತಸೇವೆಯನ್ನು ಅವರಿದ್ದರೆ ಹೇಗೋ ಹಾಗೆಯೇ ಮಾಡುತ್ತಿರುವುದು ಇವರ ಹಿರಿಯ ಮಕ್ಕಳಾದ ವೈ|| ವಿರೂಪಾಕ್ಷಯ್ಯನವರು, ತಮ್ಮ ತಂದೆಯವರು ಕೀರ್ತಿಶೇಷರಾದ ಮೇಲೆ ಅವರ ಮಾರ್ಗವನ್ನೇ ಅನುಸರಿಸಿ ಸ್ಟಾರ್ ಪತ್ರಿಕೆಯನ್ನು ನಡೆಸುತ್ತಾ ಬಂದಿರುವರು.

---

### ಕೈ|| ರುದ್ರಪ್ಪಾ ಮುರಿಗಪ್ಪಾ ಅಣ್ಣಿಗೂಗವಾಡ, ಬಾಗಲಕೋಟೆ,

ಶ್ರೀಮಂತ ಮನೆತನದಲ್ಲಿ ಜನಿಸಿದ ಸದ್ಗುಣಿಗಳು ಮತ್ತು ದಾನಶೂರರು. ಬಾಗಲಕೋಟೆಯಲ್ಲಿ ಸ್ಥಾಪಿತವಾಗಿರುವ ಶ್ರೀ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘಕ್ಕೆ ವಿಶೇಷ ಸಹಾಯ ಮಾಡಿದರಲ್ಲದೆ ಆ ಸಂಘದ ವತಿಯಿಂದ ನಡೆಯುತ್ತಿರುವ ಸಂಸ್ಕೃತಪಾಠಶಾಲೆ, ಫ್ರೀಬೋರ್ಡಿಂಗ್, ಬಸವೇಶ್ವರ ಹೈಸ್ಕೂಲ್ ಮುಂತಾದವುಗಳ ವ್ಯವಸ್ಥೆಯಬಗ್ಗೆ ಬಹಳ ಜಾಗರೂಕರಾಗಿದ್ದರು.

ಇವರು ತಮ್ಮ ಅಂತ್ಯಕಾಲದಲ್ಲಿ ಸಂಸಾರ ಹವ್ಯಾಸವನ್ನು ತ್ಯಾಗಮಾಡಿ ಕಾಶೀಕ್ಷೇತ್ರದಲ್ಲಿ ವಾಸಮಾಡುತ್ತಿದ್ದರು; ಮತ್ತು ಮರಣ ಪತ್ರದಲ್ಲಿ ತಮ್ಮ ಆಸ್ತಿಯಲ್ಲಿ ೩೦ ಸಹಸ್ರ ರೂಪಾಯಿಗಳನ್ನು ವಿದ್ಯಾರ್ಥಿಗಳ ಸಲವಾಗಿ ಮೀಸಲಾಗಿರಿಸುವಂತೆ ಬರೆದರು. ಶ|| ೧೮೪೧ ಭಾದ್ರಪದ ಬಹುಳ ೧೩ ರಲ್ಲಿ ಇವರು ಲಿಂಗೈಕ್ಯರಾದರು.

---

### ಕೈ|| ಗುರುಪಾದಪ್ಪನವರ ಕೊಟ್ಟೂರಪ್ಪನವರು, ತಿಪಟೂರು.

ಇವರು ತಿಪಟೂರಿನಲ್ಲಿ ಮಹೇಶ್ವರ ವಂಶೀಯರು. ವ್ಯಾಪಾರದಲ್ಲಿ ಲಕ್ಷಾಂತರ ಹಣವನ್ನು ಸಂಪಾದನೆ ಮಾಡಿದರು. ಇವರಿಗೆ ಇಬ್ಬರು ಗಂಡುಮಕ್ಕಳು ಇದ್ದರೂ, ತಾವು ಜನ್ಮ ಸಾಫಲ್ಯತೆಗಾಗಿ ಧರ್ಮ ಮಾಡತಕ್ಕದ್ದು ಸೂಕ್ತವೆಂದು ಭಾವಿಸಿ, ಮತ್ತು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳವರ ಪ್ರೋತ್ಸಾಹಕ್ಕೆ ಒಳಪಟ್ಟು, ತಮ್ಮ ಸಂಪಾದನೆಯಲ್ಲಿ ಸ್ವಲ್ಪ ಹಣವನ್ನು ಉಪಯೋಗಿಸಿದರು. ತಿಪಟೂರಿನಲ್ಲಿರುವ ಶ್ರೀ ವೀರಶೈವಾಶ್ರಮಕ್ಕೆ ಇವರು ತುಂಬಾ ಸಹಾಯ ಮಾಡಿದರು. ಮೊದಲು ಸುಮಾರು ೧೨ ಸಹಸ್ರ ರೂಪಾಯಿಗಳ ಖರ್ಚಿ



ನಿಂದ ವೀರಶೈವಾಶ್ರಮದ ಮುಖ್ಯ ಕಟ್ಟಡವನ್ನು ಕಟ್ಟಿಸಿಕೊಟ್ಟದ್ದಲ್ಲದೆ, ಇವರ ಧರ್ಮ ಪತ್ನಿಯವರಾದ ಶ್ರೀ|| ನೀಲಮ್ಮನವರ ಸ್ಮಾರಕವಾಗಿ ಮತ್ತೆ ೧೦ ಸಹಸ್ರ ರೂಪಾಯಿಗಳ ದೇಣಿಗೆಯನ್ನು ಕೊಟ್ಟಿರುವರು. ಇದಲ್ಲದೆ ಈ ಆಶ್ರಮ (ವಿದ್ಯಾರ್ಥಿಭವನ) ದ ವಿದ್ಯಾರ್ಥಿಗಳಿಗಾಗಿ ಮತ್ತೆ ಕೆಲವು ಭೂಸ್ಥಿತಿಗಳನ್ನು ದಾನಮಾಡಿರುವರು.

ಈಬಗ್ಗೆ ಮೈಸೂರು ಮಹಾರಾಜಾ ಸರಕಾರದವರಿಂದ ಪ್ರಶಸ್ತಿ ಪತ್ರಿಕೆಗಳು ಬಂದಿರುವವು. ಇವರ ಪತ್ನಿಯವರಾದ ಶ್ರೀಮತಿ ನೀಲಮ್ಮನವರು ಜೀವಂತರಿರುವರು. ಇವರ ಜ್ಯೇಷ್ಠ ಪುತ್ರರು ಕೈಲಾಸವಾಸಿಗಳಾದರು. ಇವರ ದ್ವಿತೀಯ ಪುತ್ರರಾದ ಮ|| ರಾ|| ಜಿ. ಕೆ. ಮಲ್ಲಪ್ಪನವರು ಪ್ರತಿನಿಧಿಸಭೆ, ಮುನಿಸಿಪಾಲಿಟಿ ವಗೈರೆ ಸಂಸ್ಥೆಗಳಿಗೆ ಮೆಂಬರಾಗಿರುವರು.

---

### ಅತ್ತಿಬೆಲೆ ಶಿಡಲ ಬಸಪ್ಪನವರು, ಬೆಂಗಳೂರು ಸಿಟಿ.

ಇವರು ಬೆಂಗಳೂರು ತಾಲ್ಲೂಕು ಅತ್ತಿಬೆಲೆ ಗ್ರಾಮದ ಶ್ರೀಮಂತರು. ಬೆಂಗಳೂರಲ್ಲಿ ೩ನೇ ವೀರಶೈವ ಮಹಾಸಭಾ ಕಾಲದಲ್ಲಿ ವೀರಶೈವ ವಿದ್ಯಾರ್ಥಿಗಳ ವಸತಿಗಾಗಿ ಒಂದು ಕಟ್ಟಡವನ್ನು ಕಟ್ಟುವ ಬಗ್ಗೆ ಹತ್ತು ಸಹಸ್ರ ರೂಪಾಯಿಗಳನ್ನು



ವಾಗ್ದಾನ ಮಾಡಿದ್ದು, ಈಚಿಗೆ ಬೆಂಗಳೂರಲ್ಲಿ ಶ್ರೀ ಜಗದ್ಗುರು ಜಯದೇವ ವಿದ್ಯಾರ್ಥಿ ನಿಲಯವು ಕಟ್ಟಲ್ಪಡುವ ಸಂದರ್ಭದಲ್ಲಿ ಇವರು ಈ ವಾಗ್ದಾನವನ್ನೇ ಪೂರೈಸಿದ್ದು ಬಹಳ ಸಹಾಯವಾಯಿತು. ಇದಲ್ಲದೆ ಇವರು ಅತ್ತಿಬೆಲೆಯಲ್ಲಿ ಒಂದು ಪಾಠಶಾಲೆಯನ್ನು ಕಟ್ಟಿಸಿರುವರಲ್ಲದೆ, ಇನ್ನೂ ಕೆಲವು ಧರ್ಮಕಾರ್ಯಗಳನ್ನು ಮಾಡಿರುವರು.

---

### ಭಕ್ಷಿ ಬಿ. ಗಂಗಯ್ಯನವರು ಮತ್ತು ಮರಿಗಂಗಯ್ಯನವರು.

ಮೃ-೧೯೧೦ ; ಮತ್ತು-೧೮೯೦.

ಇವರು ಮೊದಲು ತೆಪ್ಪದ ಬೇಗೂರಿನ ಸ್ಥಳೀಯರು. ಬಹಳ ದಿನಗಳ ಹಿಂದೆ ಬೆಂಗಳೂರಿಗೆ ಬಂದು ನೆಲಸಿದರು. ಹಿಂದುಗಳಲ್ಲಿ-ಮುಖ್ಯ ವೀರಶೈವರಲ್ಲಿ, ಇಂಗ್ಲಿಷ್ ವಿದ್ಯಾಭ್ಯಾಸವು ಕೇವಲ ಅಪರೂಪವಾಗಿದ್ದ ಆ ಕಾಲದಲ್ಲಿ ಇವರು ಚನ್ನಾಗಿ ವಿದ್ಯಾಭ್ಯಾಸವನ್ನು ಮಾಡಿದವರಾಗಿ, ಆಗಿನ ಕಾಲದ ಬಹುಮಂದಿ ಐರೋಪ್ಯರ ಒಡನಾಟದಲ್ಲಿದ್ದರು.

ಮರಿಗಂಗಯ್ಯನವರು ಅಂಚೆ ಭಕ್ಷಿ (ಪೋಸ್ಟ್‌ಮಾಸ್ಟರ್ ಜನರಲ್) ಕೆಲಸದಲ್ಲಿದ್ದು ೧೮೯೦ರಲ್ಲಿ ಮರಣ ಹೊಂದಿದರು. ಇವರ ಇಂಗ್ಲಿಷ್ ಭಾಷಾ ಪಾಂಡಿತ್ಯವು ಅಭಿನಂದನೀಯವಾದುದು. ಗಂಗಯ್ಯನವರು ಸರ್ಕಾರಿ ಉದ್ಯೋಗದಲ್ಲಿ ಅಮಲ್ದಾರಿ ಕೆಲಸವನ್ನು ಮಾಡಿ, ೧೮೯೭ ರಲ್ಲಿ ರಿಟೈರ್ ಆದರು. ಆಗಾಯಿತು ಅವರ ಮರಣ ಕಾಲ (೧೯೧೦) ರ ವರೆಗೆ ಬೆಂಗಳೂರಿನ ಮುನಿಸಿಪಲ್ ಕೌನ್ಸಿಲರಾಗಿ ಬಹಳ ಪ್ರಜಾಸೇವೆ ಮಾಡಿದರು. ಬಿ. ಗಂಗಯ್ಯನವರಿಂದ ವೀರಶೈವ ಸಮಾಜಕ್ಕೆ ಮಹದುಪಕಾರವಾಗಿರುವುದು. ರಾವ್ ಬಹದ್ದೂರ್ ಧರ್ಮಪ್ರವರ್ತಕ ಗುಬ್ಬಿ ತೋಟದಪ್ಪನವರು ಧರ್ಮಸತ್ರವನ್ನು ಕಟ್ಟಲಿಕ್ಕೆ ಮುಖ್ಯ ಪ್ರೋತ್ಸಾಹಕರು ಇವರೇ. ಈಗ ಸತ್ರವು ಕಟ್ಟಲ್ಪಟ್ಟಿರುವ ಸ್ಥಳವು ರೈಲ್ವೆಯವರದಾಗಿದ್ದು ಆ ಸ್ಥಲವನ್ನು ಪಡೆಯಲಿಕ್ಕೆ ಗಂಗಯ್ಯನವರು ಬಹಳ ಸಾಹಸ ಮಾಡಬೇಕಾಯಿತು. ಅದು ಆಗ್ಗೆ ಗಂಗಯ್ಯನವರಂತಹ ಬುದ್ಧಿಶಾಲಿಗಳೂ, ಐರೋಪ್ಯರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾದ ಅವರ ಒಡನಾಡಿಗಳೂ ಅದಂಥವರ ವಿನಾ, ಸಾಧ್ಯವಿಲ್ಲದ ಮಾತೇ ಆಗಿದ್ದಿತು. ಈ ಬಗ್ಗೆ ಗಂಗಯ್ಯನವರು ಮಾಡಿದ ಸಾಹಸಕ್ಕಾಗಿ ಸಮಾಜವು ತುಂಬಾ ಋಣಿಯಾಗಿದೆ.

ಗಂಗಯ್ಯನವರು ಕೆಲಸದಿಂದ ನಿವೃತ್ತರಾದಮೇಲೆ ಸಾರ್ವಜನಿಕ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದುದಲ್ಲದೆ, ಭೇರಿಕೆ ಮತ್ತು ಪಾಳ್ಯಂಪಟ್ಟ ಜಮೀನುದಾರಿ ಮೈನರುಗಳ ಗಾರ್ಡಿಯನ್ನರಾಗಿ ೧೯೦೭ರ ವರೆಗೂ ಇದ್ದರು. ಈ ಸಹೋದರರ ವಿಷಯದಲ್ಲಿ ಮೈಸೂರು ಪೇಟ್ರಿಯಟ್ ಪತ್ರಿಕೆಯಲ್ಲಿ ಹೀಗೆ ಬರೆಯಲ್ಪಟ್ಟಿದೆ:–

"Messrs. Gangayya and Mari Gangayya, were wellknown characters of Bangalore in the initial period of English education among Indians; and their progress in and familiar acquaintance with English were remarkable, and earned for them the esteem and goodwill of the Europeans of the period, including that well-known and highly venerated poineer, Mr. J. Garrett. It was the current belief of the times that what these brothers did not know of English was not worth knowing, and no educational or common social function could come off without their participation and co-operation. The elder brother was from his facility in English composition compared to Addision, while to the younger was attributed a keen and many-sided intellect."



ಶ್ರೀ ಚಾಮುಂಡೇಶ್ವರೀ ದೇವಸ್ಥಾನದ ಗೋಪುರ, ಮೈಸೂರು.





ಚಾಮುಂಡಿ ಬೆಟ್ಟದ ಮೇಲಿರುವ ಬಸವೇಶ್ವರ.



ಶ್ರೀ ಜಗದ್ಗುರು ಜಯದೇವ ವೀರಶೈವ ಹಾಸ್ಟೆಲ್, ತುಮಕೂರ್.



ಮರಿಮಲ್ಲಪ್ಪನವರ ಹೈಸ್ಕೂಲ್ ಮೈಸೂರು.



ವೀರಶೈವಾನಂದಾಶ್ರಮ, ತಿಬಟೂರು.



ಶ್ರೀ ಜಯದೇವ ವೀರಶೈವ ಹಾಸ್ಟಲ್ ನೆಲಮಂಗಲ, ಮೈಸೂರು



ಲಿಂಗಾಯತ ಹಾಲ್, ಧಾರವಾಡ.



# ವೀರಶೈವ ಸಂಸ್ಥೆಗಳು.

## ಮುಂಬೈ ಪ್ರಾಂತ.

### ಲಿಂಗಾಯತ ಎಜ್ಯುಕೇಶನ್ ಅಸೋಸಿಯೇಶನ್, ಧಾರವಾಡ.

ಆಂಗ್ಲವಿದ್ಯಾಭ್ಯಾಸದಿಂದ ಭರತಖಂಡದಲ್ಲುಂಟಾದ ಜನಜಾಗ್ರತಿಯ ಪರಿಣಾಮವಾಗಿ ವೀರಶೈವರಲ್ಲಿ ಹುಟ್ಟಿದ ಸಂಘಗಳಲ್ಲಿ ಧಾರವಾಡದ ಲಿಂಗಾಯತ ಎಜ್ಯುಕೇಶನ್ ಅಸೋಶಿಯೇಶನ್ನೇ ಮೊದಲನೆಯದು. ಆಗಿನ ವೀರಶೈವಸಮಾಜದ ದುಸ್ಥಿತಿಯನ್ನೂ, ಸಮಾಜೋನ್ನತಿಗೆ ಆಂಗ್ಲವಿದ್ಯಾಭ್ಯಾಸದ ಅವಶ್ಯಕತೆಯನ್ನೂ ತಿಳಿದುಕೊಂಡವರಾಗಿ ಆಗಿನ ಮುಖಂಡರಾದ ಕೈ|| ರಾವ್‌ಬಹದ್ದೂರ್ ಗುರುಸಿದ್ಧಪ್ಪ ಗಿಲಗಂಜಿಯವರು ಮತ್ತು ರಾವ್‌ಬಹದ್ದೂರ್ R. C. ಅರಟಾಳ್ I. S. O. ಈ ಈರ್ವರು ಮಹಾಪುರುಷರು ಈ ಅಸೋಶಿಯೇಶನ್ನನ್ನು ೩೦—೯—೧೮೮೩ರಲ್ಲಿ ಸ್ಥಾಪಿಸಿದರು.

ಸದ್ಯದಲ್ಲಿ ಅಸೋಶಿಯೇಶನ್ನಿನ ಮೂಲಧನವು ೨|| ಲಕ್ಷ ವಿರುವುದು. ಈ ನಿಧಿಯನ್ನು ಶೇಖರಿಸುವ ಕಾರ್ಯದಲ್ಲಿ ಮುಂಬೈ ಕರ್ನಾಟಕ ಮಾನ್ಯಗೃಹಸ್ಥರೆಲ್ಲರೂ ಭಾಗಿಗಳಾಗಿರುವರು. ಹೆಚ್ಚಿಗೆ ಸಹಾಯಮಾಡಿದವರಲ್ಲಿ ಒಂಟಮುರಿ ದೇಶಾಯರಾದ ಸರದಾರ್ ಲಖಮನಗೌಡಾ ಬಸವಪ್ರಭು ದೇಶಾಯಿ C. I. E. ಬಾರಟ್ಲಾ ಯವರ ೫೫ ಸಹಸ್ರ ರೂಪಾಯಿಗಳ ದಾನವು ಸ್ತೋತ್ರಾರ್ಹವಾದುದು. ಇದಲ್ಲದೆ ಕೈ. ಲಿಂಗಪ್ಪ ಜಾಯಪ್ಪ ಸರ್ ದೇಶಾಯಿ, ಸಂಸ್ಥಾನ ನವಲಗುಂದ ಈ ಮಹನೀಯರು ತಮ್ಮ ಪ್ರಿಯಪತ್ನಿಯ ಜ್ಞಾಪಕಾರ್ಥವಾಗಿ "ಶ್ರೀಮತಿ ಭಾಗೀರಥೀಬಾಯಿ ಹಾಸ್ಟೆಲ್" ಎಂಬ ಹೆಸರಿನಿಂದ ಒಂದು ವೀರಶೈವ ವಿದ್ಯಾರ್ಥಿಗೃಹವನ್ನು ಕಟ್ಟಬೇಕೆಂಬ ಉದ್ದೇಶದಿಂದ "ಅಮ್ಮನಗಿ" ಎಂಬ ಗ್ರಾಮವನ್ನು ಆಸೋಶಿಯೇಶನ್ನಿಗೆ ದಾನವಾಗಿ ಕೊಟ್ಟಿರುವರು. ಈ ನಿಧಿಯ ಆದಾಯದಿಂದ ಸುಮಾರು ೩೩ ಸಹಸ್ರ ರೂಪಾಯಿಗಳ ಕರ್ಚಿನಿಂದ ಧಾರವಾಡದಲ್ಲಿ ಕಟ್ಟಲ್ಪಟ್ಟಿರುವ ಭವ್ಯಭವನದಲ್ಲಿ ಸದ್ಯಕ್ಕೆ ಬೆಳಗಾವಿಯ ಕರ್ನಾಟಕ ಲಿಂಗಾಯತ ಸೊಸೈಟಿಯ ಹೈಸ್ಕೂಲು ನಡೆಯುತ್ತಿರುವುದು. ಸ್ಕೂಲಿನ ಸ್ವಂತ ಕಟ್ಟಡವು ತಯಾರಾಗಿ ಅಲ್ಲಿಗೆ ಬದಲಾಯಿಸಿದ ಮೇಲೆ ವಸತಿಗೃಹವನ್ನು ಪ್ರಾರಂಭಿಸಲಿರುವರು.

ಆನಂತರ ತಮ್ಮ ಮರಣದ ಮೊದಲು ಶಿರಸಂಗಿ ದೇಶಾಯರು ೩೦ ಸಹಸ್ರ ರೂಪಾಯಿ ವಾರ್ಷಿಕ ಆದಾಯವುಳ್ಳ ತಮ್ಮ ಜಮೀನ್ದಾರಿಯನ್ನು ಸಮಾಜೋನ್ನತಿಯ ಸಲುವಾಗಿ ಆಸೋಶಿಯೇಶನ್ನಿಗೆ ದಾನಮಾಡಿಕೊಟ್ಟು ಕೀರ್ತಿಶೇಷರಾದರೆಂಬುದು ಪ್ರತಿಯೊಬ್ಬ ವೀರಶೈವನೂ ಅರಿತಮಾತು. ಈ ಎಲ್ಲ ಆದಾಯಗಳಲ್ಲದೆ ಶ್ರೀ ಹುಬ್ಬಳ್ಳಿಯ ಗಂಗಾಧರಸ್ವಾಮಿ ಮೂರುಸಾವಿರಮಠ ಪ್ರೆಸ್ಸಿಂಗ್ ಮತ್ತು ಟ್ರೇಡಿಂಗ್ ಕಂಪೆನಿ ಲಿಮಿಟೆಡ್ ಯವರು ಪ್ರತಿ ವರುಷ ಎರಡು ಸಾವಿರ ರೂಪಾಗಳ ದಾನವನ್ನು ಅಸೋಶಿಯೇಶನ್ನಿಗೆ ಕೊಡುತ್ತಿರುವರು. ಇದಲ್ಲದೆ ಗದಗಿನ ಶ್ರೀಮನ್ನಿರಂಜನಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳು ದರವರ್ಷ ಗದಗಿನ ಧರ್ಮಾದಾವ ಹಣವನ್ನು ಕಳುಹಿಸಿಕೊಡುತ್ತೇವೆಂದು ವಾಗ್ದಾನಮಾಡಿದಂತೆ ೧೯೧೫ರಿಂದ ೧೯೧೯ರ ವರೆಗೆ ರೂ. ೧೫೭೦೦ ರೂಪಾಯಿಗಳನ್ನು ಕೊಟ್ಟಿರುತ್ತಾರೆ. ಸಂಘದ ಮೂಲನಿಧಿಗೆ ಹೆಚ್ಚಿಗೆ ಧನಸಹಾಯ ಮಾಡಿದವರ ಪೈಕಿ ಮ. ರಾ|| ಮುರಿಗಯ್ಯನವರು ಬಾಗೋಜಿ ಸಾ|| ರಬಕವಿ ಇವರು ಕೊಟ್ಟ ಹತ್ತು ಸಹಸ್ರರೂ.ಗಳ ದಾನವೂ ರಾ|| ಬಸಪ್ಪಾ ಮಲ್ಲಪ್ಪಅಣ್ಣ ಕಂಕಣವಾಡಿ ಪೋಲೀಸ್ ಇನಸ್ಪೆಕ್ಟರ್ ಸಾ|| ನಾಸಿಕ ಇವರ ಹದಿನೇಳು ಸಹಸ್ರ ರೂಪಾಯಿಗಳ ದಾನವೂ ಉಲ್ಲೇಖನೀಯವಾಗಿವೆ. ಕೈ. ವಾ|| ಗದಿಗಪ್ಪ ಕಾಳಪ್ಪನವರ, ಸಾ|| ಬಂಕಾಪುರ ಯವರು ವರ್ಷ ಒಂದಕ್ಕೆ ರೂ. ೧೩೦೦ ಉತ್ಪನ್ನವುಳ್ಳ ೩೫ ಸಾವಿರ ರೂಪಾಯಿ ಬೆಲೆಬಾಳುವ ಭೂಸ್ಥಿತಿಯನ್ನು ಅಸೋಶಿಯೇಶನ್ನಿಗೆ ದಾನವಾಗಿ ಕೊಟ್ಟಿರುತ್ತಾರೆ. ಈ ಎಲ್ಲ ಉತ್ಪನ್ನವನ್ನು ಕೂಡಿಸಿ ಅಸೋಶಿಯೇಶನ್ನಿನವರು ಸುಮಾ

ರು ೧೦ ಸಹಸ್ರ ರೂಪಾಯಿಗಳನ್ನು ಪ್ರತಿವರ್ಷವೂ ವಿದ್ಯಾರ್ಥಿಗಳಿಗೆ ವೇತನ ರೂಪದಿಂದ ಹಂಚುತ್ತಿರುವರು.

ಮುಂಬೈ ಕರ್ನಾಟಕದ ಲಿಂಗಾಯತರಲ್ಲಿ ಉಚ್ಚಶಿಕ್ಷಣವು ಹೆಚ್ಚಲು ಈ ಅಸೋಶಿಯೇಶನ್ನೇ ಮುಖ್ಯಕಾರಣವೆಂದು ಧಾರಾಳವಾಗಿ ಹೇಳಬಹುದು. ಅಸೋಶಿಯೇಶನ್ನು ಸ್ಥಾಪಿತವಾದ ಕೆಲವು ವರ್ಷಗಳ ಮೇಲೂ ಅಂದರೆ ಸನ್ ೧೯೦೨ನೆ ಇಸ್ವಿಯಲ್ಲಿ ಕೂಡಾ ಆ ಪ್ರಾಂತ್ಯದಲ್ಲಿ ಕೇವಲ ೧೨ ಜನ ಗ್ರಾಜುಯೇಟುಗಳಿದ್ದವರು ೧೯೨೬ರಲ್ಲಿ ಸುಮಾರು ೨೦೦-೩೦೦ಕ್ಕೆ ಹೆಚ್ಚಿರುವುದು. ಈ ಅಸೋಶಿಯೇಶನ್ನಿನ ಪ್ರಭಾವದಿಂದಲೇ ಪ್ರಕೃತದಲ್ಲಿ ಮುಂಬೈ ಕರ್ನಾಟಕದ ವೀರಶೈವರಲ್ಲಿ ವಕೀಲರು, ಅಧಿಕಾರಿಗಳು ಹೆಚ್ಚಿದರು. ಇವರಲ್ಲಿ ಬಹ್ವಂಶವಾಗಿ ಒಂದಿಲ್ಲೊಂದು ವಿಧದಿಂದ ಈ ಅಸೋಶಿಯೇಶನ್ನಿನ ಸಹಾಯವನ್ನು ಪಡೆದವರೇ ಹೆಚ್ಚೆಂದು ಖಂಡಿತ ಹೇಳಬಹುದು. ಕೇವಲ ಸ್ಥಳೀಯ ವಿದ್ಯಾಪೀಠಗಳಲ್ಲದೆ ಪರದೇಶಗಳ ಪ್ರಸಿದ್ಧ ವಿದ್ಯಾಪೀಠಗಳಲ್ಲಿ ಉಚ್ಚ ಶಿಕ್ಷಣಕ್ಕೆ ಹೋಗುವ ವಿದ್ಯಾರ್ಥಿಗಳಿಗೂ ಇವರು ವೇತನವನ್ನು ಕೊಡುತ್ತಿರುವರು.

ಧಾರವಾಡದಲ್ಲಿರುವ "ಲಿಂಗಾಯತ ಹಾಲ್" ಎಂಬ ಭವ್ಯವಾದ ಮಂದಿರವು ಈ ಅಸೋಶಿಯೇಶನ್ನಿಗೆ ಸೇರಿದ ಸ್ವತ್ತಾಗಿರುವುದು. ಇದಕ್ಕೆ ೬೫ ಸಹಸ್ರ ರೂಪಾಯಿಗಳು ವೆಚ್ಚವಾಗಿರುವುದಲ್ಲದೆ ಅದರಲ್ಲಿ ೧೦ ಸಹಸ್ರ ರೂಪಾಯಿಗಳನ್ನು ಚಿತ್ರಕಲ್ಲುದುರ್ಗದ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಮುರಘಾರಾಜೇಂದ್ರ ಮಹಾಸ್ವಾಮಿಗಳು ದಯಪಾಲಿಸಿರುವರು. ಈ ಕಟ್ಟಡದ ವಿಚಾರದಲ್ಲಿ ನಮ್ಮ ಸಮಾಜದ ಹಿರಿಯರಲ್ಲೊಬ್ಬರಾದ ದಿವಾನ್ ಬಹದ್ದೂರ್ S. V. ಮೆಣಸಿನಕಾಯಿಯವರು ಅವಿರಳ ಪ್ರಯತ್ನಮಾಡಿರುವರು.

**ಅಸೋಶಿಯೇಶನ್ನಿನ ಅಧಿಕಾರಿ ಮಂಡಲ ೧೯೨೬.**

**ಫಂಡು ಸ್ಥಾಪಿಸಿದವರು.**

ಕೈ. ವಾ|| ರಾವಬಹದ್ದೂರ ಗುರುಸಿದ್ಧಪ್ಪನವರು ವೀರಬಸಪ್ಪನವರು ಗಿಲಗಿಂಚಿ, ಡಿ. ಡಿ. ಕಲೆಕ್ಟರ್, ಬೆಳಗಾಂವ.

ರಾವಬಹದ್ದೂರ್ ರುದ್ರಗೌಡರು ಚನವೀರಗೌಡರು ಅರ್ಟಾಳ ಆಯ್. ಎಸ್. ಓ. ರಿಟಾಯರ್ಡ ಡಿ. ಡಿ. ಕಲೆಕ್ಟರ, ಬೆಳಗಾಂವ.

**ಪ್ರಸಿಡೆಂಟ.**

ಮೆಹರ್ಬಾನ ಧಾರವಾಡ ಜಿಲ್ಲಾ ಕಲೆಕ್ಟರ ಸಾಹೇಬ ಬಹದ್ದೂರರವರು.

**ವ್ಹಾಯಿಸ ಪ್ರಸಿಡೆಂಟ.**

ಸರ್ದಾರ ಬಿ. ಬಿ. ಮಾಮ್ಲೇದೇಸಾಯಿ, ಹಂದಿಗನೂರ.

**ಮ್ಯಾನೇಜಿಂಗ ಕಮಿಟಿ ಮೆಂಬರರು.**

ದಿವಾನ್ ಬಹದ್ದೂರ ಶಾಂತವೀರಪ್ಪನವರು ವೀರಸಂಗಪ್ಪನವರು ಮೆಣಸಿನಕಾಯಿ, ರಿಟಾಯರ್ಡ ಡಿ. ಡಿ. ಕಲೆಕ್ಟರ, (ಚೇರಮನ್ನ)

ಮ|| ರಾ|| ಸಿ. ಕೆ. ಒಡೆಯರ, ಬಿ. ಎ. ಎಲ್. ಎಲ್. ಬಿ., ಹಾಯಕೋರ್ಟ ವಕೀಲ, ಧಾರವಾಡ (ಆನರರಿ ಸೆಕ್ರೆಟರಿ).

ಮ|| ರಾ|| ಕೆ. ಎಸ್. ಅಂಗಡಿ, ಎಲ್. ಸೀ. ಈ., ರಿಟಾಯರ್ಡ ಸಬ್ ಇಂಜಿನಿಯರ, ಧಾರವಾಡ.

ಮ|| ರಾ|| ಬಿ. ಎಸ್. ಹಂಚಿನಾಳ, ಬಿ. ಎ., ಕೆ. ಎಲ್. ಈ. ಎಸ್. ಹಾಯಸ್ಕೂಲ, ಧಾರವಾಡ.

ಮ|| ರಾ|| ಮೂಗಪ್ಪನವರು ಸವದತ್ತಿ, ಧಾರವಾಡ.

ರಾವಸಾಹೇಬ ಚನಬಸಪ್ಪನವರು ಸಿರಹಟ್ಟಿ, ಹುಬ್ಬಳ್ಳಿ.

ಮ|| ರಾ|| ಫಕೀರಪ್ಪನವರು ಭರ್ಮಪ್ಪನವರು ಲಕ್ಷ್ಮೇಶ್ವರ, ಕುರ್ತಕೋಟಿ.

---

## ಲಿಂಗಾಯತ ವಿದ್ಯಾವರ್ಧಕ ಸಂಘ ಹುಬ್ಬಳ್ಳಿ.

ಈ ಸಂಘವು ೨೭—೫—೧೯೧೯ರಲ್ಲು ಮುಂಬೈ ಕರ್ನಾಟಕದಲ್ಲಿ ದೊಡ್ಡನಗರವೂ, ವೀರಶೈವರ ಮುಖ್ಯವಸತಿಯೂ ಆದ ಹುಬ್ಬಳ್ಳಿಯಲ್ಲ ಸ್ಥಾಪಿಸಲ್ಪಟ್ಟಿತು. ಕೆಳಗೆ ಕಾಣಿಸಿದ ರೀತಿಯಿಂದ ವೀರಶೈವರಲ್ಲಿ ಎಲ್ಲಬಗೆಯ ವಿದ್ಯೆಯ ಪ್ರಸಾರವನ್ನು ಮಾಡುವದು ಈ ಸಂಘದ ಉದ್ದೇಶವಿರುತ್ತದೆ.

೧. ಯೋಗ್ಯ ವಿದ್ಯಾರ್ಥಿಗಳಿಗೆ ಪುಸ್ತಕಗಳನ್ನೂ ವೇತನ (Scholarships)ಗಳನ್ನೂ ಕೊಡುವದು;

೨. ವಿದ್ಯಾರ್ಥಿಗಳ ಅನುಕೂಲತೆಗಾಗಿ ಭೋಜನಾಲಯವನ್ನು ಸ್ಥಾಪಿಸುವದು;

೩. ಪುಸ್ತಕಾಲಯಗಳನ್ನೂ ವಾಚನಾಲಯಗಳನ್ನೂ ಸ್ಥಾಪಿಸುವದು;

೪. ಮಾತೃಭಾಷಾ ಪ್ರಸಾರಕ್ಕಾಗಿ ಪ್ರಾಥಮಿಕ ಶಾಲೆಗಳನ್ನೂ, ಆಂಗ್ಲ ಭಾಷಾ ಜ್ಞಾನಕ್ಕಾಗಿ ಮಾಧ್ಯಮಿಕ ಶಾಲೆಗಳನ್ನೂ, ಉಚ್ಚಶಿಕ್ಷಣದ ಸಲುವಾಗಿ ಮಹಾವಿದ್ಯಾಲಯಗಳನ್ನೂ, ಧರ್ಮಬೋಧಕ್ಕಾಗಿ ಪಾಠಶಾಲೆಗಳನ್ನೂ, ಸ್ತ್ರೀಶಿಕ್ಷಣಕ್ಕೋಸುಗ ಪ್ರತ್ಯೇಕ ಪ್ರಾಥಮಿಕ ಮಾಧ್ಯಮಿಕ ಶಾಲೆಗಳನ್ನೂ, ಮಹಾವಿದ್ಯಾಲಯಗಳನ್ನೂ ಸ್ಥಾಪಿಸಿ, ಅವರಿಗೆ ಉಪಯೋಗವಾಗುವ ವಿಷಯಗಳನ್ನು ಕಲಿಸುವಂತೆ ಏರ್ಪಾಡು ಮಾಡುವದು; ಸ್ತ್ರೀಶಿಕ್ಷಣಕ್ಕೆ ಹೆಚ್ಚು ಉತ್ತೇಜನ ಕೊಡುವದು;

೫. ಧರ್ಮಸುಧಾರಣೆಗೋಸ್ಕರ ಮಾಸಿಕ, ತ್ರೈಮಾಸಿಕ ಮುಂತಾದ ನಿಯತ ಕಾಲಿಕೆಗಳನ್ನು ಹೊರಡಿಸುವದು;

೬. ವಿದ್ಯಾಪ್ರಸಾರಕ್ಕೆ ಅನುಕೂಲವಾಗುವಂತೆ ಇನ್ನಾವದಾದರೂ ಉಪಾಯವನ್ನು ಕೈಗೊಳ್ಳುವದು.

ಪ್ರಕೃತದಲ್ಲಿ ಸಂಘದ ಮೂಲ ಧನವು ಸುಮಾರು ೨೫ ಸಾವಿರ ರೂಪಾಯಿಗಳಿದ್ದು ಅದರಿಂದುತ್ಪನ್ನವಾಗುವ ಬಡ್ಡಿಯೂ ಹುಬ್ಬಳ್ಳಿಯ ವರ್ತಕರಿಂದ ಮತ್ತು ಇತರ ಕಡೆಯ ಉದಾರ ಹೃದಯರಾದ ವೀರಶೈವ ಮಹನೀಯರಿಂದ ಕೊಡಲ್ಪಡುವ ಧರ್ಮಾದಾಯದ ಹುಟ್ಟುವಳಿಯೂ ವೀರಶೈವ ವಿಧ್ಯಾರ್ಥಿಗಳ ಮಾಸಿಕ ವೇತನದ ಬಗ್ಗೆ ವೆಚ್ಚಮಾಡಲ್ಪಡುತ್ತಿದೆ. ಈವರೆಗೆ ಸುಮಾರು ೨೦೦ ಜನ ವಿದ್ಯಾರ್ಥಿಗಳು ಸಂಘದ ವಸತಿಯಿಂದ ಸಹಾಯವನ್ನು ಪಡೆದಿರುತ್ತಾರೆ.

ಸಂಘದ ಭಾವೀ ಕಾರ್ಯಕ್ರಮದಲ್ಲಿ ಹುಬ್ಬಳ್ಳಿಯಲ್ಲಿ ಒಂದು ಕನ್ಯಾಶಾಲೆಯನ್ನು ಸ್ಥಾಪಿಸಬೇಕೆಂಬುದೊಂದು. ಈಗ ನಮ್ಮ ಹೆಣ್ಣು ಮಕ್ಕಳಿಗೆ ಶಾಲೆಗಳಲ್ಲಿ ದೊರೆಯುತ್ತಿರುವ ಶಿಕ್ಷಣದ ಬಹುಭಾಗವು ನಿರುಪಯುಕ್ತವಾದದ್ದಾಗಿದೆ. ಉಪಯುಕ್ತವಾದ ಕೆಲವು ಮಹತ್ವದ ವಿಷಯಗಳ ಜ್ಞಾನವು ಕೂಡ ಅವರಿಗೆ ಸೋಂಕದಾಗಿದೆ. ಆದ್ದರಿಂದ

ಹೆಣ್ಣುಮಕ್ಕಳಿಗೆ ಪ್ರಪಂಚದಲ್ಲಿ ಉಪಯೋಗ ಬೀಳುವಂಥ ಯಾವತ್ತು ವಿಷಯಗಳ ತಕ್ಕಷ್ಟು ಜ್ಞಾನವನ್ನು ಮಾಡಿಕೊಟ್ಟು, ಅವರನ್ನು ಭಾವೀ ಪೀಳಿಗೆಯ ಉತ್ತಮ ತಾಯಿಗಳನ್ನಾಗಿ ಮಾಡುವದು ಅತ್ಯವಶ್ಯಕ. ಈ ಕಾರ್ಯವು ವಿದ್ಯಾಖಾತೆಯ ಅಧಿಕಾರಿಗಳಿಂದಾಗಲಿ ಲೋಕಲ್ ಬೋರ್ಡು ಮತ್ತು ಮುನಿಸಿಪಾಲಿಟಿ ಮುಂತಾದ ಸ್ಥಾನಿಕ ಸಂಸ್ಥೆಗಳಿಂದಾಗಲಿ ಎಷ್ಟು ದಿವಸಗಳಲ್ಲಿ ಎಷ್ಟರಮಟ್ಟಿಗೆ ನೆರವೇರುವದೆಂಬುದು ಸಂಶಯಾಸ್ಪದ ಸಂಗತಿಯಾಗಿದೆ. ಈ ಕೆಲಸವನ್ನು ಸ್ವತಂತ್ರವಾದ ಸ್ಥಾನಿಕ ವಿದ್ಯಾಸಂಸ್ಥೆಯವರು ಕೈಕೊಳ್ಳುವದು ಅತ್ಯವಶ್ಯವೆಂಬುದೇ ಈ ಸಂಘದ ಅಭಿಮತವು.

ಇದಲ್ಲದೆ ವೀರಶೈವರ ಧರ್ಮವನ್ನೂ, ಧರ್ಮಾಚರಣೆಯನ್ನೂ ಕರತಲಾಮಲಕವಾಗಿ ಬೋಧಿಸುವ ಮಹತ್ವದ ಮತ ಗ್ರಂಥಗಳನ್ನು ಚಿಕ್ಕ ಆಕಾರದಲ್ಲಿ ಅಂದವಾಗಿ ಮುದ್ರಿಸಿ ತೀರ ಅಲ್ಪ ಬೆಲೆಗೆ ಮಾರುವದೂ, ಹಾಗೂ ಚಿಕ್ಕ ಬಾಲಕರಿಗಾಗಿ ಉಪದೇಶಪರವಾದ ಚಿಕ್ಕ ಚಿಕ್ಕ ಗ್ರಂಥಗಳನ್ನು ಪ್ರಕಟಿಸುವುದೂ ಸಂಘದ ಉದ್ದೇಶವಾಗಿದೆ.

### ಸಂಸ್ಥೆಯ ಪ್ರಕೃತ ಅಧಿಕಾರ ಮಂಡಲಿ.

**ಅಧ್ಯಕ್ಷರು.**

ನವಲಗುಂದದ ಶ್ರೀ ಬಸವಲಿಂಗ ದೇಶಿಕರು, ಹುಬ್ಬಳ್ಳಿ.

**ಉಪಾಧ್ಯಕ್ಷರು.**

ಶ್ರೀಯುತ|| ವೀರಪ್ಪ ಬಸವಪ್ಪ ಬಿಳಿ ಅಂಗಡಿ B.A., LL.B,
,, ಗುರಪ್ಪ ಬಡ್ಡಿ.

**ವ್ಯವಸ್ಥಾಪಕ ಮಂಡಲಿ.**

೧ ಡಾಕ್ಟರ ಚನ್ನಪ್ಪ ಸಂಗಪ್ಪ ಪಾಟೀಲ L. M. & S., (ಕಾರ್ಯಕಾರಿ ಅಧ್ಯಕ್ಷರು.)
೨ ಶ್ರೀಯುತ ಚಿಕ್ಕವೀರಯ್ಯ ಲಿಂ. ಚಿಕ್ಕವೀರಯ್ಯನವರ (ಗೌ. ಕಾರ್ಯದರ್ಶಿಗಳು).
೩ ,, ಚಂದ್ರಶೇಖರಪ್ಪ ಸಿ. ಕೆಂಪಣ್ಣನವರ (ಗೌ. ಸ. ಕಾರ್ಯದರ್ಶಿಗಳು).
೪ ,, ಗಂಗಾಧರಯ್ಯ ಉಳ್ಳೇಗಡ್ಡಿಮಠ.
೫ ,, ಗುರುಸಿದ್ಧಪ್ಪ ಮ. ಮಿರ್ಜಿ B.A., LL.B.
೬ ,, ವೀರನಗೌಡ ಬ. ಪಾಟೀಲ B.A., L.L.B.
೭ ,, ಗದಿಗೆಪ್ಪ ಶಿ. ಕುಸುಗಲ್ಲ.
೮ ,, ಪರ್ವತಪ್ಪ ಮಿರ್ಜಿ.
೯ ,, ಗುರಪ್ಪ ಕಾ ಇರಪಣ್ಣನವರ.
೧೦ ,, ವೀರಪ್ಪ ಹೊಸಕೋಟಿ.
೧೧ ,, ಸಿದ್ಧಪ್ಪ ಮಂಟೂರ ಸೆಟ್ಟರ.
೧೨ ,, ವಿರೂಪಾಕ್ಷಪ್ಪ ಚ. ಬ್ಯಾಳಿ.
೧೩ ,, ಗುರುಸಿದ್ದಪ್ಪ ಗಂ. ಭೂಸನವರ.
೧೪ ,, ಸಿ. ಫ. ಕಟ್ಟೀಮನಿ.
೧೫ ,, ಚನ್ನಪ್ಪ ಅರಳೀಕಟ್ಟಿ.
೧೬ ,, ಕರವೀರಪ್ಪ ಯಾವಗಲ್ಲ.

**ಲೆಕ್ಕ ಪರೀಕ್ಷಕರು.**

ಶ್ರೀಯುತ|| ವಿರೂಪಾಕ್ಷಪ್ಪ ಅ. ಸೆಟ್ಟರ.

ಈ ಕೆಳಗೆ ಕಂಡ ಎರಡು ಸಂಸ್ಥೆಗಳು ಸಂಘದ ವತಿಯಿಂದ ನೆಡೆಸಲ್ಪಡುತ್ತಿರುವುವು :—

### ೧ ವೀರಶೈವ ವಿದ್ಯಾರ್ಥಿಗಳ ವಸತಿ ಗೃಹ, ಹುಬ್ಬಳ್ಳಿ.

ಹುಬ್ಬಳ್ಳಿ ಲಿಂಗಾಯತ ವಿದ್ಯಾವರ್ಧಕ ಸಂಘದವರಿಂದ ನಡೆಸಲ್ಪಡುತ್ತಿರುವ ಈ ವಸತಿಗೃಹವು ಪಟ್ಟಣದ ಮಧ್ಯದಲ್ಲಿರುವ ಓಲಿಯ ಮಠದಲ್ಲಿ ಸ್ಥಾಪಿಸಲ್ಪಟ್ಟಿರುತ್ತದೆ. ಅತಿ ಭವ್ಯವಾದ ಈ ಕಟ್ಟಡವು **ಶ್ರೀ ಮೂರುಸಾವಿರಮಠದ ಜಗದ್ಗುರುಗಳವರ ಮಹಾಸನ್ನಿಧಿ**ಯಿಂದ ಧರ್ಮಾರ್ಥವಾಗಿ ಉಪಯೋಗಿಸಿಕೊಳ್ಳಲಿಕ್ಕೆ ತಾರೀಖು ೧-೧೧-೧೯೧೯ನೆಯ ದಿವಸ ಸಂಘಕ್ಕೆ ದೊರೆತಿರುತ್ತದೆ. ಕಳೆದ ವರ್ಷ ವಿದ್ಯಾರ್ಥಿಗಳಿಗೆ ಇರಲಿಕ್ಕೆ ಹೆಚ್ಚು ಅನುಕೂಲವಾಗಬೇಕೆಂದು ಶ್ರೀ ಮೂರುಸಾವಿರ ಮಠದ ವ್ಯವಸ್ಥಾಪಕ ಸಭೆಯವರು ಮೂರುಸಾವಿರ ರೂಪಾಯಿಗಳನ್ನು ವೆಚ್ಚಮಾಡಿ ಕಟ್ಟಡದಲ್ಲಿ ಒಳ್ಳೇಸುಧಾರಣೆಯನ್ನು ಮಾಡಿಕೊಟ್ಟಿದ್ದಾರೆ. ವಿದ್ಯಾರ್ಥಿಗಳ ಸಂಖ್ಯೆಯು ಬೆಳೆಯುತ್ತ ನಡೆದಿರುವುದರಿಂದ ಸ್ಥಳಸಂಕೋಚದನಿಮಿತ್ತ ಮಠದ ವ್ಯವಸ್ಥಾಪಕ ಸಭೆಯವರು ೪,೫೬೦ ರೂಪಾಯಿಗಳನ್ನು ವೆಚ್ಚ ಮಾಡಿ ಕಟ್ಟಡವನ್ನು ಬಡಾವಣೆ ಮಾಡುವವರಾಗಿದ್ದಾರೆ.

ಈ ವಸತಿ ಗೃಹದಲ್ಲಿ ಸಾಧಾರಣವಾಗಿ ೫೫ ರವರೆಗೆ ವಿದ್ಯಾರ್ಥಿಗಳು ಇರುತ್ತಲಿದ್ದಾರೆ. ಬಡ ವಿದ್ಯಾರ್ಥಿಗಳಿಗೆ ದೀವಿಗೆಯ ವ್ಯವಸ್ಥೆಯನ್ನೂ ಪುಸ್ತಕಗಳ ಪೂರೈಕೆಯನ್ನೂ ಮಾಡಿಕೊಡುವದಲ್ಲದೆ ಶಾಲೆಯ ಯಾವತ್ತು ಫೀಯನ್ನು ಕೊಡುತ್ತ ಬಂದಿರುತ್ತದೆ. ವಿದ್ಯಾರ್ಥಿಗಳ ನಡತೆಯ ವಿಷಯದಲ್ಲಿಯೂ ಆಚರಣೆಯ ವಿಷಯದಲ್ಲಿಯೂ ಹೆಚ್ಚಾಗಿ ಲಕ್ಷ್ಯವನ್ನು ಕೊಡುತ್ತ ಬಂದದೆ.

ಈ ವಸತಿ ಗೃಹದೊಳಗಿನ ಯಾವತ್ತು ವಿದ್ಯಾರ್ಥಿಗಳಿಗೆ **ಶ್ರೀ ಜಗದ್ಗುರುಗಳವರ ಮೂರುಸಾವಿರ ಮಹಾಮಠದ ದಾಸೋಹ**ದಲ್ಲಿ ಪ್ರವೇಶವು ದೊರೆಯುತ್ತಲಿದೆ.

### ೨ ಧರ್ಮಾರ್ಥ ವಾಚನಾಲಯ, ಹುಬ್ಬಳ್ಳಿ.

ಬೆಳಗಾವಿಯ **ಶ್ರೀ. ಬಿ. ಎಸ್. ಹಂಚಿನಾಳ, B.A.,** ಧಾರವಾಡದ **ಶ್ರೀ. ಹು. ಫ. ಕಟ್ಟೀಮನಿ, B.A ,** ಈ ಮೊದಲಾದವರು ಹುಬ್ಬಳ್ಳಿಯಲ್ಲಿ ಹೈಸ್ಕೂಲ್ ವಿದ್ಯಾರ್ಥಿಗಳಾಗಿದ್ದಾಗ **'ವೀರಶೈವ ಸ್ಟೂಡೆಂಟ್ಸ ಲಾಯಬ್ರರಿ'** ಎಂಬ ಹೆಸರಿನಿಂದ ಶ್ರೀ ಮೂರುಸಾವಿರ ಮಠದಲ್ಲಿ ಸ್ಥಾಪಿಸಿದ ವಾಚನಾಲಯವನ್ನು ೧೯೨೦ನೇ ಇಸವಿಯಲ್ಲಿ ಹುಬ್ಬಳ್ಳಿ ಲಿಂಗಾಯತ ವಿದ್ಯಾ ವರ್ಧಕ ಸಂಘದವರು ತಮ್ಮ ವಶಕ್ಕೆ ತೆಗೆದುಕೊಂಡು, ಅದಕ್ಕೆ ಧರ್ಮಾರ್ಥ ವಾಚನಾಲಯವೆಂಬ ಹೊಸ ಹೆಸರನ್ನು ಕೊಟ್ಟಿದ್ದಾರೆ. ಕಳೆದ ೬ ವರ್ಷದಲ್ಲಿ ಇದು ಹೆಚ್ಚಾಗಿ ಅಭಿವೃದ್ಧಿಯನ್ನೈದಿರುವದು.

---

### ತೋಂಟದಾರ್ಯ ಸಂಸ್ಕೃತ ಪಾಠಶಾಲಾ, ಶ್ರೀ ತೋಂಟದಾರ್ಯ ಮಠ, ಗದಗ.

ಲಿಂಗೈಕ್ಯರಾದ ಶ್ರೀಮನ್ನಿರಂಜನ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳಿಂದ ೪೦ ವರ್ಷಗಳ ಕೆಳಗೆ ಸ್ಥಾಪಿಸಲ್ಪಟ್ಟಿತು.

ಮಹಾಸ್ವಾಮಿಗಳವರು ಶಾಲೆಯ ಸಲವಾಗಿ ಹತ್ತು ಸಹಸ್ರ ರೂಪಾಯಿಗಳ ಮೂಲಧನವನ್ನಿಟ್ಟಿರುವರು. ಸದ್ಯಕ್ಕೆ ಪಾಠಶಾಲೆಯ ವ್ಯವಸ್ಥೆಯನ್ನು ಧಾರವಾಡದ ಲಿಂಗಾಯತ ಎಜ್ಯುಕೇಶನ್ ಅಸೋಸಿಯೇಷನ್‌ಯವರು ನಡೆಸುತ್ತಿರುವರು. ಶಾಲೆಯಲ್ಲಿ ಸುಮಾರು ೧೨ ಜನ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದು, ಅವರ ಊಟದ ಏರ್ಪಾಟು ಮಠದಲ್ಲಿಯೇ ನಡೆಯುತ್ತಿದೆ.

---

## ಜಗದ್ಗುರು ತೋಂಟದಾರ್ಯ ಫ್ರೀ ಬೋರ್ಡಿಂಗ್,

### ಶ್ರೀ ತೋಂಟದಾರ್ಯ ಮಠ, ಗದಗ.

ಶ್ರೀ ಜಗದ್ಗುರು ತೋಂಟದಾರ್ಯರಿಂದ ಪ್ರಾರಂಭಿಸಲ್ಪಟ್ಟಿತು. ಆಂಗ್ಲ ಮತ್ತು ಸಂಸ್ಕೃತ ಭಾಷೆಗಳನ್ನು ಅಭ್ಯಾಸ ಮಾಡುತ್ತಿರುವ ೫೦ ಜನ ವಿದ್ಯಾರ್ಥಿಗಳಿಗೆ ಊಟದ ಮತ್ತು ವಾಸದ ಏರ್ಪಾಡು ಮಾಡಲ್ಪಟ್ಟಿದೆ. ಗದಗಿನ ವೀರಶೈವ ವರ್ತಕಮಂಡಲಿಯವರು ತಮ್ಮ ಧರ್ಮಾದಾಯವನ್ನು ಈ ಸಂಸ್ಥೆಗೆ ಕೊಡುತ್ತಿದ್ದಾರೆ. ಬೋರ್ಡಿಂಗಿನ ವ್ಯವಸ್ಥೆಯ ಬಗ್ಗೆ ಶ್ರೀಯುತ ಹುಬ್ಬಳ್ಳಿ ಶಾಂತಪ್ಪನವರ ಅಧ್ಯಕ್ಷತೆಯಲ್ಲಿ ಒಂದು ಮ್ಯಾನೇಜಿಂಗ್ ಕಮಿಟಿಯು ಏರ್ಪಾಟಾಗಿದೆ.

---

## ಮುಕ್ಕಾಲು ಬಸವೇಶ್ವರ ಜ್ಯೋತಿಷ ಪಾಠಶಾಲಾ,

### ಗದಗ.

ಗದಗಿನ ವರ್ತಕ ಮಂಡಲಿಯವರ ಸಹಾಯದಿಂದ ನಡೆಯುತ್ತಿದೆ. ವ್ಯವಸ್ಥಾಪಕ ಸಮಿತಿಯ ಅಧ್ಯಕ್ಷರಾದ ವೇ|| ತೋಟಯ್ಯ ಶಾಸ್ತ್ರಿ ತಂಮರಹಳ್ಳಿ ಇವರೇ ಮುಖ್ಯಾಧ್ಯಾಪಕರಾಗಿರುತ್ತಾರೆ. ಸುಮಾರು ೧೨ ಜನ ಬಾಲಕರು ಅಭ್ಯಾಸ ಮಾಡುತ್ತಿರುವರು.

---

## ಹಾಂಸಭಾವಿ ವೀರಶೈವ ವಿದ್ಯಾವರ್ಧಕ ಸಂಘ

### ಹಾಂಸಭಾವಿ.

ದಾವಣಗೆರೆಯ ಪ್ರಣವಸ್ವರೂಪಿಗಳಾದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳವರ ಪ್ರೋತ್ಸಾಹದಿಂದ ೧೯೧೮ನೆ ಜೂನ್ ತಿಂಗಳಲ್ಲಿ ಈ ಸಂಘವು ಹಾಂಸಭಾವಿಯಲ್ಲಿ ಸ್ಥಾಪಿಸಲ್ಪಟ್ಟಿತು.—ಧಾರವಾಡ ಜಿಲ್ಲೆಯ ಹಿರಿಕೆರೂರ್ ತಾಲೋಕಿನ ವೀರಶೈವರಲ್ಲಿ ವಿದ್ಯಾಪ್ರಸಾರಮಾಡುವುದೇ ಸಂಘದ ಮುಖ್ಯೋದ್ದೇಶವು.

ಸಂಘವು ಸುಮಾರು ೩,೫೦೦ ರೂಪಾಯಿಗಳ ಮೂಲಧನವನ್ನು ಶೇಖರಿಸಿರುವುದಲ್ಲದೆ, ಮುಷ್ಟಿಫಂಡ್, ಧಾನ್ಯಭಿಕ್ಷೆ, ವರ್ಷಾಶನ, ಧರ್ಮಾದಾಯ ಇವುಗಳನ್ನು ತಾಲ್ಲೋಕಿನ ವೀರಶೈವ ಗೃಹಸ್ಥರಿಂದ ವಸೂಲುಮಾಡಿ ಹಾಂಸಭಾವಿಯಲ್ಲಿ ಶ್ರೀ ಮೃತ್ಯುಂಜಯ ಎ. ವಿ. ಸ್ಕೂಲನ್ನೂ ಮತ್ತು ಮೃತ್ಯುಂಜಯ ಫ್ರೀ ಬೋರ್ಡಿಂಗನ್ನೂ ನಡೆಸುತ್ತಿರುವರು.

### ಸಂಘದ ಅಧಿಕಾರ ಮಂಡಲಿ.

**ಅಧ್ಯಕ್ಷರು.**

ಶ್ರೀ ರಾಮಪ್ಪ ಬಸಪ್ಪ ಬೆಟಗೇರಿ, ಬ್ಯಾಡಗಿ,

**ಖಜಾಂಚಿ.**

ಶ್ರೀ ಚನವೀರಪ್ಪ ಎಲಿ, ತಿಳುವಳ್ಳಿ.

**ಜನರಲ್ ಸೆಕ್ರೆಟರಿಗಳು.**

ಶ್ರೀ ಚನವೀರಪ್ಪಾ ಬಳಗಾನೂರ.
ಶ್ರೀ ಸೋಮಪ್ಪ, ಹುಚ್ಚಗೊಂಡರ.

### ಸಂಘದ ಮ್ಯಾನೇಜಿಂಗ ಕಮಿಟಿ.

೧ ಶ್ರೀ ಪುಟ್ಟಪ್ಪಾ ಅಜ್ಜಪ್ಪಾ ಮಂಡಕ್ಕಿ.
೨ ,, ಬಸಲಿಂಗಪ್ಪಾ ಚನವೀರಪ್ಪಾ ಇಟಗಿ.
೩ ,, ಮಹದೇವಪ್ಪಾ ಚನ್ನಪ್ಪಾ ಕೆರೂಡಿ.
೪ ,, ಹೊಳಿಬಸಪ್ಪಾ ಚನ್ನಪ್ಪಾ ಕಡಗಿ.
೫ ,, ಲಿಂಗಪ್ಪಾ ಬಸಲಿಂಗಪ್ಪಾ ಹುಚ್ಚಗೊಂಡರ.
೬ ,, ವೀರಪ್ಪಾ ಹುಚ್ಚಪ್ಪಾ ನೆಲಿವಿಗಿ.
೭ ,, ಸೋಮಪ್ಪಾ ಶಿವಪ್ಪಾ ಹುಚ್ಚಗೊಂಡರ.
೮ ,, ಲಿಂಗಪ್ಪಾ ವಿರಬಸಪ್ಪಾ ಮಲ್ಲಜ್ಜಿ.
೯ ,, ಗೂಳಪ್ಪ ಬಸಪ್ಪ ದೊಡ್ಡಕಳ್ಳಿ.

## ೧ ಮೃತ್ಯುಂಜಯ ಎ. ವಿ. ಸ್ಕೂಲ,

### ಹಾಂಸಭಾವಿ.

ಹಾಂಸಭಾವಿ ವೀರಶೈವವಿದ್ಯಾವರ್ಧಕ ಸಂಘದವರಿಂದ ೧-೩-೧೯೧೯ರಲ್ಲು ಪ್ರಾರಂಭ ಮಾಡಲ್ಪಟ್ಟಿತು. ಶಾಲೆಯು ಸದ್ಯದಲ್ಲಿ ಹಾಂಸಭಾವಿಯ ಶ್ರೀ ವೀರಭದ್ರದೇವಾಲಯ ಮತ್ತು ಅದರ ಪಾರ್ಶ್ವದಲ್ಲಿರುವ ತಾತ್ಕಾಲಿಕ ಕಟ್ಟಡದಲ್ಲಿ ನಡೆಯುತ್ತಿರುವುದು.—ಮುಂಬೈ ಸರ್ಕಾರದವರು ವರ್ಷಒಂದಕ್ಕೆ ರೂ. ೪೦೦ ಸಹಾಯಧನವನ್ನು ಶಾಲೆಗೆ ಕೊಡುತ್ತಿರುವರು. ಸದ್ಯ ಸ್ಕೂಲಿನಲ್ಲಿ ನಾಲ್ಕು ಇಯತ್ತೆಗಳಿದ್ದು ಸುಮಾರು ಐವತ್ತು ಜನ ವಿದ್ಯಾರ್ಥಿಗಳು ಕಲಿಯುತ್ತಿರುವರು. ಸ್ಕೂಲಿನ ಕೆಲಸ ಕಾರ್ಯಗಳು ಸಂಘದ ವತಿಯಿಂದ ನಿಯಮಿಸಲ್ಪಟ್ಟ ಐದು ಜನಗಳುಳ್ಳ ಕಮಿಟಿಯವರಿಂದ ನಡೆಸಲ್ಪಡುತ್ತಿರುವುವು.

## ೨ ಮೃತ್ಯುಂಜಯ ಫ್ರೀ ಬೋರ್ಡಿಂಗ್,

### ಹಾಂಸಭಾವಿ.

ಹಾಂಸಭಾವಿ ವೀರಶೈವವಿಧ್ಯಾವರ್ಧಕ ಸಂಘದ ವತಿಯಿಂದ ಅನಾಥರೂ ನಿರ್ಧನರೂ ಆದ ವಿದ್ಯಾರ್ಥಿಗಳ ಸಲವಾಗಿ ೧೯೨೦ನೇ ಮೇ ತಿಂಗಳಲ್ಲಿ ಸ್ಥಾಪಿತವಾಯಿತು. ಈ ಬೋರ್ಡಿಂಗಿನ ಸಹಾಯವಾಗಿ ಹಾಂಸಭಾವಿಯ ವೀರಶೈವಗೃಹಸ್ಥರು, ಪ್ರತಿ ವರ್ಷ ೪೦ ಪಲ್ಲಾ ಕಾಳನ್ನು ಕೊಡುತ್ತಿರುವರು. ಅಲ್ಲದೆ ತಾಲ್ಲೋಕಿನ ಅನೇಕ ಕಡೆಗಳಲ್ಲಿ ಧಾನ್ಯಬಿಕ್ಷೆ, ದರ್ಮಾದಾಯ ಇವುಗಳ ವರಮಾನವೂ ಇರುವುದು. ಶೀಘ್ರದಲ್ಲಿ ಬೋರ್ಡಿಂಗಿನ ಸಲವಾಗಿ ಒಂದು ಸ್ವಂತ ಕಟ್ಟಡವು ತಯಾರಾಗುವ ಸಂಭವವಿರುವುದು. ಸದ ಬೋರ್ಡಿಂಗಿನಲ್ಲಿ ೩೫ ಜನ ವಿಧ್ಯಾರ್ಥಿಗಳ ಅಶನ ವಸತಿಗಳ ಮತ್ತು ವಾಸದ



ಬೆಳಗಾವಿ ಕರ್ನಾಟಕ ಲಿಂಗಾಯತ ಎಜ್ಯುಕೇಶನ್ ಸೊಸೈಟಿಯ ಆಜೀವ ಸಭಾಸದರು.

ಏರ್ಪಾಡುಗಳನ್ನು ಮಾಡಲಾಗಿರುವದು ಬೋರ್ಡಿಂಗಿನ ಕೆಲಸ ಕಾರ್ಯಗಳು ಸಂಘದ ವತಿಯಿಂದ ನೇಮಕವಾದ ೯ ಜನಗಳ ಒಂದು ಕಮಿಟಿಯಿಂದ ನೆಡೆಸಲ್ಪಡುತ್ತಿರುವವು.

## ಶ್ರೀ ಗುದ್ದಲೀ ಸ್ವಾಮಿ ವೀರಶೈವ ಸಮಾಜೋತ್ಕರ್ಷಕ ಸಂಘ.

### ಹೊಸರಿತ್ತಿ—ಜಿ|| ದಾರವಾಡ.

ಶ್ರೀ ಮನ್ನಿರಂಜನ ಶ್ರೀ ಗುದ್ದಲೀಸ್ವಾಮಿಗಳ ಪ್ರೋತ್ಸಾಹದಿಂದ ತಾ ೨೨-೮-೨೦ರಲ್ಲಿ ಈ ಸಂಘವು ಸ್ಥಾಪಿಸಲ್ಪಟ್ಟಿತು. ಶ್ರೀಮಂತ ಸರದಾರ ಬಿ. ಬಿ. ಮಾಮಲೇ ದೇಶಾಯಿ ಹಂದಿಗನೂರು ಇವರ ಸಹಾನುಭೂತಿಯಿಂದ ಈಗಾಗಲೆ ಸುಮಾರು ೧೦ ಸಹಸ್ರ ರೂಪಾಯಿಗಳಿಗೆ ಮೇಲ್ಪಟ್ಟ ನಿಧಿಯು ಶೇಖರಿಸಲ್ಪಟ್ಟು, ೯-೫-೧೯೨೪ರಲ್ಲಿ ಹೊಸರಿತ್ತಿಯಲ್ಲಿ ಒಂದು ಎ. ವ್ಹಿ. ಸ್ಕೂಲ್ ಸ್ಥಾಪಿಸಲ್ಪಟ್ಟಿತು. ಶಾಲೆಯಲ್ಲಿ ಸದ್ಯ ಸುಮಾರು ೪೦ ಜನ ಬಾಲಕರು ವಿದ್ಯಾಭ್ಯಾಸ ಮಾಡುತ್ತಿರುವರು. ಸಂಘದ ವ್ಯವಸ್ಥಾಪಕ ಮಂಡಲವು ಕೆಳಗೆ ಕೊಡಲ್ಪಟ್ಟಿದೆ.

**ಅಧ್ಯಕ್ಷರು.**

ಶ್ರೀಮಂತ ಸರದಾರ ಬುಳ್ಳಪ್ಪ ಬಸವಂತರಾವ, ಮಾಮಲೇ ದೇಸಾಯಿ, ಹಂದಿಗನೂರ.

**ಉಪಾಧ್ಯಕ್ಷರು.**

ಶ್ರೀ|| ಸಂಣವಿರುಪಾಕ್ಷಪ್ಪನವರು ಕಲಕೋಟ.

**ಕಮಿಟಿ ಮೆಂಬರರು.**

೧ ವೇ|| ಗುದ್ಲೆಪ್ಪ ಶಾಸ್ತ್ರಿಗಳು, ಚನ್ನೂರ.
೨ ಶ್ರೀ ಮಂತ ಎಮ್. ಬಿ. ದೇಸಾಯಿ, ಹಂದಿಗನೂರ.
೩ ಶ್ರೀಯುತ ದೊಡ್ಡವಿರುಪಾಕ್ಷಪ್ಪ, ಕಲಕೋಟ.
೪ ಪುಟ್ಟಪ್ಪ ಯಗಟಿ, ಹೊಸರಿತ್ತಿ.
೫ ಸಂಗಪ್ಪ, ಹಳ್ಳಿಕೇರಿ.

## ವೀರಶೈವ ತರುಣ ಸಂಘ.

### ಹುನಗುಂದ.

ಶ್ರೀ ಮಂತ ಸರ್ ದೇಶಾಯಿ ರಕ್ಕಸಗಿ M. L. C. ಯವರ ಪ್ರೋತ್ಸಾಹದಿಂದ ಹುನಗುಂದದ ಕೆಲವು ಸದ್ಗೃಹಸ್ಥರು ಈ ಸಂಘವನ್ನು ೭-೧-೧೯೨೧ರಲ್ಲಿ ಸ್ಥಾಪಿಸಿದರು. ಪೈಸಾಫಂಡ್, ವಾರ್ಷಿಕ ವರ್ಗಣಿ, ಮೊದಲಾದ ಬಾಬುಗಳಿಂದ ಸಂಘಕ್ಕೆ ಸುಮಾರು ರೂ. ೭೦೦ ವಾರ್ಷಿಕ ಆದಾಯವಿರುವುದು. ಸಂಘದವರ ಆಡಳಿತದಲ್ಲಿ ಈ ಕೆಳಗೆ ಕಂಡ ಸಂಸ್ಥೆಗಳು ನೆಡೆಸಲ್ಪಡುತ್ತಿರುವುವು.

೧ ಶ್ರೀ ಮಹಾಂತೇಶ ಸಂಸ್ಕೃತ ಪಾಠಶಾಲಾ.
೨ ,, ಮಹಾಂತೇಶ ಉಚಿತ ಭೋಜನಾಲಯ.
೩ ,, ಮೃತ್ಯುಂಜಯ ಮುಫತ್ ವಾಚನಾಲಯ.
೪ ,, ಘನಮಠೇಶ ಉಪವನ.
೫ ,, ಬಸವೇಶ್ವರ ಭಜನಾ ಸಂಘ.
೬ ,, ಷಡಕ್ಷರಾರ್ಯ ವಕ್ತೃತ್ವ ಸಂಘ.
೭ ,, ದೇಶಭಕ್ತ ಹರ್ಡೀಕರ್ ವ್ಯಾಯಾಮಶಾಲಾ,
೮ ಕೈ|| ವಾರದ ಮಲ್ಲಪ್ಪನವರ ಧರ್ಮಪ್ರಸಾರ ಸಂಘ.

ಪ್ರಕೃತದಲ್ಲಿ ಸಂಘದವತಿಯಿಂದ ಸುಮಾರು ೨೦ ಜನ ವಿದ್ಯಾರ್ಥಿಗಳು ಉಪಯೋಗ ಹೊಂದುತ್ತಿರುವರು.

**ಸಂಘದ ಅಧಿಕಾರಿಮಂಡಲ.**

**ಅಧ್ಯಕ್ಷರು.**

ಶ್ರೀಮಂತ ಸಂಗಪ್ಪ ಸರ್ ದೇಶಾಯಿ ರಕ್ಕಸಗಿ, M. L. C.

**ಕಾರ್ಯದರ್ಶಿಗಳು.**

ಮ ರಾ|| ಬಸವಶೆಟ್ಟಪ್ಪ, ಬಳುಟಗಿ.
,, ಶಿವಬಸಪ್ಪ, ಮೆಳ್ಳಿಗೇರಿ.

## ಅಖಿಲ ಭಾರತೀಯ ಗುರುವರ್ಗೋತ್ತೇಜಕ ಸಂಘ,

### ಕುಂದಗೋಳ, (ಜಮುಖಂಡಿ).

ವೀರಶೈವರ ಪ್ರಾಚೀನ ಮತಗ್ರಂಥಗಳನ್ನು ಶೋಧಿಸಿ, ಅಚ್ಚು ಹಾಕಿಸುವ, ಹಾಗೂ ಪ್ರಾಚೀನ ಗ್ರಂಥಗಳ ಸಾರಭೂತವಾದ ಸುಲಭ ಪುಸ್ತಕಗಳನ್ನು ಕನ್ನಡದಲ್ಲಿ ಪ್ರಕಟಿಸುವ ಉದ್ದೇಶದಿಂದ ಈ ಸಂಘವು ಸ್ಥಾಪಿಸಲ್ಪಟ್ಟಿರುವುದು. ಕುಂದಗೋಳದ ಪಂಚಗೃಹ ಹಿರೇಮಠದ ಚರಮೂರ್ತಿ ಸ್ವಾಮಿಗಳು ಅಧ್ಯಕ್ಷರೂ, ಶ್ರೀಯುತ ಯಲ್ಲಪ್ಪ ಎಲಿವಾಲ ಇವರು ಕರ್ಮಸಚಿವರೂ ಆಗಿರುತ್ತಾರೆ.

ಸಂಘದವರಿಂದ ಈ ಕೆಳಗೆ ಕಂಡ ಚಿಕ್ಕ ಚಿಕ್ಕ ಪುಸ್ತಕಗಳು ಆಗಲೇ ಪ್ರಕಟಿಸಲ್ಪಟ್ಟವೆ.

ವೀರಶೈವಾಚಾರ ವಿಧಿ.
ಮಾಹೇಶ್ವರ ದೀಕ್ಷಾವಿಧಿ.
ಪಂಚಾಚಾರ್ಯ ಮಂಗಳ ಸ್ತೋತ್ರಾವಳಿ.
ಪಂಚಾಚಾರ್ಯರುಗಳ ನಾಮಾವಳಿಗಳು.
ವೀರಶೈವ ಸಮಾಜವು ಆರ್ಯ ಸಮಾಜವೋ?
ಇತ್ಯಾದಿ.

## ಕರ್ನಾಟಕ ಲಿಂಗಾಯತ ಎಜುಕೇಶನ್ ಸೊಸೈಟಿ,

### ಬೆಳಗಾಂ.

ಈ ಸಂಸ್ಥೆಯು ನಮ್ಮ ಸಮಾಜದ ವೃದ್ಧಪಿತಾಮಹರಾದ ರಾವ್ ಬಹದ್ದೂರ್ ಆರ್. ಸಿ. ಆರ್ಟಾಳ ಆಯ್. ಎಸ್. ಓ. ಯವರ ಅಧ್ಯಕ್ಷತೆಯಲ್ಲಿ ೫ನೆ ನವಂಬರ್ ೧೮೮೩ರಲ್ಲಿ, ಬೆಳಗಾವಿಯಲ್ಲಿ ಸ್ಥಾಪಿತವಾಯಿತು. "ಕರ್ನಾಟಕದ ಮುಖ್ಯಮುಖ್ಯ ಸ್ಥಾನಗಳಲ್ಲಿ—ಪ್ರಾಮುಖ್ಯವಾಗಿ, ಧಾರವಾಡ, ಬೆಳಗಾವಿ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಶಾಲೆಗಳನ್ನು ಸ್ಥಾಪಿಸುವುದು; ವಿದ್ಯಾಭ್ಯಾಸದ ಅಭ್ಯುದಯಕ್ಕೆ ಸಹಕಾರಿಯಾದ ಬೇರೆಬೇರೆ ವಿಧ ಕಾರ್ಯಗಳನ್ನು ಕೈಗೊಳ್ಳುವುದು; ಆಗಲೇ ಸ್ಥಾಪಿತವಾಗಿರುವ ಶಾಲೆಗಳನ್ನು ಸಂಸ್ಥೆಗೆ ಸೇರಿಸಿಕೊಳ್ಳುವುದು." ಇವೇ ಈ ಸಂಸ್ಥೆಯ ಮುಖ್ಯೋದ್ದೇಶಗಳು. ಈ ಸಂಸ್ಥೆಗೆ ಹೆಚ್ಚಿಗೆ ಸಹಾಯ ಮಾಡಿರುವ ಮಹನೀಯರ ಹೆಸರುಗಳು ಈ ಕೆಳಗೆ ಕೊಡಲ್ಪಟ್ಟಿರುವವು.

ಶ್ರೀಮಂತ ಸರದಾರ್ ಲಖಮನ ಗೌಡಾ ಬಸವಪ್ರಭು ಸರ್ ದೇಶಾಯಿ, ಸಿ.ಐ.ಇ., ಬಾರಟ್ಲಾ, ವಂಟಮುರಿ— ರೂ. ೨೦,೦೦೦ ವಾಗ್ದಾನ ಮಾಡಿರುವರು.

ಸರದಾರ್ ವೀರಭದ್ರಪ್ಪ ಗುಣಪ್ಪನಾಯಿಕ ಬಹದ್ದೂರ್, ದೇಶಾಯಿ, ಚಚಡಿ—ರೂ. ೫,೦೦೦ ಕೊಟ್ಟಿರುವರು.

ಸರದಾರ್ ಬುಳ್ಳಪ್ಪ ಬಸವಂತರಾವ್ ಮಾಮಲೇ ದೇಸಾಯಿ ಹಂದಿಗನೂರು....ರೂ. ೫,೦೦೦ ಕೊಟ್ಟಿರುವರು.

ಶ್ರೀಯುತ ಚನ್ನಪ್ಪಣ್ಣಾ ಮಿರ್ಜಿ, ಸರಗುಂದ....ರೂ. ೫,೦೦೦ ಕೊಟ್ಟಿರುವರು.

ಪ್ರಕೃತದಲ್ಲಿ ಸಂಸ್ಥೆಯು ಬೆಳಗಾವಿಯಲ್ಲಿ ಕಟ್ಟಡಕ್ಕೆ ಯೋಗ್ಯವಾದ ಖಾಲೀ ನಿವೇಶನವನ್ನು ರೂ. ೩೨,೦೦೦ ಬೆಲೆಗೆ ಕೊಂಡುಕೊಂಡಿರುವರು. ಕಟ್ಟಡದ ಸಲುವಾಗಿ ೩೦,೦೦೦ ರೂಪಾಯಿಗಳನ್ನು ಬ್ಯಾಂಕಿನಲ್ಲಿ ಕಾದಿಡಲಾಗಿದೆ. ಇದಲ್ಲದೆ ಧಾರವಾಡದಲ್ಲಿರುವ ಸೊಸೈಟಿ ಹೈಸ್ಕೂಲಿನ ಕಟ್ಟಡಕ್ಕಾಗಿ ೨೦ ಸಹಸ್ರ ರೂಪಾಯಿಗಳೂ, ಒಟ್ಟು ಸಂಸ್ಥೆಯ ಪರವಾಗಿ ೩೦ ಸಹಸ್ರ ರೂಪಾಯಿಗಳೂ ಲೇವಣಾತಿಯಿರುವುದು. ಸಂಸ್ಥೆಯ ಜಂಗಮ ಆಸ್ತಿಯೂ ಸುಮಾರು ೩೦ ಸಹಸ್ರ ರೂಪಾಯಿ ಇರುವುದು.

ಸದ್ಯಕ್ಕೆ ಕರ್ನಾಟಕವು ಉಚ್ಚ ಶಿಕ್ಷಣದಲ್ಲಿ ಹೆಚ್ಚು ಪ್ರಗತಿಯನ್ನು ಹೊಂದಿ, ಕರ್ನಾಟಕಸ್ಥರ ಬೇಡಿಕೆಯಾದ ಕರ್ನಾಟಕ ವಿಶ್ವವಿದ್ಯಾಲಯವನ್ನು ದೊರಕಿಸಲು ಯೋಗ್ಯತೆಯನ್ನು ಹೊಂದಬೇಕಾದರೆ, ಕನಿಷ್ಟಪಕ್ಷಕ್ಕೆ ಇನ್ನೊಂದು ಆರ್ಟ್ಸ ಕಾಲೇಜು ಅವಶ್ಯವಾಗಿ ಬೇಕೆಂದು ಬಗೆದು ಸೊಸೈಟಿಯವರು ಬೆಳಗಾವಿಯಲ್ಲೊಂದು ಕಾಲೇಜನ್ನು ಸ್ಥಾಪಿಸಲು ನಿರ್ಧರಿಸಿರುವರು. ಕರ್ನಾಟಕದಲ್ಲಿ ಹಿಂದುಳಿದ ಸಮಾಜದವರಿಗೆ ಉಚ್ಚ ಶಿಕ್ಷಣದ ಮಹತ್ವವು ಈಗೀಗ ತಿಳಿಯತೊಡಗಿದ್ದರಿಂದ ಕಾಲೇಜ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳ ಸಂಖ್ಯೆಯು ಅಲ್ಪಾವಧಿಯಲ್ಲಿಯೇ ನಿಸ್ಸಂದೇಹವಾಗಿ ಹೆಚ್ಚಾಗುವದು. ಆದುದರಿಂದ ಇನ್ನೊಂದು ಆರ್ಟ್ಸ ಕಾಲೇಜನ್ನು ಸ್ಥಾಪಿಸುವದು ತಮ್ಮ ಕರ್ತವ್ಯವೆಂದು ಸೊಸೈಟಿಯವರು ಭಾವಿಸಿದ್ದಾರೆ.

• ಈ ಸೊಸಾಯಿಟಿಯವರು ಶ್ರೀ ಸಿರಸಂಗಿ ನವಲಗುಂದ ದೇಶಗತಿಯ ಫಂಡದ ಟ್ರಸ್ಟಿಗಳವರ ಅತುಲ ಧನಸಹಾಯದಿಂದ ಶ್ರೀಯುತ ಡಿ. ಸಿ. ಪಾವಟೆ ಬಿ. ಎ. (ಫರ್ಸ್ಟಕ್ಲಾಸ ಆನರ್ಸ), ಫೆಲೋ ಕರ್ನಾಟಕ ಕಾಲೇಜ ಧಾರವಾಡ, ಇವರನ್ನು ಕೇಂಬ್ರಿಜ್ ಯುನಿವರ್ಸಿಟಿಯಲ್ಲಿ ಗಣಿತ ಶಾಸ್ತ್ರದಲ್ಲಿ ಪಾರಂಗತರಾಗಿ ರ್‍ಯಾಂಗ್ಲರ್ ಪದವಿಯನ್ನು ಪಡೆಯುವದಕ್ಕಾಗಿ ೧೯೨೪ರಲ್ಲಿ ವಿಲಾಯತಿಗೆ ಕಳುಹಿಸಿದರು. ಅವರು ಈಗ ಆ ಪರೀಕ್ಷೆಯಲ್ಲಿ ಚೆನ್ನಾಗಿ ತೇರ್ಗಡೆಹೊಂದಿ ಇದೇ ವರ್ಷ ರ್‍ಯಾಂಗ್ಲರಾದುದಲ್ಲದೆ, 'ಬಿ ಡಿಸ್ಟಿಂಕ್ಶನ್' ಎಂಬ ಹೆಚ್ಚಿನ ಸನ್ಮಾನವನ್ನು ಪಡೆದಿದ್ದಾರೆ.

ಅಲ್ಲದೆ, ಡಾ|| ಎಮ್. ಸಿ. ತುಮ್ಮಿನಕಟ್ಟಿ ಎಮ್. ಎಸ್. ಸಿ., ಪಿ. ಎಚ್. ಡಿ, ಇವರು ಅಮೇರಿಕೆಯ ಇಲಿನಾಯ್ ವಿಶ್ವವಿದ್ಯಾಲಯದಲ್ಲಿ ಅಭ್ಯಾಸಕ್ರಮವನ್ನು ತೀರಿಸಿ ಉತ್ತಮ ತರಗತಿಯನ್ನು ಹೊಂದಿ, ಮರಳಿ ಕರ್ನಾಟಕಕ್ಕೆ ಬಂದಿರುವರು. ಅವರಾದರೂ ರಸಾಯನಶಾಸ್ತ್ರದ ಶಾಖೆಯನ್ನು ಕಾಲೇಜಕ್ಕೆ ಜೋಡಿಸಿದರೆ ಸಂತೋಷದಿಂದ ಕಾಲೇಜದಲ್ಲಿ ಕೆಲಸಮಾಡಲು ಒಪ್ಪಿಕೊಂಡಿರುತ್ತಾರೆ.

ಸೊಸಾಯಿಟಿಯವರು ಆಲೋಚಿಸಿರುವ ಈ ಕಾಲೇಜದ ಯೋಚನೆಯನ್ನು ಕೈಗೂಡಿಸುವದಕ್ಕೆ ಧನಸಹಾಯವು ಅತ್ಯಾವಶ್ಯಕವಾಗಿರುವುದು. ಕಾಲೇಜಕ್ಕೆ ಬೇಕಾದ ಇಮಾರತಿಗಳು:— (೧) ಮುಖ್ಯ ಕಟ್ಟಡ, (೨) ಶಾಸ್ತ್ರೀಯ ಪ್ರಯೋಗಶಾಲೆ, (೩) ವಿದ್ಯಾರ್ಥಿನಿಲಯ, ಮುಂತಾದವುಗಳಿಗೆ ಸುಮಾರು ೨-೨|| ಲಕ್ಷ ರೂಪಾಯಿಗಳು ಬೇಕು. ಇದಲ್ಲದೆ ಆರಂಭಕ್ಕೆ (೧) ಪುಸ್ತಕಾಲಯ, (೨) ಶಾಸ್ತ್ರೀಯೋಪಕರಣ, (೩) ಫರ್ನಿಚರ್ ಹಾಗೂ (೪) ಇತರ ಆರಂಭದ ಸೌಕರ್ಯಗಳಿಗಾಗಿ ನಿಧಾನ ೨೫ ಸಾವಿರ ರೂಪಾಯಿಗಳು ಬೇಕಾಗುವುವು. ಇದೂ ಅಲ್ಲದೆ ಸದ್ಯಕ್ಕೆ ೫೦ ಸಾವಿರ ರೂಪಾಯಿಗಳವರೆಗಾದರೂ ಕಾಯಮನಿಧಿ, ಅವಶ್ಯವಾಗಿದೆ. ಇಷ್ಟೆಲ್ಲ ಸಿದ್ಧತೆಯನ್ನು ಸೊಸಾಯಿಟಿಯವರು ಮುಂಬೈ ವಿಶ್ವವಿದ್ಯಾಲಯಕ್ಕೂ ಸರಕಾರಕ್ಕೂ ತೋರಿಸಿದರೆ ಮಾತ್ರ ಅವರಿಂದ ಪರವಾನಿಗೆಯು ದೊರೆಯುವುದು. ಸಿರಸಂಗಿ ನವಲಗುಂದ ಟ್ರಸ್ಟಫಂಡಿನವರು, ಸೊಸಾಯಿಟಿಯವರು ಬೆಳಗಾವಿಯಲ್ಲಿ ಸರಕಾರದ್ವಾರಾ ಕೊಂಡುಕೊಂಡಂಥ ಸ್ಥಳಕ್ಕೆ ಕ್ರಯರೂಪವಾಗಿ ಕೊಟ್ಟಹಣದಲ್ಲಿ ೧೫ ಸಾವಿರ ರೂಪಾಯಿಗಳನ್ನು ಕೊಟ್ಟಿರುವರು. ಆ ಸ್ಥಳದಲ್ಲಿ ವೀರಶೈವ ವಿದ್ಯಾರ್ಥಿಗಳ ವಸತಿಗೃಹವನ್ನು ಕಟ್ಟಿಸುವದಕ್ಕಾಗಿ ೫೦ ಸಹಸ್ರ ರೂಪಾಯಿಗಳನ್ನು ವಾಗ್ದಾನ ಮಾಡಿರುವದಲ್ಲದೆ ಇನ್ನೂ ಹೆಚ್ಚಿಗೆ ಬೇಕಾದಲ್ಲಿ ಅದನ್ನೆಲ್ಲ ಕೊಡುವದಕ್ಕೆ ಒಪ್ಪಿಕೊಂಡಿರುವದರಿಂದ ಸೊಸಾಯಿಟಿಯವರ ಕಾರ್ಯವು ಬಹುಮಟ್ಟಿಗೆ ಸುಲಭವಾಗಿದೆ.

ಸೊಸೈಟಿಯ ಈ ಎಲ್ಲ ಧ್ಯೇಯಗಳೂ ಈಡೇರಬೇಕಾದರೆ ವಿದ್ಯಾಪಕ್ಷಪಾತಿಗಳೂ, ಸಮಾಜಮುಖಂಡರೂ, ಉದಾರರೂ ಆದವರು ಕೈಲಾದ ಮಟ್ಟಿಗೆ ಧನಸಹಾಯ ಮಾಡಬೇಕಾಗಿದೆ. ಮೇಲ್ಕಂಡ ವಿಷಯಗಳನ್ನು ಚನ್ನಾಗಿ ಪರಿಶೀಲಿಸಿದರೆ ಕಾರ್ಯದ ಮಹತ್ವವು ಗೋಚರವಾಗುವುದಲ್ಲದೆ ಎಲ್ಲರೂ ಈ ಸಮಯದಲ್ಲಿ ಮನಮುಟ್ಟಿ ಸಹಾಯಮಾಡಿದರೆ ಮಾತ್ರ ಈ ಕಾರ್ಯಗಳು ಕೈಗೂಡುವವೆಂದು ಕಂಡುಬರುವುದು.

ಸದ್ಯಕ್ಕೆ ಸೊಸೈಟಿಯುವರಿಂದ ಈ ಕೆಳಗೆ ಕಂಡ ಸಂಸ್ಥೆಗಳು ನಡೆಸಲ್ಪಡುತ್ತಿರುವವು.

## ೧ ಗಿಲಂಗಿಜಿ ಅರ್ಟಾಳ ಹೈಸ್ಕೂಲು, ಬೆಳಗಾಂವ

[ಹೆಡ್ಮಾಸ್ಟರ್ M. R. ಸಾಖರೆ, M. A.]

ನಮ್ಮ ಸಮಾಜದ ಮಾನ್ಯ ಮುಖಂಡರಲ್ಲಿ ಅಗ್ರಗಣ್ಯರಾದ ಕೈ. ರಾವಬಹದ್ದೂರ ಗುರುಸಿದ್ಧಪ್ಪ, ಕೈಲಾಸವಾಸಿಗಳಾದ ಗಿಲಗಿಂಜಿಯವರ ಮತ್ತು ರಾವ್‌ಬಹದ್ದೂರ್ ಆರ್. ಸಿ. ಅರ್ಟಾಳ ಐ. ಎಸ್. ಓ. ಯವರ ಅನನ್ಯ ಸಮಾಜಸೇವೆಯ ಸ್ಮಾರಕವಾಗಿ ಈ ಶಾಲೆಯು ೧೩—೧೧—೧೯೧೬ರಲ್ಲಿ ಬೆಳಗಾವಿಯಲ್ಲಿ ಸ್ಥಾಪಿಸಲ್ಪಟ್ಟಿತು. ಧಾರವಾಡದಲ್ಲಿ ಸ್ಥಾಪಿತವಾಗಿರುವ ಕರ್ನಾಟಕ ಆರ್ಟಸ್ ಕಾಲೇಜಿಗೆ ಕೊಡುವ ಸಲುವಾಗಿ ಮುಂಬೈ ಕರ್ಣಾಟಕದ ಲಿಂಗಾಯತರಿಂದ ಶೇಖರಿಸಲ್ಪಟ್ಟಿದ್ದ ಒಂದು ಲಕ್ಷ ರೂಪಾಯಿಗಳ ಮೇಲಿನ ಬಡ್ಡಿಯು ಪ್ರಥಮದಲ್ಲಿ ಈ ಶಾಲೆಯ ಸಲುವಾಗಿ ಉಪಯೋಗಿಸಲ್ಪಟ್ಟಿತು.

ಈಗ ಶಾಲೆಯಲ್ಲಿ ಸರಾಸರಿ ೩೫೦ ಜನ ಹುಡುಗರು ಶಿಕ್ಷಣ ಹೊಂದುತ್ತಿರುವರು. ಮೆಟ್ರಿಕ್‌ನವರೆಗೂ ಶಿಕ್ಷಣ ಕೊಡಲ್ಪಡುತ್ತಿರುವುದು. ಶಾಲೆಯು ಈಗ ಬೆಳಗಾವಿ ಕೋಟೆಯಲ್ಲಿ ಒಂದು ಬಾಡಿಗೆಯ ಮನೆಯಲ್ಲಿರುವುದು. ಶಾಲೆಯ ಕಟ್ಟಡದ ಸಲುವಾಗಿ ಯೋಗ್ಯ ನಿವೇಶನವನ್ನು ಸರಕಾರದಿಂದ ಕೊಂಡುಕೊಂಡಿರುವದಲ್ಲದೆ, ಕಟ್ಟಡದ ನಿಧಿಯನ್ನು ಶೇಖರಿಸುವ ಬಗ್ಗೆ ಅವಿರಳ ಪ್ರಯತ್ನವು ನಡೆಯುತ್ತಿರುವುದು.

**ಗಿಲಗಂಜಿ ಅರ್ಟಾಳ ಹೈಸ್ಕೂಲಿನ ಬಿಲ್ಡಿಂಗ ನಿಧಿಗೆ ಹೆಚ್ಚಿಗೆ ಧನಸಹಾಯ ಮಾಡಿದವರು.**

೧. ಶ್ರೀಮದ್ಘನಲಿಂಗ ಚಕವರ್ತಿಗಳಾದ ಕೊಣ್ಣೂರ ಶ್ರೀಗಳು ೧೨೦೦೦ ವಾಗ್ದಾನಮಾಡಿ [ರುವರು.

೨. ಸರದಾರ ದೇಸಾಯಿ ಸಾಹೇಬ, ಕೌಜಲಗಿ ೧೦೦೦೦ ಕೊಟ್ಟಿರುವರು.

೩. " ವ್ಹಿ. ಜಿ. ದೇಸಾಯಿ ಸಾಹೇಬ, ಚಚಡಿ. ೫೦೦೦ ಕೊಟ್ಟಿರುವರು.

೪. " ಲಖಮನಗೌಡ ಬಸವ ಪ್ರಭು ಸರದೇಸಾಯಿ, ವಂಟಮುರಿ. ೨೦೦೦೦

೫. ಶ್ರೀ|| ದೇಸಾಯಿಸಾಹೇಬ ನಣದಿ ೫೦೦೦ ಅರ್ಧಹಣವ [ನ್ನು ಕೊಟ್ಟಿರುವರು.

## ೨ ಎಸ್. ಎಲ್. ಎ. ವಿ. ಸ್ಕೂಲು, ವಂಟಮುರಿ.

[ಹೆಡ್ಮಾಸ್ತರ್—S. B. ಸೂರ್ಯವಂಶಿ.]

ನಮ್ಮ ಸಮಾಜದ ದಾನಶೂರ ದೇಶಾಯಿಗಳಲ್ಲೊಬ್ಬರಾದ ಶ್ರೀಮಂತ ಸರದಾರ್ ಲಖಮನ ಗೌಡಾ ಬಸವಪ್ರಭು ಸರ್ ದೇಶಾಯಿ ಸಿ. ಐ. ಇ. ವಂಟಮುರಿಯವರು, ವಂಟಮುರಿಗ್ರಾಮದಲ್ಲಿ ಒಂದು ಎ. ವ್ಹಿ. ಸ್ಕೂಲನ್ನು ಸೊಸೈಟಿಯವರು ಸ್ಥಾಪಿಸಿದರೆ ಅದರ ಖರ್ಚು ವೆಚ್ಚಗಳನ್ನು ತಾವು ವಹಿಸುವದಾಗಿ ಸೂಚಿಸಿದ ಮೇರಿಗೆ ಸೊಸೈಟಿಯವರು ೧೯೧೯ರಲ್ಲಿ ಸರದಾರ್ ಲಖಮನಗೌಡಾ ಎ. ವ್ಹಿ ಸ್ಕೂಲ್ ಎಂಬ ಹೆಸರಿನ ಶಾಲೆಯನ್ನು ವಂಟಮುರಿಯಲ್ಲಿ ಸ್ಥಾಪಿಸಿದರು. ಸರದಾರ್ ಸಾಹೇಬರವರು ಇತ್ತೀಚಿಗೆ ಶಾಲೆಯ ಸಲವಾಗಿ ಒಂದು ಭವನವನ್ನು ಕಟ್ಟಿಕೊಟ್ಟಿರುವರು. ಸದ್ಯಕ್ಕೆ ಶಾಲೆಯಲ್ಲಿ ೪೦ ಹುಡುಗರು ಮಾತ್ರ ಕಲಿಯುತ್ತಿರುವರು.

## ೩ ಕರ್ಣಾಟಕ ಲಿಂಗಾಯತ ಎಜುಕೇಶನ್ ಸೊಸೈಟಿ ಹೈಸ್ಕೂಲು, ಧಾರವಾಡ

[ಪ್ರಿನ್ಸಿಪಾಲ್—S. S. ಬಸವನಾಳ M. A.]

ಧಾರವಾಡದಲ್ಲಿ ಬಹಳ ದಿನಗಳಿಂದ ನಡೆಯುತ್ತಿದ್ದ ವಿಕ್ಟೋರಿಯಾ ಹೈಸ್ಕೂಲ್ ಬಂದಮಾಡಲ್ಪಟ್ಟ [illegible] ರಲ್ಲಿ ಈ ಶಾಲೆಯನ್ನು ಸೊಸೈಟಿಯವರು ಧಾರವಾಡದಲ್ಲಿ ಸ್ಥಾಪಿಸಿದರು. ಇದು ಮೊದಲು ಎರಡು ಬಾಡಿಗೆಯ ಮನೆಗಳಲ್ಲಿ ಪ್ರಾರಂಭಮಾಡಲ್ಪಟ್ಟು ಪ್ರಕೃತ ಲಿಂಗಾಯತಹಾಲಿನ ಪಕ್ಕದಲ್ಲಿರುವ ಧಾರವಾಡ ಲಿಂಗಾಯತ ಎಜುಕೇಶನ್ ಅಸೋಸಿಯೇಶನ್ನಿಗೆ ಸೇರಿದ "ಶ್ರೀಮತಿ ಭಾಗೀರಥೀಬಾಯಿ ಸಿರಸಿಂಗೀಕರ್‌ಯವರ ಸ್ಮಾರಕ ಮಂದಿರ"ದಲ್ಲಿರುವುದು. ಶಾಲೆಯಿಂದ ಸುಮಾರು ೩೦೦ ಹುಡುಗರು ಉಪಯೋಗಹೊಂದುತ್ತಿರುವರಲ್ಲದೆ ಅವರಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಜನರು ವೀರಶೈವರಾಗಿರುವರು. ಶಾಲೆಯಲ್ಲಿ ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಬೇಕಾದ ಎಲ್ಲ ಸಲಕರಣೆಗಳೂ ಇರುವವು.

## ೪ ಶ್ರೀಮತಿ ಭಾಗೀರಥೀಬಾಯಿ ಸಿರಸಿಂಗಿಕರ್ ಹಾಸ್ಟಲ್, ಧಾರವಾಡ

## ೫ ಲಿಂಗಾಯಿತ ಸ್ಟೂಡೆಂಟ್ಸ್ ಬೋರ್ಡಿಂಗ್ ಬೆಳಗಾವ

ಧಾರವಾಡ ಮತ್ತು ಬೆಳಗಾವಿಯಲ್ಲಿ ಸೊಸೈಟಿಯವತಿಯಿಂದ ನಡೆಯುತ್ತಿರುವ ಹೈಸ್ಕೂಲುಗಳಲ್ಲಿ ಓದುವ ವೀರಶೈವ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಈ ಎರಡು ಬೋರ್ಡಿಂಗುಗಳು ಸ್ಥಾಪಿಸಲ್ಪಟ್ಟಿರುವುವು. ಬೆಳಗಾವಿ ಮತ್ತು ಧಾರವಾಡದಲ್ಲಿನ ಈ ಎರಡು ಬೋರ್ಡಿಂಗುಗಳಲ್ಲೂ ಒಟ್ಟಿಗೆ ೧೦೦ ಜನ ವಿದ್ಯಾರ್ಥಿಗಳಿರುವರು.

## ೬ ಬಸವಪ್ರಭಪ್ಪ ಕಟ್ಟಿ, ಬಸವಪ್ರಭಪ್ಪ ಹೊನ್ನಳ್ಳಿ ಎ. ವ್ಹಿ. ಸ್ಕೂಲ್, ಬೆಲ್ಲದ ಬಾಗೇವಾಡಿ.

ಬೆಳಗಾವಿ ಜಿಲ್ಲೆಯ ವ್ಯಾಪಾರಿಕಸ್ಥಳಗಳಲ್ಲೊಂದಾದ ಬೆಲ್ಲದ ಬಾಗೇವಾಡಿಯಲ್ಲಿ ಈ ಶಾಲೆಯನ್ನು ಸೊಸೈಟಿಯವರು ೧೯೨೪ರಲ್ಲಿ ಪ್ರಾರಂಭಮಾಡಿದರು. ಅಲ್ಲಿಯ ಘನಶ್ರೀಮಂತರಾದ ಶ್ರೀಯುತ ಬಸವಪ್ರಭಪ್ಪ ಕಟ್ಟಿ, ಮತ್ತು ಶ್ರೀ|| ಬಸವಪ್ರಭಪ್ಪ ಹೊನ್ನಳ್ಳಿಯವರು ಶಾಲೆಯ ನಿಮಿತ್ತ ಐದು ಐದು ಸಹಸ್ರ ರೂಪಾಯಿಗಳನ್ನು ಕೊಡಲೊಪ್ಪಿದ್ದರಿಂದ ಶಾಲೆಗೆ ಮೇಲ್ಕಂಡ ಹೆಸರು ಕೊಡಲಾಯಿತು. ಸದ್ಯಕ್ಕೆ ಶಾಲೆಯ ಮೂರು ಇಯತ್ತೆಗಳಲ್ಲಿ ಸುಮಾರು ೨೦ ಜನ ಹುಡುಗರು ವ್ಯಾಸಂಗಮಾಡುತ್ತಿರುವರು.

## ೭ ಶ್ರೀ ದುರ್ದುಂಡೇಶ್ವರ ಎ. ವ್ಹಿ. ಸ್ಕೂಲ್, ಸಂಕೇಶ್ವರ, (ಬೆಳಗಾವಿ).

ಈ ಶಾಲೆಯನ್ನು ಸೊಸೈಟಿಯು ೧೯೨೭ರಲ್ಲಿ ಬೆಳಗಾವಿ ಜಿಲ್ಲೆಯ ಸಂಕೇಶ್ವರದಲ್ಲಿ ಸ್ಥಾಪಿಸಿರುವರು. ಅಲ್ಲಿಯ ಶ್ರೀ ದುರ್ದುಂಡೇಶ್ವರ ಮಠದ ಮಹಾಸ್ವಾಮಿಗಳವರು ಪ್ರತಿ ವರ್ಷ ಶಾಲೆಗೆ ೬ ಸಾವಿರ ರೂಪಾಯಿಗಳನ್ನು ದಯಪಾಲಿಸುವುದಾಗಿ ಅಭಿವಚನಕೊಟ್ಟಿರುವರು.

## ೮ ಶ್ರೀ ತೋಂಟದ ಸಿದ್ದಲಿಂಗ ವಿಜಯ ಪ್ರೆಸ್ ಧಾರವಾಡ

[ಮ್ಯಾನೇಜರ್ H. F. ಕಟ್ಟೀಮನಿ, B. A.]

ಗದಗಿನ ಶ್ರೀ ಜಗದ್ಗುರು ತೋಂಟದ ಮಹಾಸ್ವಾಮಿಗಳವರು ಹಾನಗಲ್ ಶ್ರೀ ಕುಮಾರಸ್ವಾಮಿಗಳವರು ಮತ್ತು ಹಾವೇರಿಯ ಶ್ರೀ

ಗಳವರೂ ಸೇರಿ ವೀರಶೈವ ಧರ್ಮಗ್ರಂಥಗಳ ಪ್ರಚಾರಾರ್ಥವಾಗಿ ಮೇಲ್ಕಂಡ ಪ್ರೆಸ್ಸನ್ನು ಗದಗಿನಲ್ಲಿ ಪ್ರಾರಂಭಮಾಡಿ ಕೆಲವುದಿನಗಳ ಮೇಲೆ ಸೊಸೈಟಿಗೆ ಒಪ್ಪಿಸಿದರು. ಸೆಪ್ಟಂಬರ್ ೧೯೩೪ರಲ್ಲಿ ಮುದ್ರಣಾಲಯವು ಧಾರವಾಡಕ್ಕೆ ಒಯ್ಯಲ್ಪಟ್ಟು ಹಿಂದಿನ ಹೆಸರಿನಿಂದಲೆ ನಡೆಯುತ್ತಿದೆ. ಇದರ ಸಹಾಯನಿಂದ ಸೊಸೈಟಿಯವರು ವೀರಶೈವಧಾರ್ಮಿಕಗ್ರಂಥಗಳ ಮತ್ತು ಮಾಸಿಕಗಳ ಪ್ರಕಟನೆಗಳನ್ನು ಕೈಗೊಳ್ಳಲಿರುವರು.

**ಸೊಸೈಟಿಯ ಅಧಿಕಾರಿ ಮಂಡಲ.**

**ಪ್ರೆಸಿಡೆಂಟರು.**

ರಾವಬಹದ್ದೂರ ಆರ್. ಸಿ. ಅರ್ಟಾಳ, ಆಯ್, ಎಸ್. ಓ.

**ಗ್ರ್ಯಾಂಡ ಪೇಟ್ರನ್ನರು.**

೧. ಶ್ರೀಮಂತ ಸರದಾರ ಲಖಮಗೌಡಾ ಬಸವಪ್ರಭು ಸರದೇಸಾಯಿ, ಸಿ. ಅಯ್. ಇ., ಬಾರ್ ಅಟ್ ಲಾ., ವಂಟಮುರಿ

೨. ಸರದಾರ ದೇಸಾಯಿ ಬಾಹದ್ದೂರ, ಕೌಜಲಗಿ

**ವ್ಹಾಯಸ್ ಪ್ರೆಸಿಡೆಂಟರು.**

೧. ಸರದಾರ ವೀರಭದ್ರಪ್ಪ ಗುಣಪ್ಪ ನಾಯಿಕ ಬಹದ್ದೂರ ದೇಸಾಯಿ, ಚಚಡಿ.

೨. ಸರದಾರ ಬುಳ್ಳಪ್ಪ ಬಸವಂತರಾವ ಮಾಮಲೇ ದೇಸಾಯಿ, ಹಂದಿಗನೂರ.

೩. ಶ್ರೀಯುತ ಚನ್ನಪ್ಪಣ್ಣಾ ಮಿರ್ಜಿ, ನರಗುಂದ.

**ಜನರಲ್ ಸೆಕ್ರೆಟರಿ.**

ಶ್ರೀಯುತ ಬಿ. ಬಿ. ಮಮದಾಪೂರ ಬಿ. ಏ.

**ಆಜೀವ ಸಭಾಸದರು.**

೧. ಶ್ರೀಯುತ ಎಮ್. ಆರ್. ಸಾಖರೆ, ಎಮ್. ಎ., ಫೆಲೊ ಬಾಂಬೆಯುನಿವ್ಹರ್ಸಿಟಿ.
೨. ಎಸ್. ಎಸ್. ಬಸವನಾಳ, ಎಮ್. ಎ.,
೩. ವ್ಹಿ. ವ್ಹಿ. ಪಾಟೀಲ, ಬಿ. ಎಜಿ., ಬಿ. ಎಸ್‌ಸಿ.,
೪. ಬಿ. ಬಿ. ಮಮದಾಪೂರ, ಬಿ ಎ.,
೫. ಬಿ. ಎಸ್. ಹಂಚಿನಾಳ, ಬಿ ಎ,
೬. ಎಚ್. ಎಫ್. ಕಟ್ಟಿಮನಿ, ಬಿ: ಎ,
೭. ಜಿ. ವ್ಹಿ. ಪುರಾಣಿಕ, ಬಿ: ಎ,
೮. ಎಚ್. ಸಿ. ಹಲಗಲಿ, ಬಿ. ಎ,

**ಬೆಳಗಾವಿಯ ಸ್ಥಾನಿಕ ಕಾರ್ಯನಿರ್ವಾಹಕ ಮಂಡಲ.**

ವ್ಹಿ. ವ್ಹಿ. ಪಾಟೀಲ್ ಬಿ. ಎ ಜಿ., ಬಿ. ಎಸ್ ಸಿ., ಸೆಕ್ರೆಟೆರಿ.
ಸರದಾರ್ ನಾಯಕ ಬಹದ್ದೂರ್ ವ್ಹಿ. ಜಿ. ದೇಸಾಯಿ, ಚಚಡಿ.
ರಾ|| ಬಾ|| ವ್ಹಿ. ಎ. ಅನಗೋಳ.
ಶ್ರೀಯುತ ವೀರಪ್ಪಣ್ಣಾ ಮುಪ್ಪಿನ.
" ಜಿ. ವ್ಹಿ. ಪುರಾಣಿಕ.

**ಧಾರವಾಡ ಸ್ಥಾನಿಕ ಕಾರ್ಯನಿರ್ವಾಹ ಮಂಡಲ.**

ಶ್ರೀಯುತ ಬಿ. ಎಸ್. ಹಂಚಿನಾಳ B. A. ಸೆಕ್ರೆಟೆರಿ,
ದಿವಾನ್ ಬಹದ್ದೂರ್ ಶಾಂತವೀರಪ್ಪ ಮೆಣಸಿನಕಾಯಿ.
ಶ್ರೀಯುತ ಸಿ. ಸಿ. ಹುಲಿಕೋಟ, B. A. L. L. B.
" ಎಚ್. ಎಫ್. ಕಟ್ಟೀಮನಿ B. A.
" ಬಸಪ್ಪಣ್ಣಾ ಲಕಮನಹಳ್ಳಿ

## ವೀರಶೈವ ಮಹಿಳಾ ಜ್ಞಾನಮಂದಿರ ಸೊಲ್ಲಾಪುರ.

ಕೈ|| ರಾವ್‌ಬಹದ್ದೂರ್ ಮಲ್ಲಪ್ಪಾ ವಾರದ ಇವರಿಂದ ೧೯೧೧ರಲ್ಲಿ ಸೊಲ್ಲಾಪುರದಲ್ಲಿ ಸ್ಥಾಪಿತವಾಯಿತು. ಕೈ|| ಸೌ|| ವಿದ್ಯಾವತೀ ಭಾಗೀರಥೀಬಾಯಿಯವರು ಮಂದಿರದ ಮೊದಲಿನ ಚಾಲಕರೂ ಕಾರ್ಯದರ್ಶಿಗಳೂ ಆಗಿದ್ದರು. ಶ್ರೀಮಂತ ಚನ್ನಬಸಪ್ಪಾ ಮಡಕಿ, ಶ್ರೀಮಂತ ಮಲ್ಲಿಕಾರ್ಜುನಪ್ಪ ಪಾಟೀಲ, ರಾವ್‌ಸಾಹೇಬ ವೀರಪ್ಪ ಮಾನ್ವಿ ಗದಗ, ರಾವ್‌ಸಾಹೇಬ ಮುರಿಗಪ್ಪ ಸಾಲಂತಿ—ಮುಂತಾದ ಸಭ್ಯಗೃಹಸ್ಥರು ಮಂದಿರಕ್ಕೆ ಹೆಚ್ಚಿಗೆ ಸಹಾಯಮಾಡಿರುವರು. ಸದ್ಯ ಮಂದಿರದಲ್ಲಿ ಪ್ರೌಢ ಮತ್ತು ಚಿಕ್ಕವಯಸ್ಸಿನ ವೀರಶೈವ ಸ್ತ್ರೀಯರಿಗೆ ಧಾರ್ಮಿಕಜ್ಞಾನ, ಕಲಾಕೌಶಲ್ಯ, ಹೊಲಿಯುವ ಕೆಲಸ, ಪ್ರಥಮ ಚಿಕಿತ್ಸೆ ಮೊದಲಾದುವನ್ನು ಕಲಿಸುವ ತರಗತಿಗಳಿರುವವು; ಸೌ|| ಪಂಚವ್ವಾಬಾಯಿ ಸರದಾರ್ ಮತ್ತು ಸೌ|| ಸಂಗವ್ವಾಬಾಯಿ ಮಡಕಿ ಇವರು ರೋಗಿಗಳ ಪರಾಂಬರಿಕೆಯನ್ನು (nursing) ಬೋಧಿಸುವರಿರುವರು ಅಲ್ಲದೆ ಸಾಮಾನ್ಯ ಸ್ತ್ರೀಯರ ಸಲುವಾಗಿ ಸೌ|| ತ್ರಿವೇಣಿಬಾಯಿ ವಿಸಪೋತಿ, ಶ್ರೀ ವೀರಬಸವ್ವಾ ತೊಡಕರಿ ಇವರುಗಳಿಂದ ಕೀರ್ತನ ಪುರಾಣಗಳೂ, ಸೌ|| ಭಾಗೀರಥೀಬಾಯಿ ಕಟಾವೆ ಇವರಿಂದ ವಚನಪ್ರವಚನಗಳೂ ನಡೆಯುವವು. ಪ್ರತಿವರ್ಷ ಒಂದು ಕಲಾಪ್ರದರ್ಶನವೂ ನೆಡೆಯುವುದು.

**ಈಗಿನ ಅಧಿಕಾರಿ ಮಂಡಲ.**

**ಅಧ್ಯಕ್ಷರು**

ಶ್ರೀಮತಿ ಗೌರವ್ವಾಬಾಯಿ ವಾರದ

**ಸೆಕ್ರಿಟರಿಗಳು**

ಸೌ|| ಸಂಗವ್ವಾಬಾಯಿ ಮಡಕಿ
" ಭಾಗೀರಥೀಬಾಯಿ ಕಟಾಪ
" ಪಂಚವ್ವಾಬಾಯಿ ಸರದಾರ

**ಅಂಡರ್ ಸೆಕ್ರಿಟರಿ**

ಶ್ರೀಮತಿ ಪ್ರಯಾಗಬಾಯಿ ಪಟ್ಟಣಶೆಟ್ಟಿ

**ಕಾರ್ಯಕಾರಿ ಕಮಿಟಿ ಮೆಂಬರರು**

(೧) ಶ್ರೀಮತಿ ಗಂಗವ್ವಾಬಾಯಿ ಕಾಡಾದಿ
(೨) ಸೌ|| ಗೌರವ್ವಾಬಾಯಿ ಅಬದುಲಪೂರಕರ
(೩) " ದುಂಡವ್ವಾಬಾಯಿ ಪಸಾರೆ
(೪) ಶ್ರೀಮತಿ ಪ್ರಯಾಗಬಾಯಿ ಅಗಾಡಿ
(೫) ಸೌ|| ಪಾರ್ವತೀಬಾಯಿ ಚಹ್ವಾಣ
(೬) ಸುಜ್ಞಾನಬಾಯಿ ಘೋಬಜೆ
(೭) ಶ್ರೀಮತಿ ಮುಕ್ತಾಬಾಯಿ ಸೇಟಿ
(೮) " ಪಾರ್ವತೀಬಾಯಿ ಮಾಳಗೆ
(೯) ಸೌ|| ಗೌರವ್ವಾಬಾಯಿ ಕನಾಳೆ
(೧೦) " ಶಿವಗಂಗಾಬಾಯಿ ಪಾಟೀಲ
(೧೧) ಶ್ರೀಮತಿ ಲಕ್ಷ್ಮೀಬಾಯಿ ಗೋಟೆ



ವೀರಶೈವ ಸೈನಿಗರ ಸಂಘ, ಬೆಂಗಳೂರು. ಅಧ್ಯಕ್ಷರು, ಉಪಾಧ್ಯಕ್ಷರು, ಸೆಕ್ರಿಟೆರಿಗಳು ಮತ್ತು ಮೆಂಬರುಗಳು

## ವೀರಶೈವ ಸಂಸ್ಕೃತಪಾಠಶಾಲಾ ಸೊಲ್ಲಾಪುರ

ಸೊಲ್ಲಾಪುರದ ವೀರಶೈವ ಸದ್ಗೃಹಸ್ಥರ ಪ್ರೋತ್ಸಾಹದಿಂದ ನಡೆಯುತ್ತದೆ. ವೀರಶೈವ ವಿದ್ಯಾರ್ಥಿಗಳಿಗೆ ವೈದಿಕ ಮತ್ತು ಲೌಕಿಕ ಸಂಸ್ಕೃತಪಾಠಗಳು ಹೇಳಲ್ಪಡುತ್ತವೆ. ವಿಶಳವಾದ ರಿಪೋರ್ಟು ಮುದ್ರಣಕಾಲಕ್ಕೆ ನಮ್ಮ ಕೈ ಸೇರಿಲ್ಲ.

---

## ವೀರಶೈವ ಬೋರ್ಡಿಂಗ್ ಬ್ಯಾಡಿಗಿ

ಈ ಬೋರ್ಡಿಂಗಿನಲ್ಲಿ ಸುಮಾರು ೫೦ ಜನ ವಿದ್ಯಾರ್ಥಿಗಳಿರುವರು. ಮುದ್ರಣಕಾಲಕ್ಕೆ ರಿಪೋರ್ಟು ಕೈಸೇರಲಿಲ್ಲವಾಗಿ ಹೆಚ್ಚಿಗೆ ವಿವರಗಳನ್ನು ತಿಳಿಸಲಾರದಿರುವೆವು.

---

## ಶ್ರೀ ವೀರಶೈವ ಧರ್ಮೋತ್ತೇಜಕ ಸಂಘ.

### ಶ್ರೀ ಪಂಚವರ್ಣ ಬೃಹನ್ಮಠ, ಹೊಲಿ (ಬೆಳಗಾವ.)

ಈ ಸಂಘವು ಪೂವಲ್ಲಿಯ ಪಂಚವರ್ಣ ಬೃಹನ್ಮಠದಲ್ಲಿ ೬-೪-೧೯೧೮ರಲ್ಲಿ ಸ್ಥಾಪಿತವಾಯಿತು. ವೀರಶೈವ ಮತಕ್ಕೆ ಸಾರ್ವತ್ರಿಕ ದೃಷ್ಟಿಯಿಂದ ಉತ್ತೇಜನ ಕೊಟ್ಟು ಉನ್ನತಿಗೆ ತರುವುದೇ ಸಂಘದ ಮುಖ್ಯಧ್ಯೇಯವು. ಈ ಮಹದುದ್ದೇಶವನ್ನು ಈಡೇರಿಸುವದಕ್ಕಾಗಿ ಸಂಘದವರು ಧಾರ್ಮಿಕ ಬೋಧನ, ಪುರಾಣ ಪ್ರವಚನಗಳು, ಗ್ರಂಥ ಪ್ರಸಾರ, ಪ್ರಾಣಿವಧಾ ನಿರೋಧ ಮುಂತಾದ ನಾನಾ ವಿಧ ಚಳವಳಿಗಳಿಂದ ತಮ್ಮ ಪ್ರಾಂತ್ಯದ ಜನರಲ್ಲಿ ಜಾಗ್ರತಿಯನ್ನುಂಟುಮಾಡುತ್ತಿರುವರು.

**ಅಧ್ಯಕ್ಷರು.**

೧ ವೇ|| ಬ್ರ|| ಶ್ರೀ|| ಸಿದ್ಧಾಂತಿ ಶಿವಬಸವ ಶಾಸ್ತ್ರಿಗಳು ಬೃಹನ್ಮಠ.

**ಉಪಾಧ್ಯಕ್ಷರು.**

೧ ಶ್ರೀಮಂತ ದುಂಡಪ್ಪನವರು ಬಾಳಿ ಮನ್ನೊಳ್ಳಿ.

**ಸೆಕ್ರೆಟರಿಗಳು.**

೧ ವೇ|| ಗಂಗಾಧರಯ್ಯನವರು ಸಾಲೀಮಠ.

**ಮೆಂಬರರು.**

೧ ಶ್ರೀಯುತ ಮಲ್ಲಪ್ಪನವರು ಕೌಜಲಗಿ.
೨ ,, ಮಲ್ಲಪ್ಪನವರು ಸಜ್ಜನ.
೩ ,, ಗಿರಿಮಲ್ಲಪ್ಪನವರು ಗೊರೋಬಾಳಿ.
೪ ,, ವೆಲ್ಲಪ್ಪ ಹುಜರತ್ತಿ.
೫ ,, ಗದಿಗಪ್ಪ ಮನ್ನೊಳ್ಳಿ.
೬ ,, ಬಸವಪ್ಪ ಬಿಶೀಡೋಣಿ.
೭ ,, ಮರಿತಮ್ಮಪ್ಪ ಕುಂಬಾರ.

ಈ ಸಂಘದ ವತಿಯಿಂದ ಶ್ರೀ ಜಗದ್ಗುರು ವಿಶ್ವಾರಾಧ್ಯ ವಾಚನಾಲಯವು ೧೬-೩-೧೯೨೫ ರಲ್ಲಿ ಸ್ಥಾಪಿತವಾಯಿತು. ವಾಚನಾಲಯವು ಈ ವರೆಗೆ ಅಚ್ಚಾಗಿರುವ ವೀರಶೈವ ಧರ್ಮ ಗ್ರಂಥಗಳನ್ನು ಸಂಗ್ರಹಿಸುತ್ತಿರುವುದಲ್ಲದೆ ತಾಡಪತ್ರದ ಅಪೂರ್ವ ಗ್ರಂಥಗಳನ್ನು ತಾಮ್ರ ಶಾಸನಗಳನ್ನು, ಸುತ್ತುಮುತ್ತಲಿನ ಗ್ರಾಮಗಳಲ್ಲಿ ಶಿಲಾಶಾಸನಾದಿಗಳನ್ನು ಸಂಗ್ರಹಿಸುತ್ತಿರುವುದು.

ಜ್ಯೋತಿಷ ಶಿಕ್ಷಣಾರ್ಥವಾಗಿ ಸಂಘದವರು "ಶ್ರೀ ಪಂಚವರ್ಣ ಬೃಹನ್ಮಠ ಧರ್ಮಾರ್ಥ ವೀರವಿಜಯ ಪಾಠಶಾಲೆ" ಯನ್ನು ೨೬-೮-೧೯೨೦ರಲ್ಲು ಸ್ಥಾಪಿಸಿರುವರು. ಹೊಲಿಯು ಅತ್ಯಂತ ಪ್ರಾಚೀನ ಐತಿಹಾಸಿಕ ಸ್ಥಾನವಿದ್ದು ವೀರ ವಿಜಯನೆಂಬ ಪ್ರಸಿದ್ಧ ವೀರಶೈವ ರಾಜನು ಇಲ್ಲಿ ಆಗಿಹೋದನು. ಪಾಠಶಾಲೆಯು ಆವನ ಹೆಸರಿನಿಂದ ಸ್ಥಾಪಿಸಲ್ಪಟ್ಟಿರುವುದು.

ಈ ಸಂಘದ ಚಳವಳಿಗಳಲ್ಲಿ ಗ್ರಂಥ ಪ್ರಸಾರವೂ ಅತ್ಯಂತ ಮಹತ್ವದ್ದು. ಈ ವರಿಗೆ ಇವರು ಈ ಕೆಳಗೆ ಕಂಡ ಪುಸ್ತಕಗಳನ್ನು ಅಚ್ಚು ಹಾಕಿಸಿ ಉಚಿತವಾಗಿ ಹಂಚಿರುವರು.

| | |
|---|---|
| (೧) ವೀರಶೈವ ವಿವಾಹವಿಧಿ | ೧,೦೦೦ ಪ್ರತಿ. |
| (೨) ಸಂಕ್ಷಿಪ್ತ ಶಿವಪೂಜಾ ವಿಧಿ | ೧,೦೦೦ ,, |
| (೩) ಶ್ರೀ ರುದ್ರ ಪುರುಷ ಸೂಕ್ತ | ೩,೦೦೦ ,, |
| (೪) ಜಗದಾಚಾರ್ಯ ಪೂವಲ್ಲಿ ಸಿದ್ಧ ನಂಜೇಶ ಕೃತ "ಅದ್ಭುತ ಕಾಲಜ್ಞಾನ" | ೨,೦೦೦ ,, |
| (೫) ಶ್ರೀ ರೇಣುಕ ಕವಚ | ೪,೦೦೦ ,, |
| (೬) ಪ್ರತಿ ವರ್ಷ ಸಂಘದವತಿಯಿಂದ ಹೊರಡುವ ಪಂಚಾಂಗ. | |

ಈ ಸಂಸ್ಥೆಗೆ ಆ ಪ್ರಾಂತ್ಯದಲ್ಲಿನ ವೀರಶೈವೇತರ ಸದ್ಗೃಹಸ್ತರು ಕೂಡಾ ವರ್ಗಣಿಯನ್ನು ಕೊಡುವುದರ ಮೂಲಕ ಧನ ಸಹಾಯ ಮಾಡುತ್ತಿರುವರು.

---

## ಶ್ರೀಮದ್ವೀರಶೈವ ವಿದ್ಯಾಸಂವರ್ಧಿನೀ ಮಂಡಲ.

### ಬಾರ್ಶಿ— (ಉ. ಇಂಡಿಯಾ).

ಬಾರ್ಶಿಯಲ್ಲಿನ ಕೆಲವು ಜನ ತರುಣ ವೀರಶೈವರ ಪಯತ್ನದಿಂದ ಈ ಸಂಸ್ಥೆಯು ೧೦—೮—೧೯೧೧ರಲ್ಲಿ ಸ್ಥಾಪಿತವಾಯಿತು. ಸಂಸ್ಥೆಯ ಉದ್ದೇಶಗಳು ಬಾರ್ಶಿಯಲ್ಲಿ ನಿರ್ಗತಿಕರಾದ ವೀರಶೈವ ವಿದ್ಯಾರ್ಥಿಗಳ ಸಲುವಾಗಿ ಒಂದು ಬೋರ್ಡಿಂಗನ್ನು ಸ್ಥಾಪಿಸುವುದು, ಮತ್ತು ಯೋಗ್ಯರಾದ ವಿದ್ಯಾರ್ಥಿಗಳಿಗೆ ಉಚ್ಚ ಶಿಕ್ಷಣಹೊಂದಲು ವೇತನಗಳನ್ನು ಕೊಡುವುದು ಇವೇ. ಸಂಸ್ಥೆಯು ಪ್ರಥಮದಲ್ಲಿ ಬಹು ಸಣಣದಾಗಿ ಅಂದರೆ ಕೇವಲ ೩೦೦—೪೦೦ ರೂಪಾಯಿ ಮೂಲಧನದಿಂದ ಪ್ರಾರಂಭಿಸಲ್ಪಟ್ಟಿತಾದರೂ ಮುಷ್ಟಿಫಂಡ್, ಪೈಸಾಫಂಡ್ ಮೊದಲಾದ ಸಾಧನಗಳಿಂದ ಅಭಿವೃದ್ಧಿ ಹೊಂದಿ ಒಂದೆರಡು ವರ್ಷಗಳಲ್ಲಿಯೇ ತನ್ನ ಧ್ಯೇಯಗಳನ್ನು ಈಡೇರಿಸಿಕೊಂಡಿತು.

ಪ್ರಕೃತದಲ್ಲಿ ಈ ಸಂಸ್ಥೆಯ ವತಿಯಿಂದ ಉಚ್ಚ ಶಿಕ್ಷಣಕ್ಕಾಗಿ ಸುಮಾರು ೧೨ ಜನ ವಿದ್ಯಾರ್ಥಿಗಳು ವೇತನಹೊಂದುತ್ತಿರುವರು. ಇದಕ್ಕಾಗಿ ಸಂಸ್ಥೆಯು ಪ್ರತಿ ವರ್ಷ ರೂ. ೫೦೦—ಗಳನ್ನು ವೆಚ್ಚ ಮಾಡುತ್ತಿರುವುದು. ಬಾರ್ಶಿ ಮುನ್ಸಿಪಾಲ್ಟಿಯವರು ಸಂಸ್ಥೆಗೆ ಪ್ರತಿ ವರ್ಷ ೨೦೦೦ ರೂಪಾಯಿ ಗ್ರಾಂಟುಕೊಡುತ್ತಿರುವರು. ಇದೊಂದು ಸಂತೋಷದ ಸುದ್ದಿ.

ಸಂಸ್ಥೆಯವರು ಪ್ರಾರಂಭಿಸಿರುವ ಬೋರ್ಡಿಂಗಿನಲ್ಲಿ ಈಗ ಸುಮಾರು ೫೦ ಜನ ಅನಾಥ ಹುಡುಗರು ಅಶನವಸನಗಳನ್ನು ವಿದ್ಯಾಭ್ಯಾಸವನ್ನು ಹೊಂದುತ್ತಿರುವರು.

### ಸಂಸ್ಥೆಯ ಸ್ಥಾಪಕರು

ಶ್ರೀ ಗುರುಮೂರ್ತಿ ರಾಚಲಿಂಗಸ್ವಾಮಿ ಗುರುರೇವಣಾಸಿದ್ದ ಸ್ವಾಮಿ ಪಟಚರಾಧ್ಯಕ್ಷ ಸಂಸ್ಥಾನ ಕಿಲ್ಲೇ— ಪರಾಂಡಾ ಹಳ್ಳಿ ಮುಕ್ಕಾಂ ಬಾರ್ಸಿ.

### ಸಹಾಯಕರ್ತರು

ಶ್ರೀಮಂತ ನಾಗನಾಥ ಶಂಭು ಅಪ್ಪಾಕಥೇಲ್.

ಕೈ|| ಮಹದೇವ ವಿಠೋಬಾ ಅಪ್ಪಾಘೋಡಕೇ ಮುಂತಾದವರು.

---

## ಶ್ರೀ ಜಗದ್ಗರು ಜಯದೇವ ವೀರಶೈವ ಬೋರ್ಡಿಂಗ್ ನಿಪ್ಪಾಣಿ

ನಿಪ್ಪಾಣಿಯ ವೀರಶೈವ ಸದ್ಗೃಹಸ್ಥರ ಪ್ರೋತ್ಸಾಹದಿಂದ ೧೯೧೯ನೇ ಇಸ್ವಿಯಲ್ಲಿ ಸ್ಥಾಪಿಸಲ್ಪಟ್ಟಿತು. ಸುಮಾರು ೨೫ ಜನ ವಿದ್ಯಾರ್ಥಿಗಳಿಗೆ ಊಟದ ಮತ್ತು ವಾಸದ ಏರ್ಪಾಟು ಮಾಡಿರುವುದು. ಬೋರ್ಡಿಂಗ್ ಪ್ರಾರಂಭವಾದಂದಿನಿಂದ ಶ್ರೀಮನ್ಮಹಾರಾಜನಿರಂಜನ ಜಗದ್ಗುರು ಮುರಘರಾಜೇಂದ್ರ ಮಹಾಸ್ವಾಮಿಗಳವರು ಧನ ಸಹಾಯ ಮಾಡುತ್ತಿರುವರು.

---

## ಶಿವಾದ್ವೈತ ಸಿದ್ಧಾಂತಪ್ರಚಾರ ಸಂಘ ಬನಹಟ್ಟಿ.

(ಸಂಸ್ಥಾನ ಜಮುಖಂಡಿ)  ಸ್ಥಾಪನೆ ೨೭—೫—೧೯೨೭.

ಜನರಲ್ಲಿ ಧರ್ಮ ಜಾಗ್ರತೆಯನ್ನುಂಟುಮಾಡುವುದಲ್ಲದೆ ಶಿವಾದ್ವೈತಸಿದ್ಧಾಂತ ಪ್ರಚಾರವನ್ನು ಮಾಡುವುದೇ ಈ ಸಂಘದ ಉದ್ದೇಶ್ಯವು. ವೀ|| ಶಿ. ವೀರಸಂಗಯ್ಯಸ್ವಾಮಿ ಮಠದ, ಬನಹಟ್ಟಿ— ಇವರೇ ಸಂಘದ ಸಂಸ್ಥಾಪಕರೂ ಚಾಲಕರೂ ಇರುವರು.

---

## ಶ್ರೀಮದ್ವೀರಶೈವ ಶಿವಯೋಗ ಮಂದಿರ.

### ಬಾದಾಮಿ (ಬಿಜಾಪುರ.)

ವೀರಶೈವರ ಧಾರ್ಮಿಕ ಸಂಸ್ಥೆಗಳಲ್ಲಿ ಶಿವಯೋಗ ಮಂದಿರವು ಅತ್ಯಂತ ಮಹತ್ವದ್ದು. ಇದನ್ನು ಅವತಾರ ಪುರುಷರಾದ ಶ್ರೀ ಮನ್ನಿರಂಜನ ಚಿತ್ತರಗಿ ಚರವರೇಣ್ಯ ಶಿವಯೋಗಿ ಶ್ರೀ ಮಹಾಂತ ಸ್ವಾಮಿಗಳವರು ಶಕ ೧೮೩೦ ಮಾಘ ಶುದ್ಧ ೭ (ಸ್ ೧೯೦೮) ರಲ್ಲಿ ಕರ್ಣಾಟಕದಲ್ಲಿ ಪ್ರಸಿದ್ಧ ಐತಿಹಾಸಿಕ ಕ್ಷೇತ್ರವಾದ ಬಾದಾಮಿಯಲ್ಲಿ ಸ್ಥಾಪಿಸಿದರು. ಆಶ್ರಮವು ಕೃಷ್ಣಾ ತೀರದಲ್ಲಿದ್ದು ಅತ್ಯಂತ ಮನೋಹರವಾಗಿ ಪ್ರೇಕ್ಷಕರ ಮನಸ್ಸಿನಲ್ಲಿ ಶಾಂತಿರಸವನ್ನು ತಂದಿಡುವುದು. ಈ ಆಶ್ರಮವನ್ನು ವರ್ಣಿಸುತ್ತಾ ಪ್ರಸಿದ್ಧಲೇಖಕರೊಬ್ಬರು ಬರೆದಿರುವುದನ್ನು ನಾವಿಲ್ಲಿ ಅನುವಾದಿಸದಿರಲಾರೆವು.

"ಬಲಕ್ಕೆ ಬಲ-ಶಂಕರಿಯಾದ ಬನ ಶಂಕರಿಯ ಕಾವಲುಂಟು! ಎಡಕ್ಕೆ ದಕ್ಷಿಣ ಕಾಶಿಯೆನಿಸಿದ ಮಹಾಕೂಟೇಶ್ವರನ ಕಾವಲುಂಟು!! ಮುಂದೆ ಮಲಾಪಹಾರಿಯಾದ ಮಲಪ್ರಭೆಯ ಕಾವಲುಂಟು!! ಹಿಂದೆ ನಾಗನಾಥೇಶ್ವರನ ಕಾವಲುಂಟು!; ಹೀಗೆ ಶಿವಯೋಗಮಂದಿರಕ್ಕೆ ಕ್ಷೇತ್ರ ತೀರ್ಥಗಳ ರಕ್ಷಾಕವಚವುಂಟು. ಅಂದಮೇಲೆ ಎಲ್ಲ ಬಗೆಯಿಂದಲೂ ಈ ಪ್ರದೇಶವೇ ಮಹಾಶಿವಯೋಗಿಗಳಿಗೆ ಅಂದವಾಗಿ ಕಂಡದ್ದು ಸಹಜವೇ ಸರಿ. ಈ ಬಗೆಯಾಗಿ ಸರಿದೋರಿದ್ದಾಯ್ತು. ಯುಕ್ತವೇ, ಆದರೆ ಆ ಸ್ಥಳವು ಯಾರದು? ಹೇಗೆ ಬಂದಿತು? ಮುಂತಾಗಿ ಸಂಗಡಿಗರು ಶಿವಯೋಗಿಗಳನ್ನು ಕೇಳಿಕೊಂಡರಂತೆ. ಆಗ ಅವರು ಎಲ್ಲವೂ ಆತನ ಕೆಲಸ, ಆತನೇ ಎಲ್ಲವನ್ನೂ ಬೇಕಾದರೆ ಒಂದುಗೂಡಿಸಿಕೊಟ್ಟಾನು ಎಂದು ಆಡಿತೋರಿಸಿದರಂತೆ, ಅವರಾಡಿದಂತೆ ಎಲ್ಲವೂ ಹೇಗೆ ಹೇಗೆ ಕೂಡಿಬಂದವೋ ಅದನ್ನೆಲ್ಲಾ ನೆನಿಸಿಕೊಂಡರೆ ಬೆರಗಾಗುವದು! ಕಳ್ಳಿ-ಕುಟ್ರ, ಕಲ್ಲು ಮುಳ್ಳುಗಳ ಕಗ್ಗಾಡಾದ, ಕಳ್ಳಕಾಕರ ನೆಲವೀಡಾದ ಶಿವಯೋಗಮಂದಿರವಲ್ಲದ ಆಗಿನ ಆ ಕಾಡಿನ ಕಾಡುಸ್ಥಿತಿಯನ್ನೂ ಈಗಿನ ಈ ಪಾಡು ಸ್ಥಿತಿಯನ್ನು ನೋಡಿದವರಿಗೆ ನೆಲ ಮುಗಿಲಿನ ಪೊಳ್ಳೆಂದು ಅನಿಸುವಂತಿದೆ."

ಶಿವಯೋಗ ಮಂದಿರದ ಉದ್ದೇಶಗಳನ್ನು ಕುರಿತು ಹೀಗೆ ಹೇಳಲ್ಪಟ್ಟಿರುವುದು :—

"ಉದ್ದೇಶವೆಂದು ಬೇರೆ ಇನ್ನೇನೂ ಹೇಳಬೇಕಾದುದಿಲ್ಲ. ನಮ್ಮ ಸಂಸ್ಥೆಗಿಟ್ಟ ಹೆಸರೇ ಅರ್ಥಗರ್ಭಿತವಾಗದೆ ಉದ್ದೇಶ ಉದ್ದೀಪಕವಾಗಿದೆ. ನಮ್ಮ ಸಮಾಜಕ್ಕೆ ಸಂದೇಶ ಸೂಚಕವಾಗಿದೆ. ಆದರೂ ಸ್ವಲ್ಪದರಲ್ಲಿ ಬಿಚ್ಚಿ ಹೇಳಬೇಕೆಂದರೆ ಶಿವಯೋಗ ಮಂದಿರವು ಶಿವ-ಯೋಗದ ಮಂದಿರವಾಗಬೇಕೆಂಬುವದೇ ಈ ಸಂಸ್ಥೆಯ ಉದ್ದೇಶ. ಅಂದರೆ ಜಗತ್ಕುಟುಂಬಿಯಾದ ಶಿವನಲ್ಲಿ ಮತ್ತು ಶಿವಸಮ್ಮತವಾದ ವರ್ತನದಲ್ಲಿ ಒಂದುಗೂಡುವದೇ ಶಿವಯೋಗವು. ಶಿವಪ್ರಣೀತವಾದ ವೇದಾಗಮುಗಳಲ್ಲಿ ಉಕ್ತವಾದ ಅಹಿಂಸಾದಿ ಸಾಮಾನ್ಯ ಧರ್ಮ ಮತ್ತು ವಿಶೇಷ ಧರ್ಮಗಳ ಜ್ಞಾನ ಮಾಡಿಕೊಂಡು ಅದರಂತೆ ಆಚರಿಸಿ ಆತ್ಮ ವಿಕಾಸವನ್ನು ಪಡೆದು ಅದನ್ನೆಲ್ಲ ಸರ್ವತ್ರ ಪ್ರಚಾರ ಪಡಿಸುವದೇ ಇದರ ಮುಖ್ಯ ಉದ್ದೇಶ."

ಸಂಸ್ಥೆಯ ಚಾಲಕ ಪಾಲಕರಲ್ಲಿ ಮುಖ್ಯರಾದವರು ಹಾವೇರಿಯ ಹಾನಗಲ್ ಶ್ರೀ ಕುಮಾರ ಸ್ವಾಮಿಗಳವರು. ಉದಾರ ಚಿತ್ತರೂ ಪ್ರಸಿದ್ಧ ಶಿವಯೋಗಿಗಳೂ ಆದ ಈ ಮಹನೀಯರು ಸಂಸ್ಥೆಯು ಸ್ಥಾಪಿತವಾದಂದಿನಿಂದ ತಮ್ಮ ಜೀವಿತಕಾಲವೆಲ್ಲವನ್ನು ಅದರ ಸಲವಾಗಿ ಕಳೆದು, ಮಂದಿರದ ಪ್ರಕೃತ ಉಚ್ಛ್ರಾಯಸ್ಥಿತಿಗೆ ಕಾರಣೀಭೂತರಾಗಿರುವರು. ಇವರಿಗೆ ಸಲಹೆಗೈಯಾಗಿ ಬಾಗಲಕೋಟೆಯ ಶಾಂತವೀರಸ್ವಾಮಿಗಳು ಮಂದಿರಕ್ಕೆ ಅತ್ಯಂತ ಉಪಕಾರವನ್ನು ಮಾಡಿರುವರು. ಅಲ್ಲದೆ ರೋಣ, ಗುಳೇದಗುಡ್ಡ, ಹಾಳಕೇರಿ, ಹಾಸನ, ಅನಂತಪುರ, ಸೂಡಿ, ಕೆಳದಿ, ಕಲಬುರ್ಗಿ, ಸಿದ್ಧ ಸಮುದ್ರ ಇತ್ಯಾದಿ ಸ್ಥಳಗಳ ಶ್ರೀಗಳವರು ಮಂದಿರದ ಕಾರ್ಯದಲ್ಲಿ ತುಂಬಾ ಸಹಾಯಕರಾಗಿರುತ್ತಾರೆ.

ಪ್ರಕೃತದಲ್ಲಿ ಸಂಸ್ಥೆಗೆ ಒಂದೂವರೆ ಲಕ್ಷಕ್ಕೆ ಮಿಕ್ಕಿ ಬೆಲೆಬಾಳಬಹುದಾದ ಸ್ಥಿರಾಸ್ತಿ ಇರುವದಲ್ಲದೆ ೫೦ ಸಹಸ್ರ ರೂಪಾಯಿಗಳ ನಗದು ಠೇವಣಾತಿ ಇರುವುದು. ಮಂದಿರದ ವಾರ್ಷಿಕ ಉತ್ಪನ್ನವು ಸುಮಾರು ೧೦ ಸಹಸ್ರಗಳು. ಬಾಗಲಕೋಟೆಯ ವೀರಶೈವ ಸದ್ಗೃಹಸ್ಥರು ನಡೆಸುತ್ತಿರುವ ಶಿವಾನಂದ ಜಿನ್ ಅಂಡ್ ಪ್ರೆಸ್ ಫ್ಯಾಕ್ಟರಿ ಮತ್ತು ಶಿವಯೋಗ ಮಂದಿರ ಸ್ಟೋರ್ಸ ಎಂಬೆರಡು ವ್ಯಾಪಾರ ಸಂಸ್ಥೆಗಳಲ್ಲಿ ಶಿವಯೋಗ ಮಂದಿರವು ಸುಮಾರು ೯೦ ಸಹಸ್ರ ರೂಪಾ

ಯಿಗಳ ಬಂಡವಾಳವನ್ನು ಹಾಕಿದ್ದು ಆ ಸಂಸ್ಥೆಗಳ ಅರ್ಧ ವರಮಾನವು ಮಂದಿರಕ್ಕೆ ಬರುತ್ತಿರುವುದು. ಮಂದಿರದಲ್ಲಿರುವ ವಿದ್ಯಾರ್ಥಿಗಳ ಅಶನ ವಸನಗಳಿಗಾಗಿಯೂ ಅಧ್ಯಾಪಕರ ಮತ್ತು ಶಿವಯೋಗಿಗಳ ವೆಚ್ಚಗಳಿಗಾಗಿಯೂ ವರ್ಷ ಒಂದಕ್ಕೆ ಸುಮಾರು ೮-೧೦ ಸಹಸ್ರ ರೂಪಾಯಿಗಳ ಖರ್ಚಾಗುವುದು.

ಮಂದಿರದಲ್ಲಿ ಶಿಕ್ಷಣ ಹೊಂದಿದ ಅನೇಕ ಶಿವಯೋಗಿಗಳು ಕರ್ನಾಟಕವನ್ನೆಲ್ಲಾ ಸುತ್ತುತ್ತಾ ತಮ್ಮ ಅಸ್ಖಲಿತವಾಣಿಯಿಂದ ಮತ ತತ್ವಗಳನ್ನು ಬೋಧಿಸುತ್ತಾ ವೀರಶೈವರಲ್ಲಿ ಜಾಗ್ರತಿಯನ್ನು ಹುಟ್ಟಿಸುತ್ತಿರುವರು. ಇವರಲ್ಲಿ ಶ್ರೀ ವ್ಯಾಕರಣ ಹಾಳಪಟ್ಟದೇವರು, ಶ್ರೀ ಮಹಾಂತ ಸ್ವಾಮಿಗಳು, ಶ್ರೀ ನವಲಗುಂದ ದೇಶಿಕರು, ಶ್ರೀ ಜಡೆಯ ಸಿದ್ಧಲಿಂಗ ಸ್ವಾಮಿಗಳು, ಶ್ರೀ ಶಿರೂರ ಚಿತಾಪುರ ಪಟ್ಟಾಧ್ಯಕ್ಷರು, ಶ್ರೀ ಗುರು ಮಹಾಂತ ದೇಶಿಕರು, ಶ್ರೀ ಬಾಗಲ ಕೋಟೆಯ ಮಹಾದೇವ ದೇಶಿಕರು, ಶ್ರೀ ಶಿವಮೂರ್ತಿ ದೇಶಿಕರು, ಶ್ರೀ ಬದರ ಪಟ್ಟದೇವರು, ಶ್ರೀ ಕೈಲಾಸವಾಸಿ ಸವದತ್ತಿ ಸ್ವಾಮಿಗಳು, ಗೋಣೀ ಬೀಡದ ಶಿದ್ಧವೀರ ಸ್ವಾಮಿಗಳು, ಶ್ರೀ ರುದ್ರಮುನಿ ದೇಶಿಕರು, ಶ್ರೀ ನಿರಂಜನ ದೇಶಿಕರು ಇವರುಗಳೇ ಮುಖ್ಯರಾದವರು.

ಶಿವಯೋಗ ಮಂದಿರವು ಕೈಗೊಂಡಿರುವ ಕಾರ್ಯಗಳಲ್ಲಿ ವೀರಶೈವ ಮತಗ್ರಂಥಗಳ ಪ್ರಸಾರವೂ ಒಂದು. ಈ ಬಗ್ಗೆ ಅವರು ಈಗಾಗಲೇ ಕೆಲವು ಗ್ರಂಥಗಳನ್ನು ಪ್ರಕಟಿಸಿರುವುದಲ್ಲದೆ ಒಂದು ವಾಚನಾಲಯವನ್ನು ಸ್ಥಾಪಿಸಿ ತಾಡಪತ್ರಗಳ ಪ್ರಾಚೀನ ಗ್ರಂಥಗಳನ್ನೂ ಮುದ್ರಣವಾದ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳನ್ನೂ ಸಂಗ್ರಹಿಸುತ್ತಿರುವರು. ಈಗಾಗಲೇ ಸುಮಾರು ೬೦೦ ತಾಡಪತ್ರಗಳ ವಹಿಗಳೂ ಸುಮಾರು ೨೦೦೦ ಅಚ್ಚಾದ ಕನ್ನಡ ಮತ್ತು ಸಂಸ್ಕೃತ ಗ್ರಂಥಗಳೂ ಸಂಗ್ರಹಿಸಲ್ಪಟ್ಟಿವೆ.

ಪುರಾಣ ಕೀರ್ತನಗಳಿಗೆ ಉಪಯುಕ್ತವಾಗುವಷ್ಟು ಸಂಗೀತವೂ ಮಂದಿರದ ವಿದ್ಯಾರ್ಥಿಗಳಿಗೆ ಬೋಧಿಸಲ್ಪಡುತ್ತಿರುವುದು. ಇಲ್ಲಿ ಸಂಗೀತಾಭ್ಯಾಸ ಮಾಡಿ ಕರ್ನಾಟಕ ಮತ್ತು ಹಿಂದೂಸ್ತಾನಿ ಎರಡು ವಿಧದಲ್ಲೂ ಪರಿಶ್ರಮಹೊಂದಿದ ಪಂಚಾಕ್ಷರೀ ಗವಾಯಿಗಳೆಂಬುವರು ಅತ್ಯಂತ ಪ್ರಸಿದ್ಧರಿರುತ್ತಾರೆ.

ಪ್ರಕೃತದಲ್ಲಿ ಶ್ರೀಯುತ ಶಿವಬಸಪ್ಪಾ ಆದಪ್ಪಾ ಮಾಗಿ ಇವರು ಮಂದಿರದ ವ್ಯವಸ್ಥಾಪಕರಾಗಿರುತ್ತಾರೆ. ಮಂದಿರದಲ್ಲಿರತಕ್ಕ ವಿದ್ಯಾರ್ಥಿಗಳಿಗೆ ಎಂತ ಶಿಕ್ಷಣೆಯು ಕೊಡಲ್ಪಡುತ್ತಿರುವದೆಂಬ ಬಗ್ಗೆ ಅವರ ದಿನಚರಿಯ ಕಾರ್ಯಕ್ರಮವನ್ನು ಕೆಳಗೆ ಕೊಟ್ಟಿರುವೆವು.

ಯಾಕಂದರೆ, ಯಾರ ಪರಿಪಕ್ವವಾದ ವಿಚಾರದಿಂದ ಈ ಮಂದಿರವು ಸ್ಥಾಪಿತವಾಗಿರುವದೋ ಆ ಪೂಜ್ಯಪಾದರಾದ ಹಾನಗಲ್ ಶ್ರೀ ಕುಮಾರ ಸ್ವಾಮಿಗಳು ತಮ್ಮ ದೇಶ ಸಂಚಾರದ ಕಾರ್ಯಕ್ರಮವನ್ನು ತಡೆದು ಸುಮಾರು ೭-೮ ತಿಂಗಳಿಂದ ಇಲ್ಲಿಯೇ ವಾಸಮಾಡುತ್ತಿರುವದರಿಂದ ಮಂದಿರವು ಒಳ್ಳೆ ತೇಜೋವಂತವಾಗಿದೆ.

### ಕಾರ್ಯಕ್ರಮ.

ಪ್ರಾತಃಕಾಲ,—ಶಿವಯೋಗ ಮಂದಿರದ ಕೇಂದ್ರ ಸ್ಥಾನದಲ್ಲಿ ಬೆಳಗಿನ ನಾಲ್ಕುವರೆ ಘಂಟೆಗೆ ಸರಿಯಾಗಿ ಪ್ರಾರ್ಥನೆಯ ಘಂಟೆಯು ಬಾರಿಸುತ್ತಲೇ ಎಲ್ಲರೂ ತಮ್ಮ ತಮ್ಮ ಹಾಸಿಗೆಯಿಂದೇಳುತ್ತಾರೆ. ಇಲ್ಲಿ (೧) ಶ್ರೀಗಳು, (೨) ಸಾಧಕರು, (೩) ವಟುಗಳು, (೪) ವನಸ್ಥಾಪಕ ಮಂಡಳಿ, (೫) ಅಧ್ಯಾಪಕರು, (೬) ಸೇವಕರು, ಹೀಗೆ ಆರು ವರ್ಗದ ಜನರಿರುತ್ತಾರೆ. ಇವರೆಲ್ಲರೂ ಬೆಳಗಿನ ಘಂಟೆಯು ಬಾರಿಸುತ್ತಲೇ ಎದ್ದು, ಮುಖ್ಯ ಮಂದಿರದಲ್ಲಿ ಶ್ರೀಗಳ ಸನ್ನಿಧಿಗೆ ಹೋಗಿ ಪ್ರಾರ್ಥನೆಯನ್ನು ಮಾಡಿ, ತಮ್ಮ ತಮ್ಮ ಕಾರ್ಯಗಳಿಗೆ ಹೋಗುತ್ತಾರೆ. ಅಂದರೆ ವಟುಗಳು (ಆರು ವರ್ಷದಿಂದ ಹನ್ನೆರಡು ವರ್ಷದ ಬಾಲಕರು) ಆಸನಗಳನ್ನು ಹಾಕುವದನ್ನು ಮಾಡುತ್ತಾರೆ. ಸಾಧಕರೂ, ಶಾಸ್ತ್ರಿಗಳೂ, ಅಧ್ಯಾಪಕರೂ, ಶ್ರೀ ಹಾನಗಲ್ ಸ್ವಾಮಿಗಳ ಸನ್ನಿಧಿಯಲ್ಲಿ ಶಿವಾನುಭವ ಬೋಧೆಯನ್ನು ಕೇಳುತ್ತಾರೆ. ಬೆಳಗಿನ ಆರು ಘಂಟೆಯಾಗುತ್ತಲೇ ಸಂಕ್ಷಿಪ್ತ ಮಂಗಲವನ್ನು ಹಾಡಿ ಪ್ರಾತರ್ವಿಧಿಗಳನ್ನಾಚರಿಸಿ ಸಾಧಕರೆಲ್ಲರೂ ಸ್ನಾನ ಪೂಜಾದಿಗಳನ್ನು ತೀರಿಸಿಕೊಂಡು ಮಹಾನ್ ಕಠಿಣಗಳಾಗಿರತಕ್ಕಂಥಾ ಯೋಗಸಾಧನೆಗಳನ್ನು ಮಾಡುತ್ತಾರೆ. ಹತ್ತು ಘಂಟೆ ಯಾಗುತ್ತಲೇ ಭೋಜನವನ್ನು ತೀರಿಸಿಕೊಂಡು ಒಂದು ಘಂಟೆಯ ಕಾಲ ವಿಶ್ರಾಂತಿ ದೊರೆಯುತ್ತದೆ. ಅನಂತರ ಪಾಠ ಪ್ರವಚನಗಳು ಪ್ರಾರಂಭವಾಗುತ್ತವೆ. ಪುನಃ ಮಧ್ಯಾಹ್ನ ಎರಡು ಘಂಟೆಯಾಗುತ್ತಲೇ ಶ್ರೀಗಳ ಸನ್ನಿಧಿಯಲ್ಲಿ ಶಿವಾನುಭವ ಬೋಧೆಯು ಪ್ರಾರಂಭವಾಗುತ್ತದೆ. ಸಾಯಂಕಾಲ ಐದು ಘಂಟೆಗೆ ಎಲ್ಲರಿಗೂ ವಿಶ್ರಾಂತಿ ದೊರೆಯುತ್ತದೆ. ಸಾಯಂಕಾಲ ಎಂಟವರೆಘಂಟೆಯತನಕ ಸ್ನಾನಪೂಜಾಭೋಜನಾದಿಗಳೂ ಜರುಗಿ ಪುನಃ ಒಂದು ಘಂಟೆಯವರೆಗೆ ಪಠನಪಾಠನವ್ಯವಸಾಯವು ಜರಗಿ ಹತ್ತು ಘಂಟೆಯಾಗುತ್ತಲೇ ಈಶಪ್ರಾರ್ಥನೆಯನ್ನು ಮಾಡಿ ಸರ್ವರೂ ಮಲಗುತ್ತಾರೆ.

**ಗೋಸಂರಕ್ಷಣೆ.**—ಈ ಸಂಸ್ಥೆಯಲ್ಲಿ ಅಷ್ಟಾವರಣದಲ್ಲೊಂದಾದ ಭಸ್ಮವನ್ನು ಪಂಚಸೂತ್ರಕ್ಕೆ ಸರಿಯಾದ ಲಿಂಗಗಳನ್ನೂ ತಯಾರಿಸುತ್ತಿರುವರು. ಭಸ್ಮೋತ್ಪತ್ತಿಗಾಗಿಯೂ ಹಾಲುಹೈನುಗಳ ಅನುಕೂಲತೆಗಾಗಿಯೂ ಸುಮಾರು ಎರಡು ನೂರು ಆಕಳುಗಳನ್ನು ಒಳ್ಳೇ ವ್ಯವಸ್ಥೆಯಿಂದ ಸಂರಕ್ಷಿಸುತ್ತಿರುವರು. ಅವುಗಳಲ್ಲಿ ಒಂದು ನೂರು ಮುಖ್ಯಶಿವಯೋಗಮಂದಿರದಲ್ಲಿಯೂ ಇನ್ನೊಂದು ನೂರು ಗೋವುಗಳು ತಪನಳ್ಳಿಶಾಖಾಮಂದಿರದಲ್ಲಿಯೂ ಇರುತ್ತವೆ.

ಮುಖ್ಯವಾಗಿ ಈ ಶಿವಯೋಗಮಂದಿರವು ಕರ್ನಾಟಕವಲ್ಲಿ ಒಂದು ಪವಿತ್ರ ಮತ್ತು ಅತ್ಯುಪಯುಕ್ತ ಸಂಸ್ಥೆಯಾಗಿರುತ್ತದೆಂದು ಹೇಳಲು ಯಾವ ಅಭ್ಯಂತರವೂ ಇಲ್ಲ.

---

## ಲಿಂಗಾಯತ ಎಜ್ಯುಕೇಶನ್ ಅಸೋಶಿಯೇಶನ್,

### ವಿಜಾಪುರ.

ವಿಜಾಪುರ ಜಿಲ್ಲೆಯಲ್ಲಿನ ವೀರಶೈವರಲ್ಲಿ ವಿದ್ಯಾಭಿವೃದ್ಧಿಯನ್ನು ಹೆಚ್ಚಿಸುವ ಉದ್ದೇಶದಿಂದ ಈ ಸಂಸ್ಥೆಯು ೩-೧೦-೧೯೧೦ರಲ್ಲಿ ಸ್ಥಾಪಿಸಲ್ಪಟ್ಟು ತಾ|| ೨೦-೫-೧೯೧೫ರಲ್ಲಿ ರಿಜಸ್ಟರ್ ಮಾಡಲ್ಪಟ್ಟಿತು. ಕರ್ನಾಟಕದ ಪ್ರಸಿದ್ಧ ಸಾಹಿತ್ಯ ಸೇವಕರೂ ಲಿಂಗಾಯಿತ ಮುಂದಾಳುಗಳೂ ಆದ ರಾವಸಾಹೇಬ ಫ. ಗು. ಹಳಕಟ್ಟಿಯವರು ಈ ಸಂಸ್ಥೆಯನ್ನು ಸ್ಥಾಪಿಸುವುದರಲ್ಲಿ ಅತ್ಯಂತ ಪರಿಶ್ರಮವನ್ನು ತೆಗೆದುಕೊಂಡುದಲ್ಲದೆ ೧೯೧೦—೧೯೧೫ರವರೆಗೂ ಅಸೋಶಿಯೇಶನ್ನಿನ ಗೌರವ ಕಾರ್ಯದರ್ಶಿಗಳಾಗಿದ್ದು ಸಂಸ್ಥೆಯ ಪುರೋಭಿವೃದ್ಧಿಗೆ ನೆರವಾದವರು.

ಬಿಜಾಪುರದಲ್ಲಿದ್ದ ಮಿಷನ್ ಸ್ಕೂಲನ್ನು ೧೯೧೭ರಲ್ಲಿ ಈ ಸಂಸ್ಥೆಯವರು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು "ದಿ ನ್ಯೂ ಇಂಗ್ಲಿಷ್ ಸ್ಕೂಲ್" ಎಂಬ ಹೆಸರಿನಿಂದ ಅದನ್ನು ಈಗ ನೆಡೆಸುತ್ತಿರುವರು. ಬಿಜಾಪುರದ ಯಾವತ್ತೂ ವೀರಶೈವ ವರ್ತಕರು ತಮ್ಮ ಧರ್ಮಾದಾಯವನ್ನು ಸಂಘಕ್ಕೆ ಕೊಡುತ್ತಿರುವರು. ಅಲ್ಲದೆ ಈ ಕೆಳಗೆ ಕಂಡವರು ಸಂಸ್ಥೆಗೆ ಹೆಚ್ಚಿಗೆ ಧನಸಹಾಯ ಮಾಡಿರುವರು ಮತ್ತು ವಾಗ್ದಾನ ಮಾಡಿರುವರು.

ಶ್ರಿಸಿದ್ಧೇಶ್ವರ ದೇವಸ್ಥಾನ ಸಂಸ್ಥಾನದಿಂದ ರೂ. ೬,೬೬೫.

ಶ್ರಿಮಂತ ಸಂಗಪ್ಪ ಅಮೀನಪ್ಪ ಸರ್ ದೇಶಾಯಿ ರಕ್ಕಸಗಿ ರೂ. ೨,೦೦೦,

ಶ್ರಿಮಂತ ಶಿವಸಿದ್ದಪ್ಪ ಈರಪ್ಪ ಸರ್ ನಾಯಕ ರೂ. ೨,೦೦೦.

ರಾ|| ಸಾ|| ಶಿವಲಿಂಗ ರಾವ್ ಜಗದೇವ ರಾವ್ ದೇಶಮುಖ ಅಲಮೇಲ, ರೂ. ೨,೦೦೦.

ಶ್ರಿಮತಿ ಸೋಮಾಬಾಯಿ ಭರ್ತಾರ ಕಾಡಪ್ಪ ದೇಶಾಯಿ ಕೂಣ್ಣೂರು. ರೂ. ೨೦೦೦

ಶ್ರಿಯುತ ವೀರಪ್ಪಾ ಶಿದ್ದಪ್ಪಾ ಮುಬಲಗುಂಡಿ ರೂ. ೨,೦೭೫.

,, ಬಸಲಿಂಗಪ್ಪಾ ಉಂಬರಜಿ ರೂ. ೨,೦೭೫.

,, ರುದ್ರಗೌಡಾ ಮಲ್ಲಿನಗೌಡಾ ಪಾಟಿಲ ರೂ. ೨,೫೫೦.

ಸಂಸ್ಥೆಯು ಪ್ರಾರಂಭವಾದಾಗಿನಿಂದ ಸುಮಾರು ೫೦ ಸಹಸ್ರ ರೂಪಾಯಿಗಳ ನಿಧಿಯು ಶೇಖರಿಸಲ್ಪಟ್ಟು ಅದರಲ್ಲಿ ಬಹುತೇಕ ಹಣವು ಸಂಸ್ಥೆಗೆ ಸಂಭಂದಪಟ್ಟ ಶಾಲೆಯ ಮತ್ತು ಹಾಸ್ಟಲಿನ ಕಟ್ಟಡಗಳ ಸಲವಾಗಿ ವೆಚ್ಚಮಾಡಲ್ಪಟ್ಟದೆ.

**ಕಾರ್ಯಕಾರೀ ಮಂಡಳಿ. ೧೯೨೬.**

**ಅಧ್ಯಕ್ಷರು.**

(೧) ಶ್ರೀಮಂತ ಸಂಗಪ್ಪ ಸರದೇಸಾಯಿ ರಕ್ಕಸಗಿ, ಎಂ ಎಲ್. ಸಿ.

**ಉಪಾಧ್ಯಕ್ಷರು.**

(೨) ಶ್ರೀಮಂತ ಗಂಗಪ್ಪ ದೇಸಾಯಿ ಸೊನ್ನ.

**ಕಾರ್ಯಕಾರೀ ಮಂಡಳಿ.**

(೩) ಶ್ರೀಮಂತ ಶಿವಶಿದ್ದಪ್ಪ ವೀರಪ್ಪ ಸರನಾಯಿಕ, ಹಲಗಲಿ.

(೪) ಮಿ|| ಮುದಿಗೌಡಪ್ಪ ಪಾಟೀಲ, ಬಬಲಾದ.

(೫) ಮಿ|| ಬಸಲಿಂಗಪ್ಪ ಗಂಗಪ್ಪ, ಮೋಟಗಿ.

(೬) ಮಿ|| ಶಂಕರಪ್ಪ ಧನಶೆಟ್ಟಿ.

(೭) ಮಿ|| ಮಹಾಲಿಂಗಪ್ಪ ಚನಮಲ್ಲಪ್ಪ ಕೋರಿ

(೮) ಮಿ|| ಷಣ್ಮುಖಯ್ಯ ರೇವತಗಾಂವ.

**ಗೌರವ ಕಾರ್ಯದರ್ಶಿ.**

(೯) ಮಿ|| ಚನಮಲ್ಲಪ್ಪ ದಾನಪ್ಪ, ಅರಬಳ್ಳಿ ಬಿ.ಎ., ಎಲ್.ಎಲ್.ಬಿ. ವಕೀಲ.

ಅಸೋಸಿಯೇಶನ್ನವರ ವತಿಯಿಂದ ಈಕೆಳಗೆ ಕಂಡ ಸಂಸ್ಥೆಗಳು ನಡೆಸಲ್ಪಡುತ್ತವೆ.

## ೧ ದಿ ನ್ಯೂ ಇಂಗ್ಲೀಷ್ ಸ್ಕೂಲ್,

**ವಿಜಾಪುರ.**

ಸಂಸ್ಥೆಯವರು ಈ ಶಾಲೆಯನ್ನು ಮಿಷನ್ನಿನವರಿಂದ ತೆಗೆದುಕೊಂಡ ವಿಷಯವನ್ನು ಹಿಂದೆಯೇ ಹೇಳಿರುವೆವು. ಪ್ರಕೃತದಲ್ಲಿ ಶಾಲೆಯ ಬಗ್ಯೆ ಸರ್ಕಾರದವರು ೩ ಸಹಸ್ರ ರೂಪಾಯಿ ಗ್ರಾಂಟನ್ನು ಕೊಡುತ್ತಿರುವರು. ಶಾಲೆಯಲ್ಲಿ ಏಳು ಇಯತ್ತೆಗಳಿದ್ದು ೨೧೦ ಜನ ಬಾಲಕರು ಕಲಿಯುತ್ತಿರುವರು. ಒಟ್ಟು ೧೫ ಜನ ಮಾಸ್ತರುಗಳಿದ್ದು ಶ್ರೀಯುತ ಆರ್. ಎಲ್. ಜವಳಿ ಬಿ. ಎಸ್.ಸಿ., ಯವರು ಮುಖ್ಯಾಧ್ಯಾಪಕರಾಗಿರುವರು. ಶಾಲೆಯ ಇರುವಿಕೆಗಾಗಿ ಸುಮಾರು ೧ ಲಕ್ಷ ಕಿಮ್ಮತ್ತಿನಿಂದ ಒಂದು ದಿವ್ಯ ಮಂದಿರವು ಕಟ್ಟಲ್ಪಟ್ಟಿರುವುದು. ಶಾಲೆಯ ವ್ಯವಸ್ಥೆಯನ್ನು ಪರಿಶೀಲಿಸುತ್ತಾ ಯೂನಿವರ್ಸಿಟಿ ಕಮಿಶನ್‌ಯವರು ಕೆಳಗೆ ಕಂಡಂತೆ ಹೇಳಿರುವರು. "ವಿಜಾಪುರ ಜಿಲ್ಲೆಯ ಲಿಂಗಾಯಿತರು ಧೈರ್ಯವುಳ್ಳವರಾಗಿರುವುದರಿಂದಲೂ ಮತ್ತು ಅವರು ನೆಡೆಸಿದ ಧರ್ಮಾದಾಯ ಪದ್ಧತಿಯಿಂದಲೂ ಶಾಲೆಗೆ ಹಣದಕೊರತೆ ಬೀಳುವ ಸಂಭವವಿಲ್ಲ."

## ೨ ಲಿಂಗರಾಜ ಹಾಸ್ಟೆಲ್,

**ವಿಜಾಪುರ.**

ಲಿಂಗಾಯತ ವಿದ್ಯಾರ್ಥಿಗಳ ಅನುಕೂಲತೆಯ ಸಲವಾಗಿ ಸಂಸ್ಥೆಯವರು ಈ ಬೋರ್ಡಿಂಗನ್ನು ಕಳೆದ ಐದು ವರ್ಷಗಳಿಂದ ನಡೆಸುತ್ತಿರುವರು. ಪ್ರಕೃತದಲ್ಲಿ ಬೋರ್ಡಿಂಗಿನಲ್ಲಿ ೧೮ ಜನ ವಿದ್ಯಾರ್ಥಿಗಳಿರುತ್ತಾರೆ. ಬೋರ್ಡಿಂಗಿನ ಸಲವಾಗಿ ಒಂದು ಕಟ್ಟಡವು ಕಟ್ಟಲ್ಪಟ್ಟಿರುವುದು.

ಇದಲ್ಲದೆ ಅಸೋಶಿಯೇಶನ್ನಿನವರು ತಾಳಿಕೋಟಿ ಮತ್ತು ಗುಳೇದ ಗುಡ್ಡ ಈ ಎರಡು ಸ್ಥಳಗಳಲ್ಲಿ ಇಂಗ್ಲೀಷ್ ಶಾಲೆಗಳನ್ನು ಸ್ಥಾಪಿಸಿ ನಡೆಸುತ್ತಿದ್ದಾರೆ.

---

## ವೀರಶೈವ ಧರ್ಮಗ್ರಂಥ ಪ್ರಸಾರಕ ಸಂಘ,

**ವಿಜಾಪುರ.**

ವೀರಶೈವ ಧರ್ಮಗ್ರಂಥಗಳ ಸಂಶೋಧನ ಮತ್ತೂ ಪ್ರಸಾರದ ಬಗ್ಯೆ ಈ ಸಂಸ್ಥೆಯ ರಾ|| ಸಾ|| ಹಳಕಟ್ಟಿಯವರ ಪ್ರೋತ್ಸಾಹದಿಂದ ಬಿಜಾಪುರದಲ್ಲಿ ೨೩-೧-೧೯೨೭ರಲ್ಲಿ ಸ್ಥಾಪಿಸಲ್ಪಟ್ಟಿತು. ಸಂಘವು ಈ ವರ್ಷ ಆಗಮ ಮೊದಲಾದ ಪುರಾತನ ಗ್ರಂಥಗಳನ್ನು ಅಚ್ಚು ಹಾಕುವುದು ಶಿಲಾ ಲೇಖಗಳಸಂಗ್ರಹ, ಧರ್ಮಗ್ರಂಥಾಲಯ ಸ್ಥಾಪನೆ, ಮೊದಲಾದ ಕಾರ್ಯಗಳನ್ನು ಕೈಗೊಂಡಿದ್ದಾರೆ. ಹಾಗೂ ವೀರಶೈವಾಗಮ ಮತ್ತು ವಚನಶಾಸ್ತ್ರದಲ್ಲಿ ಅತ್ಯಂತ ಮಹತ್ವದ ಅನೇಕ ಗ್ರಂಥಗಳನ್ನು ಆಗಲೇ ಸಂಗ್ರಹಿಸಿರುತ್ತಾರೆ, ಅಸಂಖ್ಯಾತ ಶಿಲಾಲೇಖಗಳ ಸಂಗ್ರಹ ಮಾಡಿರುತ್ತಾರೆ.

ರಾ|| ಸಾ|| ಫ. ಗು. ಹಳಕಟ್ಟಿಯವರು ಸಂಸ್ಥೆಯ ಅಧ್ಯಕ್ಷರಾಗಿರುತ್ತಾರೆ.

---

## ಶ್ರೀ ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ,

**ಬಾಗಲಕೋಟೆ.**

ಬಾಗಲಕೋಟೆ ಹಿರೇಮಠದ ಶ್ರಿಮನ್ನಿರಂಜನ ನಿರಾಭಾರಿಗಳಾದ ರೇವಣಸಿದ್ಧ ಸ್ವಾಮಿಗಳವರ ಪ್ರೋತ್ಸಾಹದಿಂದ ಶ್ರಿಮನ್ನಿರಂಜನ

ನಿರಾಭಾರಿ, ಬೀಳೂರು ಶ್ರೀ ಗುರುಬಸವ ಮಹಾಸ್ವಾಮಿಗಳವರೂ ಶ್ರೀ ಮದ್ಘನಲಿಂಗ ಚಕ್ರವರ್ತಿಗಳಾದ ಕೋಹಳ್ಳಿ ಪಟ್ಟಾಧ್ಯಕ್ಷರೂ ಕೂಡಿ ಈ ಸಂಸ್ಥೆಯನ್ನು ೧೯೦೭ರಲ್ಲಿ ಬಾಗಲಕೋಟೆಯಲ್ಲಿ ಸ್ಥಾಪಿಸಿದರು.

ಪ್ರಕೃತ ಸಂಘದಲ್ಲಿ ೫೦ ಸಹಸ್ರ ರೂಪಾಯಿನಿಧಿಯಿರುವುದು. ಬಾಗಲಕೋಟೆಯ ವೀರಶೈವ ಸದ್ಗೃಹಸ್ಥರೆಲ್ಲರೂ ನಿಧಿಗೆ ಸಹಾಯ ಮಾಡಿರುವರು ಹಾಗೂ ಮ. ರಾ. ರುದ್ರಪ್ಪಅಂಣಾ ಗೂಗವಾಡ ಮತ್ತು ಬಸಪ್ಪಾ ಅಣ್ಣಾ ಮೋಟಗಿ ಇವರು ಹೆಚ್ಚಿಗೆ ಧನವನ್ನು ಕೊಟ್ಟಿರುವರು.

ಸಂಘದ ವತಿಯಿಂದ ಈ ಕೆಳಗಿನ ಸಂಸ್ಥೆಗಳು ನೆಡೆಯಿಸಲ್ಪಡುತ್ತಿರುವುದು.

## ೧ ಸಂಸ್ಕೃತ ಪಾಠಶಾಲಾ,

### ಬಾಗಲಕೋಟೆ.

**ಅಧ್ಯಾಪಕರು.**

ವೇ|| ಪಂ. ಕಲಿಗಣನಾಥ ಶಾಸ್ತ್ರಿಗಳು.

ಶಾಲೆಯಲ್ಲಿ ೨೦ ಜನ ವಿದ್ಯಾರ್ಥಿಗಳು ಕಲಿಯುತ್ತಿರುವರು.

## ೨ ಶ್ರೀ ಬಸವೇಶ್ವರ ಹೈಸ್ಕೂಲ್.

ಇದು ಈಗ ಹುಂಡೇಕಾರ ಮಠದ ಭವ್ಯವಾದ ಮಂದಿರದಲ್ಲಿರುತ್ತದೆ. ಶಾಲೆಗೆ ಹೊಂದಿರುವ ಸಾಯನ್ಸಹಾಲ್ ಹೊಸದಾಗಿ ಬಹು ರಮಣೀಯವಾಗಿ ಕಟ್ಟಿಸಲ್ಪಟ್ಟಿದೆ. ಈಗ ಶಾಲೆಯಲ್ಲಿ ೭೩ ಜನ ಅಧ್ಯಾಪಕರಿರುವರು ಮತ್ತು ಸುಮಾರು ೩೦೦ ಜನ ವಿದ್ಯಾರ್ಥಿಗಳು ಕಲಿಯುತ್ತಿರುವರು.

## ೩ ವಾಚನಾಲಯ.

ಶ್ರೀ ಬೀಳೂರು ಗುರುಬಸವ ಸ್ವಾಮಿಗಳ ಹೆಸರಿನಿಂದ ನಡೆಯುತ್ತಿದೆ. ಸಂಘದವರು ವಾಚನಾಲಯದ ಸಲವಾಗಿ ೫೦ ರೂಪಾಯಿಗಳ ಗ್ರಾಂಟನ್ನು ಕೊಡುತ್ತಿದ್ದಾರೆ.

## ರಾವ್ ಬಹಾದ್ದೂರ್ ಅಪ್ಪಾಸಾಹೇಬ ವಾರದ ಫ್ರೀ ಬೋರ್ಡಿಂಗ್.

ಈ ಬೋರ್ಡಿಂಗಿನ ಬಗ್ಗೆ ಬಾಗಲಕೋಟೆ ವೀರಶೈವ ತರುಣ ಸಂಘದವರು ವರ್ಷಂಪ್ರತಿ ರೂ. ೨೫೦ ಗ್ರಾಂಟನ್ನು ಕೊಡುತ್ತಿರುವರು.

ಇದಲ್ಲದೆ ಸಂಘದವರು ಸ್ವತಂತ್ರವಾಗಿ ಮತ್ತೊಂದು ಹೈಸ್ಕೂಲನ್ನು ಏರ್ಪಡಿಸಲು ಕಟ್ಟಡವನ್ನು ಕಟ್ಟಿಸುತ್ತಿರುವರು. ಕಟ್ಟಡವು ಮುಗಿಯಲು ಒಂದು ಲಕ್ಷ ರೂಪಾಯಿ ಅಂದಾಜಾಗುವುದು. ಶ್ರೀಯುತರಾದ ವೇ|| ಬಸಯ್ಯನವರು ದಂಡಾವತಿ, ವೀರಸಂಗಪ್ಪಾ ಗೌಡರ ಇವರು ಈ ವಿಷಯದಲ್ಲಿ ಅಧಿಕ ಪರಿಶ್ರಮವನ್ನು ವಹಿಸಿರುವರು.

### ಅಧಿಕಾರ ಮಂಡಲ.

**ಅಧ್ಯಕ್ಷರು.**

೧. ಶ್ರೀಮನ್ನಿರಂಜನ ನಿರಾಭಾರಿ ಬೀಳೂರ ಗುರುಬಸವ ಮಹಾಸ್ವಾಮಿಗಳು.

**ಉಪಾಧ್ಯಕ್ಷರು.**

೨. ಲೋಚನಪ್ಪಾ ಇರಪ್ಪಾ, ಗೂಗವಾಡ.

**ಚೇರ್‌ಮ್ಯಾನರು.**

೩. ವೀರಸಂಗಪ್ಪಾ ಸಂಗಪ್ಪಾ ಗುಡ್ಡದ.

**ಸೆಕ್ರಿಟರಿ.**

ಮುರಿಗೆಯ್ಯಾ ಸೋಮಯ್ಯಾ ಜಂಗಿನ.

**ಮೆಂಬರು, ಸ್ಕೂಲ ಬೋರ್ಡ.**

೧. ಶಿವಪ್ಪಾ ಕಂಕಣಮೇಲಿ (ಚೇರ್‌ಮ್ಯಾನ್).
೨. ವೀರಪ್ಪಾ ಬಸಲಿಂಗಪ್ಪಾ ರೆಣಗಿ, ಬಿ. ಎ. ಎಲ್. ಎಲ್. ಬಿ., ವಕೀಲ.
೩. ವೀರಸಂಗಪ್ಪಾ ಸಂಗಪ್ಪಾ ಗುಡ್ಡದ.
೪. ಶಿವಲಿಂಗಪ್ಪಾ ನವಲಗಿ.
೫. ದಾಸಪ್ಪಾ ತಾಳಿಕೋಟಿ.
೬. ಮಹಾಗುಂಡಯ್ಯ ದೂಂಬರಸಾಲಿ.
೭. ತಿಮ್ಮನಗೌಡಾ ಕಲ್ಲಾಪೂರ ಮಾಸ್ತರ.
೮. ಕಲ್ಲಪ್ಪಾ ದೇಪೂರ, ಬಿ.ಎಸ್.ಸಿ., ಮಾಸ್ತರ,
೯. ಮುರಿಗಯ್ಯಾ ಜಂಗಿನ.
೧೦. ಮಹಾಂತಪ್ಪಾ ಕಲಬುರ್ಗಿ, ಬಿ.ಎ., ಎಲ್.ಎಲ್.ಬಿ., ವಕೀಲ, (ಸೆಕ್ರೆಟರಿ).

---

## ವೀರಶೈವ ತರುಣ ಸಂಘ.

### ಬಾಗಲಕೋಟೆ.

ಈ ಸಂಸ್ಥೆಯು ಬಾಗಲಕೋಟೆಯಲ್ಲಿ ತಾ|| ೧೧-೧೧-೧೯೨೦ ರಲ್ಲಿ ಸ್ಥಾಪಿಸಲ್ಪಟ್ಟಿತು ವೀರಶೈವ ಸಾಮಾಜಿಕ ಪುರೋವೃದ್ಧಿಗೆ ಸಹಾಯಕವಾದ ಯಾವತ್ತೂ ಕಾರ್ಯಗಳನ್ನು ಕೈಗೊಂಡು ಅವುಗಳು ಫಲಪ್ರದವಾಗುವಂತೆ ಮಾಡುವುದೇ ಸಂಘದ ಮುಖ್ಯೋದ್ದೇಶವು.

ಈ ಸಂಘದವತಿಯಿಂದ ಸ್ಥಾಪಿತವಾದ ಶ್ರೀ ಗುರುಬಸವ ವಾಚನಾಲಯಕ್ಕೆ ಬಾಗಲಕೋಟೆಯ ಮುನಿಸಿಪಾಲಿಟಿಯಿಂದ ೫೦ ರೂಪಾಯಿಗಳೂ, ಬಾಗಲಕೋಟೆಯ ಶ್ರೀ ಬಸವೇಶ್ವರ ವಿದ್ಯಾವರ್ಧಕ ಫಂಡಿನಿಂದ ೫೦ ರೂಪಾಯಿಗಳೂ ಪ್ರತಿವರ್ಷ ಗ್ರಾಂಟು ಬರುತ್ತಿದೆ. ಈ ವಾಚನಾಲಯಕ್ಕೆ ಒಂದು ಕಟ್ಟಡವನ್ನು ಕಟ್ಟಸುವುದಕ್ಕೋಸ್ಕರ ಬಾಗಲಕೋಟೆಯ ಮುನಿಸಿಪಾಲಿಟಿಯವರು ೨ ಎಕರೆ ಜಮೀನನ್ನು ಉಚಿತವಾಗಿ ಕೊಟ್ಟಿರುತ್ತಾರೆ.

ಕೆಳಗೆ ಕಾಣಿಸಿದ ದೊಡ್ಡ ಮನುಷ್ಯರು ಸಂಘದ ಕಾರ್ಯಕಾರಿ ಮಂಡಲದ ಅಧಿಕಾರಿಗಳಾಗಿದ್ದಾರೆ—

**ಅಧ್ಯಕ್ಷರು.**

ಮ|| ರಾ|| ಶಿವಪ್ಪ ಶಿವಬಸಪ್ಪ ಮುದ್ದೇಬಿಹಾಳ.

**ಉಪಾಧ್ಯಕ್ಷರು.**

ಮ|| ರಾ|| ಸಂಗಬಸಪ್ಪ ಶಿವಪ್ಪ ಪಲ್ಲೇದ.

**ಕಾರ್ಯದರ್ಶಿಗಳು.**

ಮ|| ರಾ|| ಗದಿಗೆಪ್ಪ ರುದ್ರಪ್ಪ ಕಲಾದಿಗಿ.
,, ನಾಗಪ್ಪ ರಾಚಪ್ಪ ಬ್ಯಾಳಿ.

---

## ಶ್ರೀ ವಾರದ ವೀರಶೈವ ಫ್ರೀ ಬೋರ್ಡಿಂಗ್,

### ಬಾಗಲಕೋಟೆ.

ಈ ಸಂಸ್ಥೆಯು ಬಾಗಲಕೋಟೆಯಲ್ಲಿ ಸುಮಾರು ೧೫ ವರ್ಷಗಳ ಕೆಳಗೆ ಸ್ಥಾಪಿಸಲ್ಪಟ್ಟು ನಡೆಯುತಿದ್ದು ಈಗ ನಾಲ್ಕು ವರ್ಷಗಳಿಂದ ವೀರಶೈವತರುಣ ಸಂಘದವರ ಆಡಳಿತಕ್ಕೊಳಪಟ್ಟಿರುತ್ತದೆ. ಈಗ ಬೋರ್ಡಿಂಗಿನಲ್ಲಿ ೧೫ ಜನ ಬಡವಿದ್ಯಾರ್ಥಿಗಳಿರುತ್ತಾರೆ. ಅವರ ಅಶನವಸತಿಗಳ ಏರ್ಪಾಡು ಉಚಿತವಾಗಿ ಮಾಡಲ್ಪಟ್ಟಿದೆ.

ಬಾಗಲಕೋಟೆಯ ಶ್ರೀ ಬಸವೇಶ್ವರ ವಿದ್ಯಾವರ್ಧಕ ಸಂಘದವರು ಪ್ರತಿವರ್ಷ ೫೦ ರೂಪಾಯಿಗಳನ್ನೂ ಬಾಗಲಕೋಟೆಯ ಸುಪ್ರಸಿದ್ಧ ವರ್ತಕರಾದ ಮ॥ ರಾ॥ ಸಂಗಪ್ಪಾ ಮಹಾಂತಾಪ್ಪಾ ಶೆಟ್ಟರ ಇವರು ೧೫೦ ರೂಪಾಯಿಗಳನ್ನೂ ದೇಣಗಿಯಾಗಿ ಕೊಡುತ್ತಿರುವರು.

---

## ವೀರಶೈವ ವಿದ್ಯಾಲಯ,

### ಆಲಮಟ್ಟಿ.

ಈ ವಿದ್ಯಾಲಯವು ವಿಜಾಪುರ ಜಿಲ್ಲಾ ಬಾಗೇವಾಡಿ ತಾಲ್ಲೂಕ ಆಲಮಟ್ಟಿ ಸ್ಥಳದಲ್ಲಿ ಶಕೆ ೧೮೪೯ ನೆಯ ವೈಶಾಖ ಶು॥ ೧೨ ದಿವಸ ಸಾಪ್ಥಿಸಲ್ಪಟ್ಟದ್ದಾಗಿದೆ. ಆಲಮಟ್ಟಿ ಹಿರೇಮಠದ ಶ್ರೀ ಘನಲಿಂಗ ಚಕ್ರವರ್ತಿ ಶ್ರೀ ಅನ್ನದಾನಸ್ವಾಮಿಗಳವರು ಸಾಧಾರಣ ೨೦ ಸಹಸ್ರ ರೂ. ವೆಚ್ಚಮಾಡಿ ಕಟ್ಟಿಸಿದ ಭವ್ಯವಾದ ಮಠವನ್ನು ಈ ವಿದ್ಯಾಲಯದ ಉಪಯೋಗಕ್ಕೆ ಕೊಟ್ಟಿರುವುದಲ್ಲದೆ, ಅದಕ್ಕೆ ಹೊಂದಿರತಕ್ಕ ಮಠದ ಪ್ರದೇಶದಲ್ಲಿ ೨ ಎಕರೆ ಭೂಮಿಯನ್ನು ವಿದ್ಯಾಲಯಕ್ಕೆ ದಾನವಾಗಿ ಈಗಿನ ಯಜಮಾನರಾದ ಶ್ರೀ ನೂರೊಂದಯ್ಯನವರು ಒಪ್ಪಿರುವರು.

ಆಲಮಟ್ಟಿಯು ಕೃಷ್ಣಾನದಿಯ ತೀರದಲ್ಲಿದ್ದು ಜಿಲ್ಲೆಯ ಮಧ್ಯಪ್ರದೇಶವಾಗಿದೆ. ಅತ್ಯುತ್ತಮವಾದ ಹವೆ; ಮತ್ತು ಉನ್ನತವಾದ ಪವಿತ್ರಸ್ಥಾನವು.

ವಿದ್ಯಾಲಯದ ಉದ್ದೇಶಗಳಲ್ಲಿ ಈ ಕೆಳಗಿನವು ಮುಖ್ಯವಾದವು.

೧. ವೀರಶೈವ ಬಾಲಕರಿಗೆ ಆರಂಭದಲ್ಲಿಯೇ ಧಾರ್ಮಿಕ ಮತ್ತು ನೈತಿಕ ಶಿಕ್ಷಣಗಳು ದೊರೆತು ಅವರ ಆತ್ಮೀಯ ಮಾನಸಿಕ ಮತ್ತು ಶಾರೀರಿಕ ಬಲಗಳು ಹೆಚ್ಚಿ, ಚಾರಿತ್ರ್ಯವು ಪವಿತ್ರತರವಾದುದಾಗುವಂತೆ ಮಾಡುವದು,

೨. ವಿದ್ಯಾರ್ಥಿಗಳು ಕನ್ನಡ, ಇಂಗ್ಲೀಷ್, ಮರಾಠಿ ಭಾಷೆಗಳನ್ನರಿತುಕೊಂಡು ಸುಸಂಸ್ಕೃತರಾಗಿ ಒಕ್ಕಲತನ, ವ್ಯಾಪಾರ, ಕೈಗಾರಿಕೆಗಳಿಂದ ಸ್ವತಂತ್ರ ಜೀವನವನ್ನು ನಡೆಯಿಸಿಕೊಳ್ಳಲು ಸಮರ್ಥರಾಗುವಂತೆ ಮಾಡುವದು.

೩. ಬುದ್ಧಿಶಾಲಿಗಳು ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಉಚ್ಚತರದ ಶಿಕ್ಷಣವನ್ನು ಹೊಂದಿ, ಎಲ್ಲಾ ಧರ್ಮಗಳನ್ನು ತುಲನಾತ್ಮಕ ದೃಷ್ಟಿಯಿಂದ ಅಧ್ಯಯನಮಾಡಿ, ಜನರಲ್ಲಿ ಸ್ವಧರ್ಮಾಭಿಮಾನವನ್ನೂ, ಪರಧರ್ಮ ಸಹಿಷ್ಣುತೆಯನ್ನೂ ಉಂಟುಮಾಡಲು ಧರ್ಮೋಪದೇಶಕರಾಗುವಂತೆ ಮಾಡುವದು.

೪. ಈ ಧಾರ್ಮಿಕ, ನೈತಿಕ, ಶಾರೀರಿಕ, ಬೌದ್ಧಿಕ ಮತ್ತು ಔದ್ಯೋಗಿಕ ಶಿಕ್ಷಣಗಳನ್ನು ಆರ್ಯಸಂಸ್ಕೃತಿಗನುಸರಿಸಿ ಪ್ರಾಚೀನ ಕಾಲದ ಗುರುಕುಲಗಳಲ್ಲಿ ದೊರೆಯುತ್ತಿದ್ದಂತೆ ಕೊಡುವುದು.

೫. ವೀರಶೈವ ವಿದ್ವಾಂಸರಿಗೆ ಬೇರೆಬೇರೆ ವಿಷಯಗಳ ಸ್ವಂತ ಅಧ್ಯಯನ ಮತ್ತು ಪರಿಶೋಧನಗಳಿಗೆ ಅವಕಾಶವಾಗುವಂತೆ ಗ್ರಂಥ ಭಂಡಾರವನ್ನು ಏರ್ಪಡಿಸುವುದು.

ವಿದ್ಯಾಲಯದಲ್ಲಿ ಸದ್ಯಕ್ಕೆ ೫೫ ಜನ ಹುಡುಗರು ವ್ಯಾಸಂಗ ಮಾಡುತ್ತಿರುವರು. ಶ್ರಿಯುತ ಬ್ಯಾಳಿ ಕಲ್ಯಾಣಪ್ಪ, B.A., ಯವರು ವಿದ್ಯಾಲಯದ ಮುಖ್ಯೋಪಾಧ್ಯಾಯರಾಗಿರುವರು.

## ವಿದ್ಯಾಲಯದ ಅಧಿಕಾರಿ ಮಂಡಲ.

### ಅಧಿಪತಿಗಳು.

ಶ್ರಿಮನ್ನಿರಂಜನ ಬಂಥನಾಳ ಶ್ರೀ ಸಂಗನಬಸವ ಸ್ವಾಮಿಗಳವರು.

### ಉಪಾಧಿಪತಿಗಳು.

ರಾವಸಾಹೇಬ ಫ. ಗು. ಹಳಕಟ್ಟಿ, ಬಿ.ಎ., ಎಲ್.ಎಲ್.ಬಿ., ವಿಜಾಪುರ.

### ಸಹಾಯಾಧಿಪತಿಗಳು.

ಶ್ರಿಯುತ ಹರ್ಡೆಕರ್ ಮಂಜಪ್ಪನವರು.

### ಕೋಶಾಧಿಪತಿ.

ಶ್ರಿಯುತ ಮೋಟಗಿ ಸಂಗಣ್ಣನವರು, ಮುದ್ದೇಬಿಹಾಳ.

ಪತ್ರವ್ಯವಹಾರಮಾಡತಕ್ಕ ವಿಳಾಸ—ಸಹಾಯಾಧಿಪತಿ,
ವೀರಶೈವ ವಿದ್ಯಾಲಯ
ಆಲಮಟ್ಟಿ, ಪೋಸ್ಟ್ ಚಿಮಲಗಿ, ಜಿಲ್ಲಾ ವಿಜಾಪುರ.

---

## ವೀರಶೈವತರುಣ ಸಂಘ.

### ಬಬಲೇಶ್ವರ, (ಬಿಜಾಪುರ.)

ಶ್ರೀ ಶಾಂತವೀರ ಮಹಾಸ್ವಾಮಿಗಳ ಉದಾರಾಶ್ರಯದಲ್ಲಿ ತಾ॥ ೧೫-೧-೧೯೨೮ರಲ್ಲಿ ಈ ಸಂಘವು ಸ್ಥಾಪಿತವಾಯಿತು. ಅಲ್ಲಿನ ವೀರಶೈವ ವರ್ತಕಮಂಡಲದವರ ಧರ್ಮಾದಾಯದ ವಸೂಲಿ ಮತ್ತು ಇತರ ದೇಣಗಿಗಳೇ ಸಂಘದ ಮೂಲಧನವಾಗಿರುತ್ತದೆ.

### ಅಧ್ಯಕ್ಷರು.

ಶ್ರಿಯುತ ವ್ಹಿ. ಬಿ. ಪಾಟೇಲ್ B,A LL,B. ವಕೀಲ.

### ಸಹಾಯಕರು.

ಶ್ರಿಯುತ ಬಸಪ್ಪ ಮಂಗಳವೇಢೆ.
" ಹುಲಿಯಪ್ಪ ಹಿರೇಮನಿ.
" ವೀರಪ್ಪಾ ಅಕೋಟೆ.

ಸಂಘವು ಸ್ಥಾಪಿತವಾದ ಮರು ವರ್ಷದಲ್ಲೇ ಸಂಘದಿಂದ ಬಬಲೇಶ್ವರದಲ್ಲಿ ಒಂದು ಇಂಗ್ಲೀಷ್ ಶಾಲೆಯು ಸ್ಥಾಪಿಸಲ್ಪಟ್ಟಿರುವುದು. ಶಾಲೆಯಲ್ಲಿ ನಾಲ್ಕು ಇಯತ್ತೆಗಳಿದ್ದು ಅನೇಕ ಬಡಹುಡುಗರ ವಿದ್ಯಾಭ್ಯಾಸವು ನಡೆದಿರುವುದು. ಮಿ. ಜಗದಾಳ ಇವರು ಶಾಲೆಯ ಹೆಡ್ಮಾಸ್ತರಾಗಿರುವರು.

## ಮಹಾರಾಷ್ಟ್ರ ವೀರಶೈವ ವಿದ್ಯಾವರ್ಧಕ ಸಂಘ,

### ಕೊಲ್ಲಾಪುರ.

ಸಂಘದವತಿಯಿಂದ ವೀರಶೈವ ವಿದ್ಯಾರ್ಥಿಗಳ ಸಲವಾಗಿ ಒಂದು ವಿದ್ಯಾರ್ಥಿ ನಿಲಯವು ನೆಡೆಸಲ್ಪಡುತ್ತಿದೆ. ಸದ್ಯದಲ್ಲಿ ನಿಲಯದಲ್ಲಿ ಸುಮಾರು ೬೦ ಜನ ವಿದ್ಯಾರ್ಥಿಗಳಿರುತ್ತಾರೆ. ಕೊಲ್ಲಾಪುರದ ಕೈ. ಶ್ರೀ ಶಿವಛತ್ರಪತಿ ಮಹಾರಾಜರು ಸಂಘಕ್ಕೆ ದನಸಹಾಯ ಮಾಡಿರುವರು. ಪ್ರಕೃತದ ಮಹಾರಾಜರಾದ ರಾಜಾರಾಂ ಛತ್ರಪತಿಯವರೂ ಸಹಾಯ ಮಾಡುತ್ತಿದ್ದಾರೆ. ಸಂಘಕ್ಕೆ ಸುಮಾರು ೨೫ ಸಾವಿರ ರೂಪಾಯಿ ಬೆಲೆ ಬಾಳುವ ಕಟ್ಟಡವಿದ್ದೆ,

---

## ವೀರಶೈವ ಹಾಸ್ಟಲ್,

### ಸಾಂಗ್ಲಿ (ಸಂಸ್ಥಾನ).

ಸಾಂಗ್ಲಿಯ ವೀರಶೈವ ಸದ್ಗೃಹಸ್ಥರಿಂದ ಸ್ಥಾಪಿಸಲ್ಪಟ್ಟಿತು. ಈಗ ಸುಮಾರು ೩೦ ಜನ ವಿದ್ಯಾರ್ಥಿಗಳಿರುತ್ತಾರೆ. ಹೋಸ್ಟಲಿಗೆ ಸ್ವಂತ ಕಟ್ಟಡವಿರುತ್ತೆ.

---

## ವೀರಶೈವ ಹಾಸ್ಟಲ್,

### ಅಮರಾವತಿ, ಮಧ್ಯಪ್ರಾಂತ.

ಮಧ್ಯಪ್ರಾಂತದ ಅಮರಾವತಿಯಲ್ಲಿರುವ ಅಲ್ಪಸಂಖ್ಯಾಕರಾದ ವೀರಶೈವರು ಒಗ್ಗಟ್ಟನಿಂದ ತಮ್ಮ ಬಾಲಕರ ಸೌಲಭ್ಯಕ್ಕಾಗಿ ಈ ಹಾಸ್ಟಲನ್ನು ಸ್ಥಾಪಿಸಿರುವರು. ಸದ್ಯದಲ್ಲಿ ಸುಮಾರು ೧೫ ಜನ ವಿದ್ಯಾರ್ಥಿಗಳು ಮಾತ್ರ ಇರುವರು.

---

## ಶ್ರೀ ಜಗದ್ಗುರು ವಿಶ್ವಾರಾಧ್ಯ ಗುರುಕುಲ,

### ಶ್ರೀ ಕ್ಷೇತ್ರ ಕಾಶೀ.

ಈ ಗುರುಕುಲವು ಶ್ರೀ ಜಗದ್ಗುರು ಕಾಶೀ ಮಹಾಸ್ವಾಮಿಗಳಿಂದ ನೆಡೆಸಲ್ಪಡುತ್ತಿದೆ. ವೀರಶೈವ ಸಮಾಜದಲ್ಲಿನ ಅನೇಕ ಪಂಡಿತೋತ್ತಮರು ಈ ಗುರುಕುಲದಲ್ಲಿ ಸಂಸ್ಕೃತಾಭ್ಯಾಸ ಮಾಡಿದವರಾಗಿರುತ್ತಾರೆ. ಈ ರೀತಿಯಾಗಿ ಶಾಸ್ತ್ರಾಧ್ಯಯನಮಾಡಿ ಹೋಗಿರುವ ಪಂಡಿತರ ಪಟ್ಟಿಯನ್ನು ಬೇರಡೆ ಕೊಡಲಾಗಿರುವುದು. ಸದ್ಯಕ್ಕೆ ಗುರುಕುಲದಲ್ಲಿ ೧೯ ಜನ ವಿದ್ಯಾರ್ಥಿಗಳು ಸಂಸ್ಕೃತದಲ್ಲಿ ಪ್ರೌಡ ಶಿಕ್ಷಣವನ್ನು ಹೊಂದುತ್ತಿರುವರು.

---

## ಶ್ರೀ ಜಗದ್ಗುರು ವಿಶ್ವಾರಾಧ್ಯ ಛಾತ್ರವಾಸ,

### ಶ್ರೀ ಕ್ಷೇತ್ರ ಕಾಶೀ.

ಇದೂ ಕೂಡಾ ಕಾಶಿಯಲ್ಲಿ ಸಂಸ್ಕೃತಾಭ್ಯಾಸ ಮಾಡುತ್ತಿರುವ ವೀರಶೈವ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಸ್ಥಾಪಿಸಲ್ಪಟ್ಟಿರುವುದು. ಸುಮಾರು ೧೫ ಜನ ವಿದ್ಯಾರ್ಥಿಗಳಿರುವರು.

## ಶ್ರೀ ತಿಲಾಭಾಂಡೇಶ್ವರ ವಿದ್ಯಾರ್ಥಿ ಮಂದಿರ,

### ಶ್ರೀ ಕ್ಷೇತ್ರ ಕಾಶಿ.

ಈ ವಿದ್ಯಾರ್ಥಿ ಮಂದಿರದಲ್ಲಿ ೧೫ ಜನ ವಿದ್ಯಾರ್ಥಿಗಳಿರುವರು. ಅವರಲ್ಲಿ ನ್ಯಾಯಶಾಸ್ತ್ರವನ್ನು ೫ ಜನರು ವೇದಾಂತವನ್ನು ಒಬ್ಬರು ವ್ಯಾಕರಣವನ್ನು ೭ ಜನರು ಕಾವ್ಯವನ್ನು ಇಬ್ಬರು ಅಭ್ಯಾಸ ಮಾಡುತ್ತಿರುವರು.

---

## ಮೈಸೂರು ಪ್ರಾಂತ:

---

## ವೀರಶೈವ ವಿದ್ಯಾವರ್ಧಕ ಫಂಡು ಸಂಘ,

### ಬೆಂಗಳೂರು.

ದಿವಂಗತ ಸರ್ ದೇಶಾಯಿ ಸಿರಸಿಂಗಿಕರ್‌ಯವರ ಅಧ್ಯಕ್ಷತೆಯಲ್ಲಿ ೧೯೦೫ ರಲ್ಲಿ ಬೆಂಗಳೂರಿನಲ್ಲಿ ನಡೆದ ಯಾವದ್ಭಾರತ ವೀರಶೈವ ಮಹಾಸಭೆಯ ದೀರ್ಘಾಲೋಚನೆಗಳ ಫಲಸ್ವರೂಪವಾಗಿ ಅದೇ ವರ್ಷ ಈ ಮೈಸೂರು ವೀರಶೈವ ವಿದ್ಯಾವರ್ಧಕನಿಧಿಯ ಸಂಘವು ಬೆಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಮೈಸೂರು ಸಂಸ್ಥಾನದಲ್ಲಿ ಇದೇ ಈ ಬಗೆಯ ಪ್ರಥಮ ಸಂಸ್ಥೆಯಾಗಿದೆ. ಮೈಸೂರ ವೀರಶೈವರಲ್ಲಿ ವಿದ್ಯಾಭಿಲಾಷೆಯನ್ನು ಹುಟ್ಟಿಸುವುದು, ಬೆಂಗಳೂರು ಮತ್ತು ಇತರ ಸ್ಥಳಗಳಲ್ಲಿರುವ ವೀರಶೈವ ವಿದ್ಯಾರ್ಥಿಗಳಿಗಾಗಿ ನಿಲಯಗಳನ್ನು ನಿರ್ಮಿಸಿ ಅವನ್ನು ನಡೆಸಿಕೊಂಡು ಬರುವುದು, ವಿದ್ಯಾರ್ಥಿ ವೇತನಗಳನ್ನು ಕೊಡುವುದರ ಮೂಲಕ ಬಡ ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದು ಮತ್ತೂ ಸಾಮಾನ್ಯತಃ ಈ ಪಂಗಡದ ಸಾಂಪತ್ತಿಕ ನೈತಿಕ ಮತ್ತೂ ಸಾಮಾಜಿಕ ಪುರೋವೃದ್ಧಿಗೆ ಗಮನಕೊಡುವುದು. ಇವುಗಳೇ ಈ ಸಂಘದ ಉದ್ದೇಶವು, ಮೂಲಧನದಿಂದ ಹುಟ್ಟುವಳಿಯಾದ ಬಡ್ಡಿಯಿಂದಲೇ ಸಾಮಾನ್ಯವಾಗಿ ಈ ಸಂಘವು ತನ್ನ ಕೆಲಸಕಾರ್ಯಗಳನ್ನು ನಡಿಯಿಸಿಕೊಂಡು ಬಂದಿದೆ. ಈ ಸಂಘಕ್ಕೆ ಮೈಸೂರಿನ ಎಲ್ಲಾ ಭಾಗಗಳಲ್ಲಿಯೂ ಸದಸ್ಯರು (ಮೆಂಬರು) ಗಳಾಗಿರುತ್ತಾರೆ. ೧೯೦೯ ನೆಯ ಇಸವಿಯಲ್ಲಿ ಸರ್ಕಾರದವರು ಈ ಸಂಘದ ಗೌರವ ಮತ್ತೂ ಪ್ರತಿನಿಧೀಭೂತ ಲಕ್ಷಣಗಳನ್ನು ಪರಿಗಣಿಸಿ, ಈ ಸಂಘದವರು ಅನುಕೂಲವಾದ ಬಡ್ಡಿಯ ದರಗಳ ಮೇಲೆ ಒಂದು ಲಕ್ಷ ರೂಪಾಯಿಗಳ ಪರಿಮಿತಿಯ ವರೆಗೆ ಚಂದಾವನ್ನು ಶೇಖರಿಸಿ ಸರ್ಕಾರಿ ಖಜಾನೆಯಲ್ಲಿ ಡಿಪಾಜಿಟ್ಟಾಗಿಡಲು ಅನುಜ್ಞೆಯನ್ನು ದಯಪಾಲಿಸಿದರು. ಅದೇ ವರ್ಷ ಈ ಸಂಘವು ರಿಜಿಸ್ಟರ್ ಮಾಡಿಸಲ್ಪಟ್ಟಿತು. ೧೯೧೩ ನೆಯ ಇಸವಿ ಜುಲೈ ತಿಂಗಳಲ್ಲಿ ಈ ಸಂಘದವರು ಪ್ರಜಾಪ್ರತಿನಿಧಿ ಸಭೆಗೆ ತಮ್ಮ ಮೆಂಬರುಗಳಲ್ಲೊಬ್ಬರನ್ನು ಚುನಾಯಿಸಿ ಕಳುಹಿಸಲು ಅನುಜ್ಞೆಯನ್ನು ಕೊಟ್ಟರು. (೧೯೨೩ ರ ಲಾಗಾಯಿತು ಇಂತಹ ಸಂಸ್ಥೆಗಳಿಗೆ ಸರ್ಕಾರದವರು ಕೊಟ್ಟಿದ್ದ ಈ ಹಕ್ಕನ್ನು ವಜಾ ಮಾಡಿರುತ್ತಾರೆ). ಈಚಿಗೆ ಬೆಂಗಳೂರು ಡಿಸ್ಟ್ರಿಕ್ಟ ಬೋರ್ಡಿಗೆ ಒಬ್ಬ ಮೆಂಬರನ್ನು ಚುನಾಯಿಸಿ ಕಳುಹಿಸುವುದಕ್ಕಾಗಿ ಅದೇ ರೀತಿಯ ರಿಯಾಯತಿಯನ್ನು ತೋರಿಸಿರುತ್ತಾರೆ.

ಈ ಸಂಘವು ಇದುವರೆಗೆ ಸುಮಾರು ೮೦೦ ಮಂದಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನಗಳ ರೂಪದಲ್ಲಿ ಸುಮಾರು ಒಟ್ಟು ೩೧,೦೦೦ ರೂಪಾಯಿಗಳನ್ನು ಕೊಟ್ಟಿರುವರು. ಈ ಹಣವು ದೊಡ್ಡಮನುಷ್ಯರಿಂದ ಆಗಾಗ್ಗೆ ಬಂದ ಮೊಬಲಗಿನಿಂದಲೂ ಈ ಸಂಸ್ಥಾನದ ಎಲ್ಲ ಕಡೆಗಳಲ್ಲಿರುವ ಈ ಪಂಗಡದ ಮೆಂಬರುಗಳು ಲಗ್ನ ಮತ್ತು ಇತರ ಶುಭ ಸಮಯಗಳಲ್ಲಿ ದಾನರೂಪವಾಗಿ ಮಾಡಿದ ಸಾಮಾನ್ಯ ಧನಸಹಾಯದಿಂದಲೂ, ಮುಖ್ಯವಾಗಿ ಈ ಸಂಘದ ಫಂಡಿನಿಂದ ಹುಟ್ಟುವಳಿಯಾದ ಬಡ್ಡಿಯಿಂದಲೂ ಒದಗಿಸಲ್ಪಟ್ಟಿರುತ್ತದೆ. ಈ ಸಂಘದ ಮೂಲಧನವು ಒಂದು ಲಕ್ಷಕ್ಕೆ ಸ್ವಲ್ಪ ಹೆಚ್ಚಿಗಿರುತ್ತದೆ; ಮುಖ್ಯವಾಗಿ ಇದೆಲ್ಲವೂ ಮೈಸೂರು ಸರ್ಕಾರದವರಲ್ಲಿ ಇಡಲ್ಪಟ್ಟಿರುತ್ತದೆ.

ಈ ಕೆಳಗೆ ಕಂಡ ಮಹನೀಯರು ನಿಧಿಗೆ ಹೆಚ್ಚಿಗೆ ಧನಸಹಾಯವನ್ನು ಮಾಡಿರುತ್ತಾರೆ.

ಬೆಂಗಳೂರಿನ ಕೈ. ಸೂಲಬೆಲೆ ನಂಜಪ್ಪ, ಶಾಮಣ್ಣನವರು ರೂ. ೪೦,೦೦೦.

ದಿವಾನ್ ಬಹದ್ದೂರ್ ರಾಜಸಭಾ ಭೂಷಣ ಸರ್. ಕೆ. ಪಿ. ಪುಟ್ಟಣ್ಣ ಶೆಟ್ರವರು, Kt., C.I.E., ರೂ. ೫,೦೦೦,

ಬೀರೂರು ಪತ್ರೆ ಚಂ. ವೀರಪ್ಪನವರು ರೂ. ೪,೦೦೦.

ಪಿ. ಯಂ: ಬಸಪ್ಪನವರು ರೂ. ೫,೦೦೦.

ಕ್ಯಾಪ್ಟನ್ ವೈ. ವಿಶ್ವನಾಥಯ್ಯನವರು ರೂ. ೫,೦೦೦.

ಬೀರೂರು ಪತ್ರೆ ಪಿ. ವಿ. ಚಂನವೀರಪ್ಪನವರು ರೂ. ೧೫,೦೦೦.

ಶ್ರೀಮತಿ ಬೀರೂರ ಪಿ. ವಿ. ರುದ್ರಮ್ಮನವರು ರೂ. ೧೦,೦೦೦.

ದಿವಾನ್ ಬಹದ್ದೂರ್ ರಾಜಸಭಾಭೂಷಣ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟಿ, Kt.,C.I.E., ಯವರೇ ನಿಧಿಯು ಸ್ಥಾಪಿತವಾದ ಲಾಗಾಯತು ಮ್ಯಾನೇಜಿಂಗ್ ಕಮಿಟಿಯ ಅಧ್ಯಕ್ಷರಾಗಿರುತ್ತಾರೆ. ಪ್ರಾರಂಭದಿಂದ ಈ ನಿಧಿಯು ಪುರೋಭಿವೃದ್ಧಿಯೂ, ಸುವ್ಯವಸ್ಥೆಯೂ ವೀರಶೈವ ಸಮಾಜಕ್ಕೆ ಶಿಖರ ಪ್ರಾಯರಾಗಿರುವ ಈ ಮಹನೀಯರಿಂದಲೇ ಆಗಿರುವುದು. ಇವರ ಉತ್ತೇಜನದಿಂದಲೇ ಈ ಸಂಸ್ಥೆಯ ವತಿಯಿಂದ ಶ್ರೀಕರ ಭಾಷ್ಯವು ಸಂಸ್ಕೃತದಲ್ಲಿ ಮುದ್ರಣವಾಗುತ್ತಿರುವುದು.

ಪ್ರಕೃತ ವರ್ಷದಲ್ಲಿ ಸಂಘದ ಅಧಿಕಾರಿ ಮಂಡಲವು ಕೆಳಗೆ ಕಂಡಂತಿರುತ್ತದೆ.

### ಅಧ್ಯಕ್ಷರು.

ದಿವಾನ್ ಬಹದ್ದೂರ್ ರಾಜಸಭಾಭೂಷಣ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರವರು Kt., C.I.E.

ಶ್ರೀಯುತ ಯಂ. ನಾಗಪ್ಪನವರು ಸೆಕ್ರೆಟರಿ.

,, ಪಿ. ಯಂ. ಬಸಪ್ಪನವರು
,, ಕ್ಯಾಪ್ಟನ್ ವೈ. ವಿ. ಅಯ್ಯನವರು
,, ಯು. ಯಸ್. ಕಾಳಪ್ಪನವರು
,, ಡಿ. ಯಸ್. ಮಲ್ಲಪ್ಪನವರು, M. L. C.
,, ಯಜಮಾನ್ ಪುಟ್ಟಪ್ಪನವರು
,, ಜಿ. ಸಿದ್ಧವೀರಪ್ಪನವರು
,, ದೇಶದ ಶಿವ್ವ ಬಸಪ್ಪಶೆಟ್ಟರು
,, ಟಿ. ಎನ್. ಚನ್ನಪ್ಪನವರು
,, ಹೆಚ್. ಭದ್ರಪ್ಪನವರು
,, ಜಿ. ರುದ್ರಪ್ಪನವರು
,, ಟಿ. ರಾಚಪ್ಪನವರು
,, ಟಿ. ಗುರುನಂಜಯ್ಯನವರು ಬಿ.ಎ., ಬಿ.ಎಲ್.

---

## ಶ್ರೀ ಜಗದ್ಗುರು ಜಯದೇವ ವಿದ್ಯಾರ್ಥಿ ನಿಲಯ, ಬೆಂಗಳೂರು ಸಿಟಿ.

ಬೆಂಗಳೂರಿಗೆ ಅಭ್ಯಾಸಮಾಡುವದಕ್ಕಾಗಿ ಪರಸ್ಥಳಗಳಿಂದ ಬಂದ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಮೊದಲು ೧೯೧೦ರ ಸುಮಾರಿನಲ್ಲಿ ಬೆಂಗಳೂರು ಸಿಟಿ ಮ|| ರಾ|| ಊದಬತ್ತಿ ಷಾಪು ಕಳ್ಳಪ್ಪನವರಿಂದ "ವೀರಶೈವಾಶ್ರಮ" ಎಂಬ ಹೆಸರಿನಿಂದ ಒಂದು ವಿದ್ಯಾರ್ಥಿ ನಿಲಯವು ಬಾಡಿಗೆ ಬಂಗಲೆಯಲ್ಲಿ ಪ್ರಾರಂಭಿಸಲ್ಪಟ್ಟು, ಕ್ರಮ ಕ್ರಮವಾಗಿ ಅಭಿವೃದ್ಧಿಹೊಂದಿ, ಕಡೆಗೆ ಸುಮಾರು ೧೯೧೩ರಲ್ಲಿ ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘದ ವಿಚಾರಣೆಗೆ ಒಳಪಟ್ಟಿತು. ಕೆಲವು ಕಾಲಾನಂತರ ಶ್ರೀಮದ್ ಮಹಾರಾಜ ನಿರಂಜನ ಜಗದ್ಗುರು ಮುರುಘರಾಜೇಂದ್ರ ಮಹಾಸ್ವಾಮಿಯವರ ಸ್ವಾರಿಯು ಬೆಂಗಳೂರಿಗೆ ದಯಮಾಡಿಸಿದ್ದಾಗ ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಒಂದು ವಿದ್ಯಾರ್ಥಿ ಭವನವನ್ನು ಕಟ್ಟಿಸಲು ೫೦,೦೦೦ ರೂಪಾಯಿಗಳನ್ನು ದಯಪಾಲಿಸಲು ಅನುಜ್ಞೆಯನ್ನಿತ್ತರು. ಈ ಮೊಬಲಗಿನ ಜತೆಗೆ ಮೈಸೂರು ಸರ್ಕಾರದಿಂದ ದಯಪಾಲಿಸಲ್ಪಟ್ಟ ೨೦,೦೦೦ ರೂಪಾಯಿಗಳನ್ನು ಸೇರಿಸಿ, ಕಟ್ಟಡದ ಕೆಲಸವು ಪ್ರಾರಂಭಮಾಡಲ್ಪಟ್ಟು ೧ ಲಕ್ಷ ರೂಪಾಯಿಗಳ ವೆಚ್ಚದಿಂದ ದಿವ್ಯವಾದ ಮಂದಿರವು ಕಟ್ಟಲ್ಪಟ್ಟಿತು. ಈ ಕೆಳಕಂಡ ಮಹನೀಯರಿಂದಲೂ ಇದಕ್ಕೆ ದ್ರವ್ಯ ಸಹಾಯವಾಗಿರುವುದು.

ಕೈ. ಬೀರೂರು ಪತ್ರೆ ಚನ್ನವೀರಪ್ಪನವರು ಮತ್ತು ಇವರ ಧರ್ಮ ಪತ್ನಿ ಶ್ರೀಮತಿ ರುದ್ರಮ್ಮನವರು ಕೊಟ್ಟ ಫಂಡಿನಿಂದ ರೂ. ೧೫,೦೦೦

ಕೈ. ಅತ್ತಿಬೆಲೆ ಶಿಡ್ಲ ಬಸಪ್ಪನವರು ರೂ. ೧೦,೦೦೦

ದಿವಾನ್ ಬಹದ್ದೂರ್ ರಾಜ ಸಭಾಭೂಷಣ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರು, ಕೆಟಿ., ಸಿ.ಐ.ಇ. ಯವರು ರೂ. ೧,೦೦೦

ಮ|| ರಾ|| ಹಲಸೂರು ಯಲ್ಲಪ್ಪಶೆಟ್ಟರು ರೂ, ೧,೦೦೦

ಮ|| ರಾ|| ಡೈರಿ ಕೆಂಚಪ್ಪನವರು ರೂ. ೧,೦೦೦

ಮ|| ರಾ|| ಅಜ್ಜಂಪುರದ ಶೆಟ್ಟಿ ಸಂಗಪ್ಪನವರು ರೂ. ೧,೦೦೦

ಈ ವಿದ್ಯಾರ್ಥಿ ಭವನದಲ್ಲಿ ಸುಮಾರು ಒಂದು ನೂರು ವಿದ್ಯಾರ್ಥಿಗಳ ವಾಸಕ್ಕೆ ಅವಕಾಶವಿದೆ. ಇದರ ಆಡಳಿತವು ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡಿನ ಕಾರ್ಯ ನಿರ್ವಾಹಕ ಸಂಘದವರ ಆಡಳಿತಕ್ಕೆ ಒಳಪಟ್ಟದ್ದು ಫಂಡಿನವರಿಂದ ನಿಲಯಕ್ಕೆ ಮಾಹೆಯಾನಾ ೭೦ ರೂಪಾಯಿಗಳ ಗ್ರಾಂಟು ದೊರೆಯುತ್ತದೆ. ವಿದ್ಯಾರ್ಥಿ ಭವನದ ವ್ಯವಸ್ಥೆಯ ಬಗ್ಗೆ ಈ ಕೆಳಗೆ ಕಂಡ ದೊಡ್ಡ ಮನುಷ್ಯರ ಕಮಿಟಿಯು ನೇಮಕವಾಗಿದೆ.



ಅಖಿಲಭಾರತ ವೀರಶೈವ ಮಹಾಸಭೆಯ ಚಿರಸ್ಥಾಯಿ ಫಂಡಿನ ಸ್ಥಾಪಕರು ಮತ್ತು ಧನಸಹಾಯ ಮಾಡಿದ ಮಹನೀಯರು.

**ಅಧ್ಯಕ್ಷರು.**

ದಿವಾನ್ ಬಹದ್ದೂರ್ ರಾಜ ಸಭಾ ಭೂಷಣ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು Kt.,C.I.E.,

**ಮೆಂಬರುಗಳು.**

ಶ್ರೀಯುತ|| ಪಿ. ಎಂ. ಬಸಪ್ಪನವರು.
,, ಶಂ. ಬಸಪ್ಪನವರು
,, ಟಿ. ನಂಜಪ್ಪನವರು
,, ಟಿ. ಎನ್. ಚನ್ನಪ್ಪನವರು
,, ಹೆಡ್ಮಾಸ್ಟರ್ ಗೌರ್ನಮೆಂಟ್ ಹೈಸ್ಕೂಲ್.

---

## ರಾವಬಹದ್ದೂರ್ ಧರ್ಮ ಪ್ರಕಾಶಕ ಗುಬ್ಬಿ ತೋಟದಪ್ಪನವರ ಧರ್ಮಸತ್ರ ಮತ್ತು ವಿದ್ಯಾರ್ಥಿ ನಿಲಯ.

### (ಫ್ರೀ ಬೋರ್ಡಿಂಗ್.)

ಬೆಂಗಳೂರಿನ ದಾನಶೂರರಾದ ಕೈ|| ರಾವ್ ಬಹದ್ದೂರ್ ಧರ್ಮ ಪ್ರವರ್ತಕ ಗುಬ್ಬಿ ತೋಟದಪ್ಪನವರು ಬೆಂಗಳೂರು ಸಿಟಿ ರೈಲ್ವೆ ಸ್ಟೇಷನ್ ಬಳಿಯಲ್ಲಿ ೨ ಲಕ್ಷ ರೂಪಾಯಿಗಳ ವೆಚ್ಚದಿಂದ ಒಂದು ದೊಡ್ಡ ಕಟ್ಟಡವನ್ನು ಕಟ್ಟಿಸಿರುವರು. ಈ ಕಟ್ಟಡದ ಒಂದು ಭಾಗ ದಲ್ಲಿ ಪರಸ್ಥಳದ ಜನರು ಮೂರು ದಿನಗಳವರೆಗೆ ಇಳಿದುಕೊಳ್ಳಲು ಅವಕಾಶ ದೊರೆಯುವುದು. ಮತ್ತೊಂದು ಭಾಗದಲ್ಲಿ ವಿದ್ಯಾರ್ಥಿಗಳ ಪಾಠ ಪ್ರವಚನಗಳಿಗೆ ಅನುಕೂಲವಾಗಿರುವಂತೆ ಕೊಠಡಿಗಳುಳ್ಳ ಪ್ರತ್ಯೇಕ ಕಟ್ಟಡವಿರುವುದು. ಈ ಕಟ್ಟಡದಲ್ಲಿ ವಿದ್ಯಾರ್ಥಿಗಳು ವಾಸ ಮಾಡುವರಲ್ಲದೆ, ಅವರಿಗೆ ಸತ್ರದಲ್ಲಿಯೇ ಭೋಜನಾದಿಗಳಿಗೂ ಅನು ಕೂಲ ಮಾಡಲ್ಪಟ್ಟದೆ. ಈ ಫ್ರೀ ಬೋರ್ಡಿಂಗಿನ ವ್ಯವಸ್ಥೆಗಾಗಿಯೇ ಕೈ|| ತೋಟದಪ್ಪನವರು ತಮ್ಮ ಮರಣಕಾಲದಲ್ಲಿ ಪುನಃ ಸುಮಾರು ೧ ಲಕ್ಷ ರೂಪಾಯಿಗಳನ್ನು ಮೂಲ ಧನಕ್ಕಾಗಿ ವಿಲ್ ಮೂಲಕ ಕೊಟ್ಟಿರು. ಎಂದರೆ ಇವರ ಒಟ್ಟು ಧರ್ಮವು ಸುಮಾರು ೩|| ಲಕ್ಷ ರೂಪಾಯಿಗಳಾದವು. ಈ ಫ್ರೀ ಬೋರ್ಡಿಂಗಿನಲ್ಲಿ ಅಭ್ಯಾ ಸಮಾಡಿದ ಅನೇಕ ತರುಣರು ವಿದ್ಯಾವಂತರಾಗಿ ಈಗಾಗಲೇ ಸ ರ್ಕಾರಿ ಹುದ್ದೆಗಳಲ್ಲಿಯೂ, ಇತರ ಕಸಬುಗಳಲ್ಲಿಯೂ ಜೀವಿಸುತ್ತಿರು ವರು. ಬೋರ್ಡಿಂಗಿನಲ್ಲಿ ಸುಮಾರು ೫೦-೬೦ ವಿದ್ಯಾರ್ಥಿಗಳಿಗೆ ಅವಕಾಶವಿರುವುದು. ಇವರಲ್ಲದೆ ಪ್ರತಿನಿತ್ಯದಲ್ಲಿಯೂ ಪರಸ್ಥಳದ ಮೂರು ಮಂದಿ ಪ್ರಯಾಣೀಕರಿಗೆ ಈ ಸತ್ರದಲ್ಲಿ ಆತಿಥ್ಯವು ದೊರೆ ಯುವುದು. ಇದಲ್ಲದೆ ಇನ್ನೂ ಬಾಲ್ಯಾವಸ್ಥೆಯಲ್ಲಿರುವ ಬೆಂಗಳೂರಿನ ವೀರಶೈವ ಅನಾಥಾಲಯದ ಬಾಲಕರಿಗೆ ಸದ್ಯದಲ್ಲಿ ವಸತಿಯು ಮಾತ್ರ ಈ ಸತ್ರದಲ್ಲಿಯೇ ಕೊಡಲ್ಪಟ್ಟಿರುವುದು. ಈ ಧರ್ಮದ ಆಡಳಿತವು ಬೆಂಗಳೂರಿನ ಕೆಲಮಂದಿ ದೊಡ್ಡ ಮನುಷ್ಯರಿಂದೊಡಗೂಡಿದ ಒಂದು ಟ್ರಸ್ಟ್ ಕಮಿಟಿಯವರ ವಶಕ್ಕೆ ಒಪ್ಪಿಸಲ್ಪಟ್ಟಿರುವದು.

**ಟ್ರಸ್ಟ್‌ಕಮಿಟಿ ಮೆಂಬರುಗಳು.**

**ಪ್ರೆಸಿಡೆಂಟ್.**

ರಾಜ ಸಭಾಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರು, Kt., C.I.E.

**ಸೆಕ್ರೆಟರಿ.**

ಶಂಕರಣ್ಣನವರ ಶಿವಪ್ಪನವರು

**ಟ್ರಸ್ಟ್ ಮೆಂಬರುಗಳು.**

ಶ್ರೀ || ದೇಶದ ಯಜಮಾನ್ ಪುಟ್ಟಪ್ಪನವರು
,, ದೇಶದ ಸಿದ್ದ ಬಸವಶೆಟ್ಟರು
,, ಪಿ. ಯಂ. ಬಸಪ್ಪನವರು
,, ಟಿ. ನಂಜಪ್ಪನವರು
,, ಟಿ. ರಾಚಪನವರು
,, ಯು. ಎಸ್. ಕಳ್ಳಪ್ಪನವರು
,, ಮಂಡಿ ಹರಯಣ್ಣನವರು

---

## ಅನಾಥಾಲಯ, ಬೆಂಗಳೂರು ಸಿಟಿ.

ಮೈಸೂರು ವೀರಶೈವ ವಿದ್ಯಾಭಿವೃದ್ಧಿ ಫಂಡ್ ಸಂಘದ ೧೫ನೇ ಜನರಲ್ ಕಮಿಟಿ ಮೀಟಿಂಗಿನಲ್ಲಿ ಬೆಂಗಳೂರಿನ ಕ್ಯಾಪ್ಟನ್ ವೈ. ವಿ. ಅಯ್ಯನವರು ಇಲ್ಲಿನ ಮಹಾಜನರು ಒಂದು ವೀರಶೈವ ಅನಾಥಾಲಯವನ್ನು ಸ್ಥಾಪಿಸುವುದು ಸೂಕ್ತವೆಂದು ತಂದ ಸೂಚ ನೆಯು ಸರ್ವಾನುಮತವನ್ನು ಪಡೆದು, ವಿದ್ಯಾಭಿವೃದ್ಧಿ ಫಂಡಿನ ವತಿಯಿಂದಲೇ ವೀರಶೈವ ವರ್ತಕರಿಂದ ಪೈಸಾಫಂಡಿನ ಮೂಲಕ ಸ್ವಲ್ಪ ಹಣವು ಕೂಡಿಸಲ್ಪಟ್ಟಿತು. ಎರಡು ವರ್ಷಗಳ ಉಳಿತಾಯ ವಾದ ಸುಮಾರು ೧,೦೦೦ ರೂಪಾಯಿಗಳನ್ನು ಸಹಾಯ ದ್ರವ್ಯವನ್ನಾಗಿ ಇಟ್ಟುಕೊಂಡು, ಕೆಲವು ದಿನಗಳ ಮೊದಲು ನಮ್ಮ ಸಮಾಜದ ಹಿರಿಯರಾದ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರು, ಕೆಟಿ.ಸಿ.ಐ.ಇ. ಯವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಈ ಅನಾಥಾಲಯವು ಸ್ಥಾಪನಗೊಂಡಿತು.

ಬೆಂಗಳೂರು ದಂಡು ಮ|| ರಾ|| ಯಲ್ಲಪ್ಪನವರು ಈ ಅನಾಥಾ ಲಯದ ಫಂಡಿಗೆ ಎರಡು ಸಾವಿರ ರೂಪಾಯಿಗಳ ಉದಾರವಾದ ದೇಣಿಗೆಯನ್ನು ಕೊಡುವುದಾಗಿ ವಾಗ್ದಾನ ಮಾಡಿದ್ದಾರೆ. ಇನ್ನೂ ಕೆಲವುಮಹನೀಯರು ಇದಕ್ಕೆ ದ್ರವ್ಯಸಹಾಯ ಮಾಡತಕ್ಕವರಾಗಿದ್ದಾ ರೆ. ಸದ್ಯ ಬೆಂಗಳೂರಿನ ವೀರಶೈವ ವರ್ತಕರು ತಿಂಗಳು ತಿಂಗಳಿಗೆ ಕೂ ಡಿಸಿ ಕೊಡುವ ಪೈಸಾಫಂಡಿನ ಸಹಾಯವೊಂದರಿಂದಲೇ ಈ ಅನಾಥ ಬಾಲಕರ ಸಂಗೋಪನವು ನಡೆಯತಕ್ಕದ್ದಾಗಿದೆ. ಹದಿನೆಂಟು ವರ್ಷ ವಯಸ್ಸಿನೊಳಗಾಗಿನ ಅನಾಥ ವೀರಶೈವ ಬಾಲಕರಿಗೆ ಕೈಗಾರಿಕೆಯಲ್ಲಿ ಶಿಕ್ಷಣವನ್ನು ಕೊಡಿಸಿ, ಅವರಿಗೆ ಬೇಗನೆ ಸ್ವಾವ ಲಂಬನ ಶಕ್ತಿಯುಂಟಾಗುವಂತೆ ಮಾಡಬೇಕೆಂಬುದೇ ಈ ಅನಾಥಾ ಲಯದ ಉದ್ದೇಶವು. ಸದ್ಯ ೬ ಮಂದಿ ಬಾಲಕರು ಮಾತ್ರ ಅಭ್ಯಾಸ ಮಾಡುತ್ತಿದ್ದಾರೆ.

ಅನಾಥಾಲಯಕ್ಕೆ ಸ್ವತಂತ್ರವಾದ ಪಾಕಾದಿಗಳನ್ನು ಮಾಡು ವುದು ಲಾಭಕಾರಿಯಲ್ಲವಾದುದರಿಂದ, ಈ ಆರು ಬಾಲಕರಿಗೂ ಅಶನ ವಸತಿಗಳನ್ನು ರಾವ್ ಬಹದ್ದೂರ್ ಧರ್ಮ ಪ್ರವರ್ತಕ ಗುಬ್ಬಿ ತೋಟದಪ್ಪನವರ ಸತ್ರದಲ್ಲಿ ಏರ್ಪಡಿಸಿದ್ದಾರೆ. (ಈ ಆರು ಬಾಲಕ ರಿಗೆ ದಾಮಾಷಾಪ್ರಕಾರ ಬೀಳುವ ಊಟದ ಖರ್ಚು ಮಾತ್ರ ಸತ್ರಕ್ಕೆ ಅನಾಥಾಲಯದಿಂದ ಕೊಡಲ್ಪಡುವುದು.) ಈ ಅನಾಥಾಲಯದ ಕಾರ್ಯಕಲಾಪಕ್ಕಾಗಿ ಒಂದು ಕಮಿಟಿಯು ನಿಯಮಿತವಾಗಿದೆ.

ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರು, ಕೆಟಿ. ಯವರು ಅಧ್ಯಕ್ಷರಾಗಿಯೂ ಯಜಮಾನ್ ಅಂಡ್ ಸನ್ ಕಂಪನಿಯ ಮಾಲಕರಾದ ಶ್ರೀಯುತ ವೈ. ಮಾದಪ್ಪನವರು, ಮತ್ತು ಕೆ. ಶಿವಪ್ಪನವರು ಸೆಕ್ರೆಟರಿಗಳಾಗಿಯೂ ಇರುವರು.

---

## ಶ್ರೀ ಕಂಠೇಶ್ವರ ಕಂಬಿ ಎಂ. ಸಿದ್ಧರಾಮಣ್ಣನವರ ವಿದ್ಯಾರ್ಥಿನಿಲಯ,

### ಬೆಂಗಳೂರು.

ಬೆಂಗಳೂರಿನ ವೀರಶೈವ ಪ್ರಮುಖ ವರ್ತಕರಲ್ಲೊಬ್ಬರಾದ ಮ|| ರಾ|| ಶ್ರೀ ಕಂಬಿ ಎಂ. ಸಿದ್ದರಾಮಣ್ಣನವರು ಈ ವಿದ್ಯಾರ್ಥಿ ನಿಲಯವನ್ನು ಸುಮಾರು ೨೦ ವರುಷಗಳಹಿಂದೆ ತಮ್ಮ ಮನೆಯಲ್ಲಿ ಸ್ಥಾಪಿಸಿದರು. ಅಂದಿನಿಂದ ಈ ಮಹನೀಯರೇ ಈ ನಿಲಯದ ಚಾಲಕರೂ, ಪೋಷಕರೂ, ದನಸಹಾಯಕರೂ ಆಗಿ ಸುಮಾರು ೩೦ ಜನ ವಿದ್ಯಾರ್ಥಿಗಳ ಅಶನ ವಸನಗಳನ್ನು ಉಚಿತವಾಗಿ ನೆಡೆಸುತ್ತಾ ಅವರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟಿರುವರು.

ಸಂಸ್ಥೆಗೆ ಯಾವ ವಿಧವಾದ ಮೂಲಧನವಾಗಲಿ ಮ್ಯಾನೇಜಿಂಗ್ ಕಮಿಟಿಯಾಗಲಿ ಇರುವುದಿಲ್ಲ. ಸ್ಥಾಪಕರಾದ ಮ||ರಾ|| ಕಂಬಿ ಸಿದ್ಧರಾಮಣ್ಣನವರೇ ಹಾಸ್ಟಲಿನ ಎಲ್ಲ ವೆಚ್ಚಗಳನ್ನು ವಹಿಸಿಕೊಂಡು ಹಾಸ್ಟಲಿನ ವ್ಯವಸ್ಥೆಯನ್ನು ಸಮರ್ಪಕವಾಗಿ ನಡೆಸುತ್ತಿರುವರು. ಹಾಸ್ಟಲಿನಲ್ಲಿ ಆಂಗ್ಲ ಬಾಷಾಭ್ಯಾಸ ಮಾಡುವ ವಿದ್ಯಾರ್ಥಿಗಳಲ್ಲದೆ ಸಂಸ್ಕೃತವನ್ನು ಕಲಿಯುವ ವಿದ್ಯಾರ್ಥಿಗಳೂ ಇರುವರು.

---

## ಶ್ರೀ ಹುಣಸಮಾರನ ಹಳ್ಳಿ ಮಠದ ವಿದ್ಯಾರ್ಥಿ ನಿಲಯ.

ಬೆಂಗಳೂರಿಗೆ ಸುಮಾರು ೧೨ ಮೈಲಿ ದೂರದಲ್ಲಿರುವ ಹುಣಸಮಾರನ ಹಳ್ಳಿಯಲ್ಲಿ ಶ್ರೀ ಮಠದ ಪಟ್ಟಾಧ್ಯಕ್ಷ ಶ್ರೀ ನಂಜೇಸ್ವಾಮಿಗಳು ತಮ್ಮ ಮಠದ ವತಿಯಿಂದ ಒಂದು ಶಾಲೆಯನ್ನೂ ಮತ್ತು ಒಂದು ವಿದ್ಯಾರ್ಥಿನಿಲಯವನ್ನೂ ೧೯೧೩ ನೆ ಇಸವಿಯ ಸುಮಾರಿನಲ್ಲಿ ಸ್ಥಾಪಿಸಿದರು. ಈ ಮೊದಲು ಮಠದಲ್ಲಿ ಒಂದು ಸಂಸ್ಕೃತ ಪಾಠಶಾಲೆ ಇತ್ತು. ಆದರೆ ಆ ಸುತ್ತುಮುತ್ತಣ ಗ್ರಾಮಗಳಲ್ಲಿನ ಬಾಲಕರ ಸಲುವಾಗಿ ರಾಜಸಭಾ ಭೂಷಣ ದಿ|| ಬ|| ಸರ್ ಕೆ. ಪಿ. ಪುಟ್ಟಣ್ಣಶೆಟ್ಟಿ, ಕೆಟಿ. ಸಿ. ಐ. ಇ. ಯವರ ಪ್ರೋತ್ಸಾಹದ ಮೇಲೆ ಪಾಠಶಾಲೆಯೇ ಮಠದವರ ಸ್ವಂತ ಪ್ರಯತ್ನದಿಂದ ಇಂಗ್ಲಿಷ್ ಮಿಡಿಲ್ ಸ್ಕೂಲ್ ( English Middle School ) ಆಗಿ ಮಾಡಲ್ಪಟ್ಟಿತು. ಈಗ ಈ ಸ್ಕೂಲು ಮೈಸೂರು ಸರ್ಕಾರದ ಮುಂಜೂರಾತಿಯನ್ನು ಪಡೆದು ನಡೆಯುತ್ತಲಿದೆ. ಈ ಶಾಲೆಯಲ್ಲಿ ನೂರಾರು ವಿದ್ಯಾರ್ಥಿಗಳು ಈಗ ಅಭ್ಯಸಿಸುತ್ತಿದ್ದಾರೆ. ಈ ಪೈಕಿ ೬೦ ಜನ ವಿದ್ಯಾರ್ಥಿಗಳಿಗೆ ಮಠದ ಬೋರ್ಡಿಂಗಿನಲ್ಲಿಯೇ ಅಶನಕ್ಕೂ, ವಿದ್ಯಾರ್ಥಿ ನಿಲಯದಲ್ಲಿ ವಸತಿಗೂ ಅನುಕೂಲ ಮಾಡಿಕೊಟ್ಟಿರುತ್ತಾರೆ. ಸ್ಕೂಲು ಕಟ್ಟಡಕ್ಕೆ ೨-೩ ಸಾವಿರ ರೂಪಾಯಿಗಳ ಖರ್ಚನ್ನೂ, ವಿದ್ಯಾರ್ಥಿನಿಲಯದ ಕಟ್ಟಡಕ್ಕೆ ೫-೬ ಸಾವಿರ ರೂಪಾಯಿಗಳ ಖರ್ಚನ್ನೂ ಇಟ್ಟಿರುತ್ತಾರೆ. ಈ ಕಟ್ಟಡಗಳು ಈ ಮಠದ ಕೀರ್ತಿಶೇಷರಾದ ಏಜಂಟ್ ಚನ್ನಬಸವ ಒಡೆಯರವರ ಹೆಸರಿನಮೇಲೆ ಕಟ್ಟಲ್ಪಟ್ಟವು. ಶ್ರೀಗಳವರು ವಿದ್ಯಾರ್ಥಿಗಳ ಅಶನ ವಸತಿಗಳಿಗೆ ಮಾಹೇಯಾನ ೪೦೦-೫೦೦ ರೂಪಾಯಿಗಳ ಖರ್ಚನ್ನು ಇಟ್ಟಿರುವರು. ಈ ಶಾಲೆ ಯಾವತ್ತೂ ವಿದ್ಯಾರ್ಥಿ ನಿಲಯಗಳು ಶ್ರೀಮನ್ನಿರಂಜನ ಬಸವಲಿಂಗ ಸ್ವಾಮಿಗಳವರ ಮೇಲ್ವಿಚಾರಣೆಯಲ್ಲಿ ಸುಲಲಿತವಾಗಿ ನಡೆಯುತ್ತಲಿವೆ. ಮಠದಲ್ಲಿ ಶ್ರೀಗಳವರು ದಿನಂಪ್ರತಿ ದಾಸೋಹವನ್ನು ಇಟ್ಟಿರುತ್ತಾರೆ.

---

## ಸಾಹುಕಾರ್ ಕಬ್ಬಳ್ಳಿ ಚನ್ನಬಸಪ್ಪನವರ ವೀರಶೈವ ಹಾಸ್ಟಲ್.

### ಮೈಸೂರು.

ಈ ವಿಧ್ಯಾರ್ಥಿ ನಿಲಯವು ೧೯೩೨ ರಲ್ಲಿ ಮೈಸೂರಲ್ಲಿ ಸ್ಥಾಪಿಸಲ್ಪಟ್ಟಿತು. ಇದಕ್ಕೆ ಮೈಸೂರು ಡಿಸ್ಟ್ರಿಕ್ಟು ಗುಂಡ್ಲುಪೇಟೆ ತಾಲ್ಲೋಕು ಕಬ್ಬಳ್ಳಿ ಸಾಹುಕಾರ್ ಕೀರ್ತಿಶೇಷರಾದ ಮ|| ರಾ|| ಕೆ. ಎಸ್. ಚನ್ನಬಸಪ್ಪನವರು ೪೦ ಸಹಸ್ರ ರೂಪಾಯಿಗಳ ಬೆಲೆಗೆ ಒಂದು ಕಟ್ಟಡವನ್ನು ತೆಗೆದುಕೊಟ್ಟಿರುವರು. ಸಂಸ್ಥೆಯು ಇವರ ಹೆಸರಿನಲ್ಲಿಯೇ ನಡೆಯುತ್ತಿರುವುದು. ಮೈಸೂರು ಸರ್ಕಾರದವರು ರೂ. ೨,೫೦೦ ರೂಪಾಯಿಗಳನ್ನು ಸಹಾಯ ಮಾಡಿರುತ್ತಾರೆ.

ಸದ್ಯಕ್ಕೆ ಹಾಸ್ಟಲಿನಲ್ಲಿ ಸುಮಾರು ೫೦ ಜನ ವಿಧ್ಯಾರ್ಥಿಗಳಿರುತ್ತಾರೆ. ಹಾಸ್ಟಲಿನ ವ್ಯವಸ್ಥೆಯ ಬಗ್ಗೆ ಈ ಕೆಳ ಕಂಡ ಮ್ಯಾನೇಜಿಂಗ್ ಕಮಿಟಿಯು ನೇಮಕ ಮಾಡಲ್ಪಟ್ಟಿದೆ.

ಪ್ರೊಫೆಸರ್ A. R. ವಾಡಿಯಾ B.A. ಬಾರಟ್ಲಾ (ಪ್ರೆಸಿಡೆಂಟ್)
ಶ್ರೀಯುತ B. S. ಪುಟ್ಟಸ್ವಾಮಿ B. A. B. L. (ಸೆಕ್ರೆಟರಿ)

**ಮೆಂಬರುಗಳು.**

ಶ್ರೀಯುತ H. K. ವೀರಬಸವಯ್ಯ B, A. B. L. ಮುನ್ಸೀಫ್,
" C. R. ಗೌಡ L. E. ಎಲೆಕ್ಟ್ರಿಕ್ ಎಂಜನೀಯರ್ K. G. F.
" N. ನಂಜಪ್ಪ ಮೈಸೂರು.
" Y. ವಿರೂಪಾಕ್ಷಯ್ಯ ಮೈಸೂರು.
" M. S. ನಂಜಪ್ಪ "
" M. S. ಲಿಂಗಪ್ಪಯ್ಯ "
" K. ಸಿದ್ದರಾಮಪ್ಪ B. A. ಸೂಪರಿಂಟೆಂಡೆಂಟ್ ಆಫ್ ಪೋಲೀಸ್.
" R. ಪುಟ್ಟಣ್ಣ B.A. ಅರಮನೆ ಮೂಸಾಹೇಬರು.
" Dr T. S. ಸಿದ್ದಪ್ಪ M. B. C. M. ಮೈಸೂರು.
" K. N. ಪುಟ್ಟಣ್ಣ ಕಾಗಲವಾಡಿ.

---

## ಬೆಟ್ಟದಪುರದ ಶ್ರೀ ಚಿಕ್ಕವೀರ ದೇಶಿಕೇಂದ್ರ ಮಹಾಸ್ವಾಮಿಗಳ ಹಾಸ್ಟಲ್.

### ಮೈಸೂರು.

ಈ ವಿದ್ಯಾರ್ಥಿ ನಿಲಯವು ಬೆಟ್ಟದಪುರದ ಶ್ರೀಗಳವರ ಪ್ರೋತ್ಸಾಹದಿಂದಲೂ, ಪ್ರಯತ್ನದಿಂದಲೂ, ಮೈಸೂರಿನಲ್ಲಿ ಒಂದು

ಬಾಡಿಗೆ ಬಂಗಲೆಯಲ್ಲಿ ಸ್ಥಾಪಿಸಲ್ಪಟ್ಟಿರುವುದು. ಶ್ರೀಗಳವರು ಅತ್ಯಂತ ಮುತುವರ್ಜಿಯನ್ನು ವಹಿಸಿ ನಿಲಯದ ಬಗ್ಗೆ ೩೩ ಸಹಸ್ರ ರೂಪಾಯಿಗಳ ನಿಧಿಯನ್ನು ವಸೂಲ್‌ಮಾಡಿಕೊಟ್ಟಿರುವರು. ಇದಲ್ಲದೆ ಹಾಸ್ಟಲಿನ ಮೂಲಧನವಾಗಿ ೧ ಲಕ್ಷ ರೂಪಾಯಿ ಬಾಳುವ ಸ್ಥಿರಸ್ವತ್ತುಗಳು ಬೇರೆ ಇರುವವು.

ಸದ್ಯಕ್ಕೆ ಹಾಸ್ಟಲಿನಲ್ಲಿ ೩೩ ಜನ ವಿದ್ಯಾರ್ಥಿಗಳಿರುವರು. ಹಾಸ್ಟಲಿನ ವ್ಯವಸ್ಥೆಗೆ ಈ ಕೆಳಕಂಡ ದೊಡ್ಡ ಮನುಷ್ಯರಿಂದ ಒಂದು ಕಮಿಟಿಯು ನೇಮಕಮಾಡಲ್ಪಟ್ಟಿರುವುದು.

ಪ್ರೆಸಿಡೆಂಟರು; ರಾಜಕವಿ ಭೂಷಣ ಸರದಾರ್ ಲಿಂಗರಾಜೇ ಅರಸ್ ಯವರು,

ಶ್ರೀಯುತ ಬಳೆ ಭದ್ರಶೆಟ್ರು, ಯಡತೊರೆ. ಸೆಕ್ರೆಟರಿಗಳು.

**ಮೆಂಬರುಗಳು.**

ಮೈಸೂರ್ ಲಿಂಗಾಯಿತ ಎಜುಕೇಷನ್ ಫಂಡ್ ಅಸೋಸಿಯೇಶನ್ನಿನ ಸೆಕ್ರೆಟರಿಗಳು.

ಶ್ರೀಯುತ K. ಸಿದ್ಧರಾಮಪ್ಪ B. A. ಪೋಲೀಸ್ ಸೂಪರೆಂಟೆಂಡೆಂಟ್.

„ ಬಳೆ ಸಿದ್ಧಲಿಂಗಶೆಟ್ರು,

„ ಚೌಕಳ್ಳಿ ದೊಡ್ಡ ನಂಜುಂಡಶೆಟ್ರು,

„ ರಾಮದೂರು ಸಿದ್ಧಲಿಂಗಶೆಟ್ರು,

„ ಪಿರಿಯಾಪಟ್ಟಣದ P. B. ವೀರಭದ್ರಪ್ಪನವರು.

---

## ಶಂಕರವಿಲಾಸ ಸಂಸ್ಕೃತ ಪಾಠಶಾಲಾ.

### ಚಿಕ್ಕ ಬಸವಣ್ಣನಗುಡಿ, ಮೈಸೂರು.

ಈ ಪಾಠಶಾಲೆಗೆ ಅರಮನೆಯಲ್ಲಿ ಕೆಲಸಮಾಡುವ ವೀರಶೈವ ನೌಕರರು ರೂ ೫೦೦ ಚಂದಾ ಹಣವನ್ನು ಸೇರಿಸಿಕೊಟ್ಟಿರುವರು. ಮತ್ತು ಮೈಸೂರಿನ ವೀರಶೈವ ವರ್ತಕಮಂಡಲಿಯವರು ತಮ್ಮ ಧರ್ಮದಾಯವನ್ನು ಇದಕ್ಕೆ ಕೊಡುತ್ತಿರುವರು. ಅಲ್ಲದೆ ಮೈಸೂರು ಸರ್ಕಾರದವರು ಮಾಹೆಯಾನಾ ೨೦ ರೂಪಾಯಿಗಳ ಗ್ರಾಂಟನ್ನು ಕೊಡುತ್ತಿರುವರು.

ಈಗ ಪಾಠಶಾಲೆಯಲ್ಲಿ ೨೫ ಜನ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವರು. ಆಸ್ಥಾನ್ ವಿದ್ವಾನ್ ವೇ|| ಗುರುಮೂರ್ತಿಶಾಸ್ತ್ರಿಗಳು ಮುಖ್ಯೋಪಾಧ್ಯಾಯರಾಗಿರುವರು. ಶಾಲೆಯ ವ್ಯವಸ್ಥೆಯ ಬಗ್ಗೆ ಒಂದು ಕಮಿಟಿ ಇದ್ದು ಅದಕ್ಕೆ ಶ್ರೀಯುತ ಡಾಕ್ಟರ್ T. S. ಸಿದ್ಧಪ್ಪ M. B. C. M. ಯವರು ಪ್ರೆಸಿಡೆಂಟರಾಗಿರುವರು.

---

## ವೀರಶೈವ ಸೈನಿಗರ ಸಂಘ.

### ಬೆಂಗಳೂರು.

ವೀರಶೈವ ಸೈನಿಗರಲ್ಲಿ ವಿದ್ಯಾಪ್ರಸಾರವು ಹೆಚ್ಚುವಂತೆ ಮಾಡುವ ಸಲವಾಗಿ ಈ ಸಂಘವು ೧೯೨೨ ಆಗಸ್ಟು ತಿಂಗಳಲ್ಲಿ ಸ್ಥಾಪಿಸಲ್ಪಟ್ಟಿತು. ಸಂಘಕ್ಕೆ ಪ್ರಕೃತದಲ್ಲಿ ಸುಮಾರು ೧೦ ಸಹಸ್ರ ರೂಪಾಯಿಗಳು ಬೆಲೆ ಬಾಳುವ ಸ್ಥಿರಾಸ್ತಿಗಳಿದ್ದು ಅದರ ಉತ್ಪನ್ನವನ್ನು ವಿದ್ಯಾರ್ಥಿ ವೇತನ ರೂಪವಾಗಿ ಹಂಚುವುದೇ ಸಂಘದ ಉದ್ದೇಶ್ಯವಾಗಿದೆ. ಸಂಘದ ಕಾರ್ಯಗಳ ವ್ಯವಸ್ಥೆಯಬಗ್ಗೆ ೩೦ ಜನ ಮೆಂಬರುಗಳಿಂದಲೂ ಅಧಿಕಾರಿಗಳಿಂದಲೂ ಕೂಡಿದ ಒಂದು ಎಗ್ಜಿಕ್ಯೂಟಿವ್ ಕಮಿಟಿಯು ನೇಮಿಸಲ್ಪಟ್ಟಿದೆ.

**ಅಧಿಕಾರಿ ಮಂಡಲ.**

**ಅಧ್ಯಕ್ಷರು.**

ಶ್ರೀ|| ಮಾಲೂರು ವೀರಭದ್ರಪ್ಪನವರು

„ B. A. ಮುನಿಯಪ್ಪನವರು

**ಉಪಾಧ್ಯಕ್ಷರು.**

„ P. V. ಸುಬ್ರಾಯಪ್ಪನವರು

„ A. ತಮ್ಮಯ್ಯ ಶೆಟ್ರು

„ K. ವೇಲಾಯಧ ಶೆಟ್ರು

**ಖಜಾಂಚಿ.**

„ B. S. ನಂಜಪ್ಪನವರು

**ಸೆಕ್ರೆಟರಿಗಳು.**

„ B. V. ನಂಜಪ್ಪನವರು

„ P. N. ಸುಬ್ರಾಯಪ್ಪನವರು

**ಜನರಲ್ ಸೆಕ್ರೆಟರಿ.**

„ B. ಪುಟ್ಟಸಾಮಯ್ಯ.

---

## ಮರಿಮಲ್ಲಪ್ಪನವರ ಹೈ ಸ್ಕೂಲ್,

### ಮೈಸೂರು.

ಈ ಶಾಲೆಯನ್ನು ಸ್ಥಾಪಿಸಲು ತಮ್ಮ ಆಸ್ತಿಯಲ್ಲಿ ಅಧಿಕಾಂಶವನ್ನು ಬಿಟ್ಟು ದಿವಂಗತರಾದ ಕೈ|| ಮರಿಮಲ್ಲಪ್ಪನವರು ಮೈಸೂರಿನ ಅರಮನೆಯ ಅಧಿಕಾರಿಗಳಲ್ಲೊಬ್ಬರಾಗಿದ್ದರು. ಅವರು ಮೃತಿಹೊಂದುವ ಮೊದಲು ಅಂದರೆ ೧೮೭೧ರಲ್ಲಿ, ಅವರು ಶಾಲೆಯಸಲವಾಗಿ ಬಿಟ್ಟ ೨೮,೦೦೦ ರೂಪಾಯಿಗಳು, ರೈಲ್ವೆ ಡಿಬೆಂಚರ್‌ನಲ್ಲಿ ಠೇವಣಾತಿಯಲ್ಲಿಡಲ್ಪಟ್ಟು ಬಡ್ಡಿಯ ಸಮೇತವಾಗಿ ೧೮೭೭ನೆ ಇಸ್ವಿಯಲ್ಲಿ ರೂ. ೩೩,೪೦೦ ಮೂಲಧನವಾಯಿತು. ಅದೇ ವರ್ಷ ಮರಿಮಲ್ಲಪ್ಪನವರು ಬಿಟ್ಟಿದ್ದ ಒಂದು ಮನೆಯಲ್ಲಿ ಸ್ಕೂಲು ಪ್ರಾರಂಭ ಮಾಡಲ್ಪಟ್ಟಿತು. ಮೊದಲು ಮೂರು ವರ್ಷಗಳು ಶ್ರೀಯುತ S. ರಂಗಾಚಾರ್ಲುಯವರು ಅನಂತರ M. ವೆಂಕಟಕೃಷ್ಣಯ್ಯನವರೂ ಮುಖ್ಯೋಪಾದ್ಯಾಯರಾಗಿದ್ದರು. ಸನ್ ೧೮೮೦ರಲ್ಲಿ ಘನಹೊಂದಿದ ಮೈಸೂರು ಸರ್ಕಾರದವರು ೫೦ ರೂಪಾಯಿಗಳ ಮಾಸಿಕ ಗ್ರಾಂಟನ್ನು ಶಾಲೆಗೆ ಕೊಡಲಾರಂಭಿಸಿದರು, ೧೮೮೩ರಲ್ಲಿ ಈ ಗ್ರಾಂಟು ತಿಂಗಳೊಂದಕ್ಕೆ ೨೦೦ ರೂಪಾಯಿಗಳಿಗೆ ಹೆಚ್ಚಿಸಲ್ಪಟ್ಟಿತು.

ಆಗ ಶಾಲೆಯು ನಡೆಸಲ್ಪಡುತ್ತಿದ್ದ ಕಟ್ಟಡವು ಅತ್ಯಂತ ಚಿಕ್ಕದಿದ್ದುದರಿಂದ ಮತ್ತೊಂದು ಸ್ವತಂತ್ರ ಕಟ್ಟಡವನ್ನು ಕಟ್ಟಿಸಲು ಉದ್ದೇಶಿಸಲ್ಪಟ್ಟು ಅದರಸಲವಾಗಿ ಮೈಸೂರು ಸರ್ಕಾರದವರೂ ಹತ್ತು ಸಹಸ್ರ ರೂಪಾಯಿಗಳ ಗ್ರಾಂಟನ್ನು ಕೊಟ್ಟರು. ಕೈ|| ಮರಿಮಲ್ಲಪ್ಪನವರ ಧರ್ಮಪತ್ನಿಯವರು ಕೊಟ್ಟ ಹನ್ನೆರಡು ಸಹಸ್ರ ರೂಪಾಯಿಗಳೂ ಹಳೆಯ ಕಟ್ಟಡವನ್ನು ಮಾರಿದ್ದರಿಂದ ಬಂದ ಎಂಟು ಸಹಸ್ರ ರೂಪಾಯಿಗಳೂ ಸೇರಿ ಮೂವತ್ತು ಸಹಸ್ರ ರೂಪಾ

ಯಿಗಳಿಗೆ ಈಗಿರುವ ಭವ್ಯವಾದ ಕಟ್ಟಡವು ಕಟ್ಟಲ್ಪಟ್ಟಿತು. ಇದರಿಂದ ಮೂಲಧನವಾದ ೩೨ ಸಹಸ್ರ ರೂಪಾಯಿಗಳು ಹಾಗೆಯೇ ಉಳಿದು ಆದರ ಉತ್ಪನ್ನದಲ್ಲಿ ಶಾಲೆಯ ವೆಚ್ಚವು ಕಳೆದು ನಿಂತಹಣವು ವೀರ ಶೈವ ವಿದ್ಯಾರ್ಥಿಗಳಿಗೆ ವೇತನ ರೂಪವಾಗಿ ಹಂಚಲ್ಪಡುತ್ತಿದೆ.

ಸದ್ಯದಲ್ಲಿ ಶಾಲೆಯು ಹೈ ಸ್ಕೂಲ್, ತರಗತಿಗಳನುಳ್ಳದ್ದಾಗಿದ್ದು ಸುಮಾರು ೫೫೦ ಹುಡುಗರನ್ನೊಳಗೊಂಡಿದೆ. ಅವರಲ್ಲಿ ಅರವತ್ತು ಜನ ಹುಡುಗರು ಮಾತ್ರ ಲಿಂಗಾಯತರಾಗಿರುತ್ತಾರೆ. ಸ್ಕೂಲ್ ವ್ಯವಸ್ಥೆಯ ಬಗ್ಗೆ ೧೨ ಜನ ಮೆಂಬರುಗಳನ್ನೊಳಗೊಂಡ ಒಂದ ಟ್ರಸ್ಟ ಕಮಿಟಿಯು ನೇಮಕ ಮಾಡಲ್ಪಟ್ಟಿದೆ.

## ಕಮಿಟಿಯಲ್ಲಿನ ಈಗಿನ ಟ್ರಸ್ಟಿಗಳು.

ಮ|| ಜೆ. ಸಿ. ರೋಲೂ ಎಂ.ಎ. ಯವರು, ಪ್ರೆಸಿಡೆಂಟರು.

೧. „ ರಾಜಶಿಲ್ಪ ವಿಶಾರದ ರಾವ್‌ಬಹದ್ದೂರ್

೨. „ ಬಿ. ಸುಬ್ಬರಾಯರು ಎಲ್. ಸಿ, ಇ. ರವರು.

೩. „ ಲೋಕಹಿತೈಷಿ ನಂಜುಂಡರಾಜೇ ಅರಸಿನವರು.

೪. „ ಎಸ್. ರಂಗಾಚಾರ್ಯರವರು ಬಿ. ಎ.

೫. „ ಎಚ್. ನರಸಿಂಗರಾಯರು.

೬. „ ಎಂ. ವೆಂಕಟಕೃಷ್ಣಯ್ಯನವರು

೭. „ ಎಂ. ಪಿ. ಲಿಂಗಪ್ಪಯ್ಯನವರು

೮. „ ಎಚ್ ಕೆ. ವೀರಬಸವೈಯ್ಯ ಬಿ.ಎ.ಬಿ ಎಲ್‌ರವರು

೯. „ ವೈ. ವಿರೂಪಾಕ್ಷಯ್ಯನವರು

೧೦. „ ಗುರಿಕಾರ್ ಬಸವಲಿಂಗಯ್ಯನವರು

೧೧. „ ಡಾಕ್ಟರ್ ಸಿದ್ಧಪ್ಪ ಎಲ್.ಎಂ. ಅಂಡ್ ಎಸ್‌ರವರು ಸೆಕ್ರೆಟರಿ

---

## ವೀರಶೈವ ಅನಾಥಾಲಯ

### ಮೈಸೂರು.

ಈ ಸಂಸ್ಥೆಯು ೧೯೧೭ ರಲ್ಲಿ ಮೈಸೂರಿನಲ್ಲಿ ಸ್ಥಾಪಿತವಾಯಿತು. ಗುಬ್ಬಿ ತಾಲ್ಲೋಕ್ ಕಣಾಲಗ್ರಾಮದ ಕೈ. ಶ್ರೀಮತಿ ವೀರಮ್ಮ ಎಂಬ ಮಹನೀಯಳು, ತನ್ನ ಸುಮಾರು ೮ ಸಹಸ್ರ ರೂಪಾಯಿ ಕಿಂಮತ್ತಿನ ಆಸ್ತಿಯನ್ನು ಇದಕ್ಕೆ ಬಿಟ್ಟಿರುವರು. ಪ್ರಕೃತದಲ್ಲಿ ಆಲಯವು ಮೈಸೂರ್ ಕಿಲ್ಲೆ ಮೊಹಲ್ಲೆಯಲ್ಲಿರುವ ಶ್ರೀ ಚಿಕ್ಕಬಸವೇಶ್ವರ ದೇವಸ್ಥಾನದಲ್ಲಿದ್ದು ಮೇಲ್ಕಂಡ ಮೂಲಧನದ ಉತ್ಪನ್ನ, ಮೈಸೂರು ವೀರಶೈವ ವರ್ತಕ ಮಂಡಲಿಯ ಧರ್ಮಾದಾಯ ಮತ್ತು ಮೈಸೂರು ಸರ್ಕಾರದವರು ಕೊಡುತ್ತಿರುವ ೫೦ ರೂಪಾಯಿ ಮಾಸಿಕ ಗ್ರಾಂಟು ಇವುಗಳ ಸಹಾಯದಿಂದ ಸಮರ್ಪಕವಾಗಿ ನಡೆಯುತ್ತಿದೆ. ಮೂವತ್ತೈದುಜನ ಅನಾಥ ಬಾಲಕರಿಗೂ ಬಡ ವಿಧ್ಯಾರ್ಥಿಗಳಿಗೂ ಊಟದ ಮತ್ತು ವಾಸದ ಏರ್ಪಾಡು ಮಾಡಲಾಗಿದೆ.

ಶ್ರೀಮತಿ ವೀರಮ್ಮನವರ ದಾನಶಾಸನಾನುಸಾರವಾಗಿ ಆಲಯದ ವ್ಯವಸ್ಥೆಗೆ ಈ ಕೆಳಕಂಡ ಮಹನೀಯರು ಟ್ರಸ್ಟಿಗಳಾಗಿರುತ್ತಾರೆ.

ಡಾಕ್ಟರ್ T. S. ಸಿದ್ಧಪ್ಪನವರು ಪ್ರೆಸಿಡೆಂಟರು

ಮೈಸೂರು ಡಿಸ್ಟ್ರಿಕ್ಟಿನ ಡೆಪ್ಟಿ ಕಮಿಷನರ್ ಸಾಹೇಬರು

ಶ್ರೀಯುತ ಪಂಡಿತ ಪುಟ್ಟರಾಜೇ ಅರಸ್ ಯವರು

„ ನಿಟ್ರೆ ಗುರಿಕಾರ್ ಬಸಪ್ಪನವರು

„ T. M. ಸಿದ್ಧಪ್ಪನವರು

„ ಪುಟ್ಟಬಸಪ್ಪನವರು

„ ಜಾವಪ್ಪನವರು

„ ಗುರಿಕಾರ್ ಬಸವಲಿಂಗಪ್ಪನವರು

„ ಗಣಶಿವ ನಂಜಪ್ಪನವರು

---

## ಶ್ರೀ ಜಯದೇವ ವೀರಶೈವ ಹಾಸ್ಟಲ್ ನೆಲಮಂಗಲ.

### (ಬೆಂಗಳೂರು ಡಿ.)

ಈ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆಯು ತಾ. ೬-೮-೨೫ ರಲ್ಲಿ ಮೈಸೂರು ಸಂಸ್ಥಾನದ ವಿದ್ಯಾ ಇಲಾಖಾ ಇನಸ್ಪೆಕ್ಟರ್ ಜನರಲ್ ಯವರಾದ ಮಿ|| K. ವ್ಯಾಥನ್ ಯವರಿಂದ ನೆರವೇರಿಸಲ್ಪಟ್ಟು ತಾ. ೨೯-೧೯೨೭ ರಲ್ಲಿ ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳಿಂದ ಕಟ್ಟಡದ ಪ್ರವೇಶ ಮಹೋತ್ಸವವು ನೆರವೇರಿಸಲ್ಪಟ್ಟಿತು. ನೆಲಮಂಗಲ ತಾಲ್ಲೋಕಿನ ಅನೇಕ ವೀರಶೈವ ದೊಡ್ಡ ಮನುಷ್ಯರು ಹಾಸ್ಟಲಿನ ಬಿಲ್ಡಿಂಗ್ ಫಂಡಿಗೆ ಸಹಾಯಮಾಡಿರುವರು.

ಈ ಹಾಸ್ಟಲಿನಲ್ಲಿ ೧೬ ಜನ ವಿದ್ಯಾರ್ಥಿಗಳಿರುವರು. ಶ್ರೀಯುತ ಗುಬ್ಬಿ ಹುಚ್ಚಪ್ಪನವರು ಮ್ಯಾನೇಜಿಂಗ್ ಕಮಿಟಿಯ ಸೆಕ್ರೆಟರಿಗಳಾಗಿರುವರು.

---

## ಶ್ರೀಜಗದ್ಗುರು ಜಯದೇವ ಮುರಘರಾಜೇಂದ್ರ, ವೀರಶೈವ ಸಂಘ ತುಮಕೂರು.

ಈ ಸಂಘದ ವತಿಯಿಂದ ತುಮಕೂರಿನ ವೀರಶೈವ ಹಾಸ್ಟಲಿನ ವ್ಯವಸ್ಥೆಯು ನಡೆಯುತ್ತಿದೆ. ಹಾಸ್ಟಲಿಗೆ ಒಂದು ಭವ್ಯವಾದ ಕಟ್ಟಡವಿದ್ದು ಕಟ್ಟಡಕ್ಕೆ ತಗಲಿದ ೪೦ ಸಹಸ್ರ ರೂಪಾಯಿಗಳ ಕರ್ಚನ್ನು ಸಂಘದವರೇ ಒದಗಿಸಿಕೊಟ್ಟಿದ್ದಾರೆ. ಸಂಘದ ಫಂಡಿಗಾಗಿ ಈ ಕೆಳಕಂಡ ಮಹನೀಯರು ಹೆಚ್ಚಿಗೆ ಧನ ಸಹಾಯ ಮಾಡಿರುತ್ತಾರೆ.

| | |
|---|---|
| ಶ್ರೀಯುತ ಕರಮಣ್ಣೆ ಚಂದ್ರಪ್ಪನವರು | ೧೮,೦೦೦ |
| „ ಗುಬ್ಬಿ ಹುಚ್ಚಪ್ಪನವರು | ೮,೦೦೦ |
| „ ಜಿ. ಚನ್ನಪ್ಪನವರು | ೫,೦೦೦ |
| „ ಡಿ. ವೀರಣ್ಣನವರು | ೧,೦೦೦ |

ಈಗ ಹಾಸ್ಟಲಿನಲ್ಲಿ ಸುಮಾರು ೩೫ ಜನ ವಿದ್ಯಾರ್ಥಿಗಳಿದ್ದು ಶ್ರೀಯುತ ಡಾಕ್ಟರ್ ನಂಜಪ್ಪನವರು ಮ್ಯಾನೇಜಿಂಗ್ ಕಮಿಟಿಯ ಅಧ್ಯಕ್ಷರಾಗಿರುತ್ತಾರೆ.

---

# ವೀರಶೈವ ಹಾಸ್ಟಲ್.

## ಚಿಕ್ಕಮಗಳೂರು.

ಈ ವಿದ್ಯಾರ್ಥಿ ನಿಲಯವನ್ನು ಜಾಬಾಲಪುರಿ ಮಠದ ಶ್ರೀ ಚಂದ್ರಶೇಖರಸ್ವಾಮಿಗಳು ಚಿಕ್ಕಮಗಳೂರಲ್ಲಿ ಸ್ಥಾಪಿಸಿದರು. ಶ್ರೀಗಳವರು ಭಕ್ತಾದಿಗಳಿಂದ ೫೦ ಸಹಸ್ರ ರೂಪಾಯಿಗಳನ್ನು ವಸೂಲ್ ಮಾಡಿ, ನೂರು ಜನ ವಿದ್ಯಾರ್ಥಿಗಳ ವಾಸಕ್ಕೆ ಯೋಗ್ಯವಾದ ಭವ್ಯ ಮಂದಿರವನ್ನು ಕಟ್ಟಿಸಿರುತ್ತಾರೆ. ಹಾಸ್ಟಲಿಗೆ ೧೩ ಸಹಸ್ರ ರೂಪಾಯಿಗಳ ಬ್ಯಾಂಕಿನ ಠೇವಣಾತಿಯು ಮೂಲಧನವಾಗಿರುತ್ತೆ.

ಈಗ ಹಾಸ್ಟಲಿನಲ್ಲಿ ೩೫ ಜನ ವಿದ್ಯಾರ್ಥಿಗಳಿದ್ದು ಅವರಲ್ಲಿ ಇಬ್ಬರು ಬಡ ವಿದ್ಯಾರ್ಥಿಗಳಿಗೆ ಉಚಿತವಾಗಿಯೂ ೧೨ ಜನಗಳಿಗೆ ಅರ್ಧ ವೆಚ್ಚವೂ ಮಾಡಿರುವುದು. ಉಳಿದವರಿಂದ ಮಾಹೆಯಾನಾ ಐದುರೂಪಾಯಿನಂತೆ ವಸೂಲ್ಮಾಡಲ್ಪಡುತ್ತಿರುವುದು. ಬೋರ್ಡಿಂಗಿನ ವೆಚ್ಚಕ್ಕಾಗಿ ಜಾಬಾಲಪುರಿ ಮಠದಿಂದ ಮಾಹೆಯಾನಾ ಒಂದು ನೂರು ರೂಪಾಯಿಗಳು ಸಂದಾಯವಾಗುತ್ತಿವೆ.

ಹಾಸ್ಟಲಿನ ವ್ಯವಸ್ಥೆಯ ಬಗ್ಗೆ ಕೆಳಕಂಡವರ ಒಂದು ಮ್ಯಾನೇಜಿಂಗ್ ಕಮಿಟಿಯು ನೇಮಕವಾಗಿದೆ.

ಶ್ರೀ ಪ್ರಭುಲಿಂಗ ದೇಶಿಕೇಂದ್ರ ಮಹಾಸ್ವಾಮಿಗಳವರು
ಜಾಬಾಲಪುರಿ ಮಠ, (ವೈಸ್‌ಪ್ರೆಸಿಡೆಂಟರು)
ಶ್ರೀಯುತ ಆರ್. ಮಲ್ಲಪ್ಪನವರು (ಸೆಕ್ರೆಟರಿ)
" ಎಚ್. ಬಿ. ಮಲ್ಲಪ್ಪನವರು (ಮ್ಯಾನೇಜರ್)

### ಕಮಿಟಿ ಮೆಂಬರುಗಳು.

೧. ಕೆ. ನಂಜಪ್ಪನವರು
೨. ಎಂ. ಮಲ್ಲಪ್ಪಶೆಟ್ರು ಕಾಫೀಪ್ಲಾಂಟರ್ ಮಲ್ಲದೇವರಹಳ್ಳಿ ಚಿಕ್ಕಮಗಳೂರು ತಾ||
೩. ಹೆಚ್. ಪಿ. ರುದ್ರಪ್ಪಶಾಸ್ತ್ರಿಗಳವರು ಜ್ಯೋತಿಷ್ಕರು ಚಿಕ್ಕಮಗಳೂರು
೪. ಎ. ಪ್ರಭಯ್ಯನವರು ಜಮೀನ್ದಾರ್ ಡಿಟೋ
೫. ಎ. ಆರ್. ಬಸಪ್ಪಶೆಟ್ಟರು ಪ್ರೊಪ್ರೈಟರ್ ಶ್ರೀ ದುರ್ಗಾಂಬಾ ಪ್ರೆಸ್ ಡಿಟೋ
೬. ವೀರಶೆಟ್ರು ಜಮೀನ್ದಾರ್, ಮೂಗ್ತಿಹಳ್ಳಿ ಡಿಟೋ
೭. ಬಸ್ವೇಗೌಡ್ರು, ಕಾಫೀಪ್ಲಾಂಟರ್, ಚಿಕ್ಕಕುರುಬರಹಳ್ಳಿ
೮. ಚನ್ನೇಗೌಡ್ರು ಜಮೀನ್ದಾರ್, ಕುರುಬರಹಳ್ಳಿ
೯. ಮಲ್ಲಪ್ಪನವರು ಜಮೀನ್ದಾರ್
೧೦. ಶಿದ್ಲಿಂಗೇಗೌಡ್ರು, ಪಟೇಲ್
೧೧. ಚನ್ನಬಸವೇಗೌಡ್ರು ಪಟೇಲ್ ಅಂಬಳೆ
೧೨. ಬಿ. ಸಿದ್ಧಯ್ಯನವರು
೧೩. ಎಂ. ನಂಜಪ್ಪಶೆಟ್ರು ಕಾಫಿಪ್ಲಾಂಟರ್ ಮುಗಳವಳ್ಳಿ
೧೪. ಶಿವಪ್ಪಶೆಟ್ರು, ದೊಡ್ಡ ಕುರುಬರಹಳ್ಳಿ
೧೫. ಬಸವೇಗೌಡ್ರು ಜಮೀನ್ದಾರ್ ಬಾಣವಾರ ಕಡೂರು ತಾ.

---

# ವೀರಶೈವ ವಿದ್ಯಾವರ್ಧಕ ಸಂಘ,

## ಮೊಳಕಾಲ್ಮುರು ಡಿ|| ಚಿತ್ರದುರ್ಗ.

ಈ ಸಂಘವು ಮೊಳಕಾಲ್ಮುರುವಿನಲ್ಲಿ ೧೯೧೪ರಲ್ಲಿ ಸ್ಥಾಪಿತವಾಯಿತು. ಸಾಕಾದಷ್ಟು ನಿಧಿಯು ಇನ್ನೂ ಶೇಖರಿಸಲ್ಪಟ್ಟಿಲ್ಲವಾಗಿ ಸಂಘವು ಇನ್ನೂ ಯಾವ ಕಾರ್ಯವನ್ನೂ ಕೈಗೊಂಡಿಲ್ಲ. ಮೈಸೂರು ಪ್ರಜಾಪ್ರತಿನಿಧಿಸಭೆಯ ಮೆಂಬರಾದ ಶ್ರೀಯುತ ಎನ್. ಚನ್ನಪ್ಪನವರು ಸಂಘದ ಕಾರ್ಯದರ್ಶಿಗಳಾಗಿರುತ್ತಾರೆ.

---

# ಅನಾಥ ವೀರಶೈವ ಹಾಸ್ಟಲ್,

## ಹೊಳಲ್ಕೆರೆ.

ಚನ್ನಪಟ್ಟಣದ ಕಾಲ್ವೆಹಳ್ಳಿ ಮಠದ ಕೀರ್ತಿಶೇಷ ಕೈ|| ಗುರುಶಾಂತಯ್ಯನವರಿಂದ ಈ ಸಂಸ್ಥೆಯು ೨೮-೭-೧೯೨೪ ರಲ್ಲಿ ಸ್ಥಾಪಿಸಲ್ಪಟ್ಟಿತು. ಸ್ಥಾಪಕರ ಕುಮಾರರಾದ ವೇ|| ಮುರಿಗಯ್ಯ ಮತ್ತು ವೇ|| ಸದಾಶಿವಯ್ಯನವರು ಸಂಸ್ಥೆಯ ಈಗಿನ ಚಾಲಕರೂ ಧನಸಹಾಯ ಮಾಡಿದವರೂ ಆಗಿರುತ್ತಾರೆ. ೨೦ ಸಹಸ್ರ ರೂಪಾಯಿಗಳ ಮೂಲಧನವು ಠೇವಣಾತಿಯಾಗಿಡಲ್ಪಟ್ಟಿದೆ.

ಆಲಯದಲ್ಲಿ ೧೫ ಜನ ಅನಾಥ ವೀರಶೈವ ಬಾಲಕರಿಗೆ ಭೋಜನಮಾಡಿಸುವ ವ್ಯವಸ್ಥೆ ಇಟ್ಟಿದೆ. ಮ್ಯಾನೇಜಿಂಗ್ ಕಮಿಟಿಯ ಅಧ್ಯಕ್ಷರಾದ ವೇ|| ಮುರಿಗಯ್ಯನವರು ಸರ್ಕಾರೀ ಸಹಾಯವನ್ನು ಪಡದು, ರೂ ೭೫೦೦|- ವೆಚ್ಚದಿಂದ ಆಲಯಕ್ಕೆ ಯೋಗ್ಯವಾದ ಒಂದು ಕಟ್ಟಡವನ್ನು ಕಟ್ಟುತ್ತಿದ್ದಾರೆ. ಈ ಬಗ್ಗೆ ಇವರಿಗೆ ಮೈಸೂರು ಸರ್ಕಾರದಿಂದ ಪಬ್ಲಿಕ್ ಸರ್ವಿಸ್ ಮೆಡಲೂ, ಇತರ ಪ್ರಶಸ್ತಿಗಳೂ ಬಂದಿರುತ್ತವೆ.

### ಕಮಿಟಿ ಮೆಂಬರುಗಳು.

ವೇ|| ಹೊಳಲಕೆರೆ ತಾಲ್ಲೋಕು ಚನ್ನಪಟ್ಣದ ವಾಸಿ
ಕಾಲ್ವೆಹಳ್ಳಿಮಠದ ಮುರಿಗಪ್ಪಯ್ಯನವರು (ಪ್ರಸಿಡೆಂಟರು)
ವೇ|| ಹೊಳಲಕೆರೆ ಗಡ್ಡದೇವರ ಮಠದ ಮಹದೇವಯ್ಯನವರು, (ಸೆಕ್ರೆಟರಿ)
ಮ|| ರಾ|| ಕುಡನೀರಕಟ್ಟೆ ಪಟೇಲ್ ಶಿವ್ರಾಮಪ್ಪನವರು
" ನಂದನ ಹೊಸೂರು ಪಟೇಲ್ ಬಸಪ್ಪ ಗೌಡರು
ವೇ|| ಹೋ|| ಪ್ರಭುದೇವರಮಠದ ಚಿಕ್ಕಬಸವಯ್ಯನವರು

---

# ಶ್ರೀ ಜಗದ್ಗುರು ಜಯದೇವ ವೀರಶೈವ ಹಾಸ್ಟಲ್, ಚಿತ್ರದುರ್ಗ.

ಈ ವಿದ್ಯಾರ್ಥಿನಿಲಯವು ೧೦-೧೧-೧೯೧೫ರಲ್ಲಿ ಶ್ರೀ ಜಗದ್ಗುರು ಜಯದೇವ ಮುರುಘರಾಜೇಂದ್ರ ಮಹಾಸ್ವಾಮಿಗಳ ದ್ವಿತೀಯಪಟ್ಟಪ್ರಾರಂಭಮಹೋತ್ಸವಕಾಲದಲ್ಲಿ ಪ್ರಾರಂಭಿಸಲ್ಪಟ್ಟಿತು. ಹಾಸ್ಟಲಿಗೆ ಮೈಸೂರು ಸರ್ಕಾರದವರು ಮಾಹೆಯಾನಾ ೨೫ ರೂಪಾಯಿ ಗ್ರಾಂಟು ಕೊಡುತ್ತಿದ್ದಾರೆ. ವಿದ್ಯಾರ್ಥಿಗಳ ಊಟವಗೈರೆ ಕರ್ಚುಗಳನ್ನು ಶ್ರೀ ಮಹಾಸ್ವಾಮಿಗಳವರೇ ವಹಿಸಿಕೊಂಡಿರುತ್ತಾರೆ.

ನಿಲಯದಲ್ಲಿ ಸುಮಾರು ೩೫ ಜನ ಹುಡುಗರಿರುವರು. ಮ್ಯಾನೇಜಿಂಗ್ ಕಮಿಟಯು ಕೆಳಕಂಡಂತೆ ನೇಮಕಮಾಡಲ್ಪಟ್ಟಿರುವುದು.

**ಅಧ್ಯಕ್ಷರು.**

ಮ|| ರಾ|| ವೀರಭದ್ರಪ್ಪ, ಸಾಹುಕಾರ್ ಮತ್ತು ವೈಸ್‌ಪ್ರೆಸಿಡೆಂಟ್ ಡಿಸ್ಟ್ರಿಕ್ಟುಬೋರ್ಡು, ಚಿತ್ರದುರ್ಗ
ಮ|| ರಾ|| ಎನ್. ಹಾಲಪ್ಪ ಚಿತ್ರದುರ್ಗ, ಸೆಕ್ರಿಟರಿ

---

## ವೀರಶೈವ ವಿದ್ಯಾವರ್ಧಕ ಸಂಘ,

### ಶಿಕಾರಿಪುರ (ಡಿ|| ಶಿವಮೊಗ್ಗಾ)

ಈ ಸಂಘವು ತಾ|| ೧೭-೫-೧೯೧೯ರಲ್ಲಿ ಶಿಕಾರಿಪುರದಲ್ಲಿ ಸ್ಥಾಪಿತವಾಯಿತು. ಸಂಘದ ವತಿಯಿಂದ ಒಂದು ಹಾಸ್ಟಲ್ ಕಟ್ಟಸಲ್ಪಡುತ್ತಿದ್ದು, ಅದರಲ್ಲಿ ೧೫ ವಿದ್ಯಾರ್ಥಿಗಳಿರುವರು. ಹಾಸ್ಟಲಿಗೆ ಸರ್ಕಾರದಿಂದ ಮಾಹೆಯಾನಾ ಹತ್ತುರೂಪಾಯಿಗಳ ಗ್ರಾಂಟು ಕೊಡಲ್ಪಡುತ್ತಿರುವುದು. ಶಿಕಾರಿಪುರವು ಲೋವರ್ ಸೆಕೆಂಡರಿ ಪರೀಕ್ಷೆಯ ಕೇಂದ್ರಸ್ಥಾನವಾದ್ದರಿಂದ ಈ ಸ್ಥಾನಕ್ಕೆ ಬರತಕ್ಕ ವಿದ್ಯಾರ್ಥಿಗಳ ಭೋಜನಾದಿಗಳು ಈ ಸಂಸ್ಥೆಯಿಂದಲೇ ನಡೆಸಲ್ಪಡುತ್ತಿರುವುದು. ಸಂಘದ ಮ್ಯಾನೇಜಿಂಗ್ ಕಮಿಟಗೆ ಮ|| ರಾ|| ಎಚ್. ಬಿ. ಸಿದ್ಧಪ್ಪನವರು ಪ್ರೆಸಿಡೆಂಟರಾಗಿಯೂ ಮ|| ರಾ|| ಹುಲಿಯಪ್ಪನವರ ಶಿವಪ್ಪನವರು, ಮ|| ರಾ|| ಮಾದನಭಾವಿ ಬಸಪ್ಪನವರು, ಜಾಯಿಂಟ್ ಸೆಕ್ರಿಟೆರಿಗಳಾಗಿಯೂ ಇರುವರು.

---

## ದಾವಣಗೆರೆ ವೀರಶೈವ ವಿದ್ಯಾವರ್ಧಕ ಸಂಘ,

### ದಾವಣಗೆರೆ.

ಈ ಸಂಘವು ದಾವಣಗೆರೆಯ ವೀರಶೈವ ವರ್ತಕಮಂಡಲಯಿಂದ ತಾ||. ೨೯-೮-೧೯೦೭ ರಲ್ಲಿ ಸ್ಥಾಪಿಸಲ್ಪಟ್ಟಿತು. ಸಂಘಕ್ಕೆ ೬೩,೧೨೩ ರೂಪಾಯಿಗಳ ಮೂಲಧನ ವಿರುವುದು. ಮೈಸೂರು ದೇಶದ ವೀರಶೈವ ವಿದ್ಯಾರ್ಥಿಗಳಲ್ಲಿ ಬಡವರಾದವರಿಗೆ ವೇತನವನ್ನು ಕೊಟ್ಟು ಸಹಾಯಮಾಡುವುದು, ದಾವಣಗೆರೆ ಶ್ರೀ ವಿರಕ್ತಮಠದ ವ್ಯವಸ್ಥೆ, ವೀರಶೈವ ಮತಸಂಭಂದವಾದ ಗ್ರಂಥಗಳನ್ನು ಸಂಗ್ರಹಿಸುವುದು, ಮತ್ತು ಪ್ರಸಾರಗೊಳಿಸುವುದು ಇವೇ ಸಂಘದ ಉದ್ದೇಶವಾಗಿರುತ್ತೆ. ಸಂಘದ ವತಿಯಿಂದ ೧೧೪ ಜನ ವಿದ್ಯಾರ್ಥಿಗಳು ವೇತನವನ್ನು ಹೊಂದುತ್ತಿದ್ದಾರೆ.

ಇದು ಹೊರತು ಪ್ರತಿವರ್ಷ ದಾವಣಗೆರೆ ಸೆಂಟರಿಗೆ ಲೋವರ್ ಸೆಕೆಂಡರಿ ಪರೀಕ್ಷೆಗೆ ಬರುವ ೫೦೦, ೬೦೦ ಜನ ವಿದ್ಯಾರ್ಥಿಗಳಿಗೆ ಪರೀಕ್ಷೆ ಪೂರೈಸುವವರೆಗೂ ಊಟದ ವ್ಯವಸ್ಥೆಯು ನಡೆಸಲ್ಪಡುತ್ತಿದೆ

**ಕಮಿಟಿ ವ್ಯವಸ್ಥಾಪಕರು.**

1 ತಿರಕಪ್ಪನವರ ಮಠದ ಷಡಾಕ್ಷರಪ್ಪಯ್ಯನವರು, ಪ್ರೆಸಿಡೆಂಟ್
2 ಯಜಮಾನ್ ಮೋತಿ ಅಜ್ಜಪ್ಪನವರು ವೈಸ್ ಪ್ರೆಸಿಡೆಂಟ್
3 ಎಚ್. ಯಂ. ಸಿದ್ಧರಾಮಯ್ಯನವರು ಬಿ. ಎ., ಎಲ್. ಎಲ್. ಬಿ. ಅಡ್ವೋಕೇಟ್, ಸೆಕ್ರೆಟರಿ
4 ಮೈಸೂರು ಮಠದ ಚನ್ನವೀರಯ್ಯನವರು ಅಸಿಸ್ಟೆಂಟ್ ಸೆಕ್ರೆಟರಿ ಮತ್ತು ಟ್ರೆಜರರ್
5 ಡಿ. ಎಚ್. ಚಂದ್ರಶೇಖರಯ್ಯನವರು ಬಿ. ಎ., ಎಲ್. ಎಲ್. ಬಿ. ಎಂ. ಎಲ್. ಸಿ. ಅಡ್ವೋಕೇಟ್, ಆಡಿಟರ್
6 ಉರವಕೊಂಡಿ ಚನ್ನಬಸಪ್ಪನವರು ಮೆಂಬರ್.
7 ಬೇತೂರು ತಿಪ್ಪಣ್ಣನವರು ,,
8 ಮಾಗಾನಹಳ್ಳಿ ಗುರುಬಸಪ್ಪನವರು ,,
9 ಬೆಳ್ಳುಳ್ಳಿ ಚನ್ನವೀರಪ್ಪನವರು ,,
10 ಅಂದನೂರು ಕೊಟ್ರಬಸಪ್ಪನವರು ,,
11 ಹರಿಹರದ ಹಾಲಪ್ಪನವರು ,,
12 ಚಾರ್ಮಣ್ಣನವರ ಬಸವಲಿಂಗಪ್ಪನವರು ,,
13 ಐನಹಳ್ಳಿ ವೀರಭದ್ರಪ್ಪನವರು ,,
14 ಹೆಂಜಿಗಿಮಠದ ವೀರಭದ್ರಯ್ಯನವರು ,,
15 ಹನಗವಾಡಿ ಮಠದ ಮುರಿಗಯ್ಯನವರು ,,

---

## ವೀರಶೈವ ವಿದ್ಯಾವರ್ಧಕ ಸಂಘ,

### ಸಕಲೇಶಪುರ.

ಈ ಸಂಘವು ತಾ|| ೨೩-೫-೧೯೨೧ರಲ್ಲಿ ಸಕಲೇಶಪುರದಲ್ಲಿ ಸ್ಥಾಪಿಸಲ್ಪಟ್ಟಿತು. ಸದ್ಯದಲ್ಲಿ ಸಂಘದ ವತಿಯಿಂದ ಒಂದು ವಿದ್ಯಾರ್ಥಿಮಂದಿರವು ನಡೆಸಲ್ಪಡುತ್ತಿದ್ದು ಅದರ ಸಲವಾಗಿ ಸುಮಾರು ೨೫ ಸಹಸ್ರ ರೂಪಾಯಿ ಬೆಲೆಬಾಳುವ ಕಟ್ಟಡವು ಹೊಸದಾಗಿ ಕಟ್ಟಸಲ್ಪಟ್ಟಿತು. ಅದಕ್ಕಾಗಿ ಆ ಪ್ರಾಂತದ ವೀರಶೈವರು ೧೭ ಸಹಸ್ರ ರೂಪಾಯಿಗಳನ್ನು ಕೊಟ್ಟಿರುವರು ಮತ್ತು ಸರ್ಕಾರದವರು ೮೫೦೦ ರೂಪಾಯಿಗಳನ್ನು ಕೊಟ್ಟಿರುವರು. ಸದ್ಯ ಹಾಸ್ಟಲಿನಲ್ಲಿ ಸುಮಾರು ೫೦ ಜನ ಹುಡುಗರಿರುವರು.

**ಅಧಿಕಾರಿ ಮಂಡಲ.**

ಶ್ರೀಯುತ ಐಗೂರು ಮಲ್ಲೇಗೌಡರು ಅಧ್ಯಕ್ಷರು
,, ಆನೇಮಹಲ್ ಎಚ್. ಬಸವೇಗೌಡರು ಉಪಾಧ್ಯಕ್ಷರು
,, ಬೆಳ್ಳೂರು ದೇವಪ್ಪ ಗೌಡರು ಸೆಕ್ರಿಟರಿ

---

## ವೀರಶೈವಾನಂದಾಶ್ರಮ,

### ತಿಪಟೂರು.

ಈ ಆಶ್ರಮವು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಮುರುಘಾ ರಾಜೇಂದ್ರ ಮಹಾಸ್ವಾಮಿಗಳಿಂದ ೧೯೧೨ನೆ ಇಸವಿಯಲ್ಲಿ ಸ್ಥಾಪಿಸಲ್ಪಟ್ಟಿತು. ಆಶ್ರಮದ ಸಲವಾಗಿ ಮಹಾಸ್ವಾಮಿಗಳವರು ಐದು ಸಹಸ್ರ ರೂಪಾಯಿಗಳನ್ನು ಕೊಟ್ಟಿರುವರು. ಕೈ|| ವೇ|| ಗು|| ಕೊಟ್ಟೂರಯ್ಯನವರು ಸುಮಾರು ೧೨ ಸಹಸ್ರ ರೂಪಾಯಿಗಳನ್ನು ಕರ್ಚುಮಾಡಿ ಆಶ್ರಮಕ್ಕೆ ಒಂದು ಕಟ್ಟಡವನ್ನು ಕಟ್ಟಸಿಕೊಟ್ಟಿರುವುದಲ್ಲದೆ, ತಮ್ಮ ಧರ್ಮಪತ್ನಿ ಶ್ರೀ ಸೌ|| ನೀಲಮ್ಮನವರ ಸ್ಮರಣಾರ್ಥ

ಶ್ರೀ ಜಗದ್ಗುರು ಜಯದೇವ ವೀರಶೈವ ವಿದ್ಯಾರ್ಥಿನಿಲಯ, ಚಿತ್ರದುರ್ಗ.




೩ನೇ ಪಂಕ್ತಿಯಲ್ಲಿ ಕುಳಿತಿರುವವರು:—(ಬಲಗಡೆಯಿಂದ.)
(೧) ಮ॥ ರಾ॥ ವೀರಭದ್ರಪ್ಪ, ಮ್ಯಾನೇಜರ್. (೨) ಮ॥ ರಾ॥ ಸತಿ ಹಾಲಪ್ಪ, ಸೆಕ್ರಿಟರಿ. (೩) ಮ॥ ರಾ॥ ಎಸ್. ವೀರಭದ್ರಪ್ಪ, ಪ್ರೆಸಿಡೆಂಟ್.

ವಾಗಿ ೧೦ ಸಹಸ್ರ ರೂಪಾಯಿಗಳ ಮೂಲಧನವನ್ನು ಕೆಲವು ಭೂ ಸ್ಥಿತಿಗಳನ್ನು ದಾನವಾಗಿ ಕೊಟ್ಟಿರುವರು. ಇದಲ್ಲದೆ ಈಗ ತಿಪಟೂರಿನಲ್ಲಿರುವ ಮಾಗಡಿ ಲಾಯರ್ ನಂಜುಂಡಯ್ಯನವರು ತಮ್ಮ ತಂದೆಯವರ ಹೆಸರಿನ ಮೇಲೆ ಕೆಲವು ಜಮೀನನ್ನು ಕೊಟ್ಟು ಸಹಾಯಮಾಡಿರುವರು.

ಸದ್ಯ ಆಶ್ರಮದಲ್ಲಿ ೯೦ ಜನ ವಿದ್ಯಾರ್ಥಿಗಳಿದ್ದು ಅವರ ಅಶನ ವಸತಿಗಳ ಏರ್ಪಾಡು ಉಚಿತವಾಗಿ ಮಾಡಲ್ಪಟ್ಟಿದೆ. ತಿಪಟೂರಿನ ವರ್ತಕಮಂಡಲಿಯವರು ಆಶ್ರಮದ ವೆಚ್ಚಕ್ಕಾಗಿ ಉದಾರಚಿತ್ತದಿಂದ ಸಹಾಯಮಾಡುತ್ತಿರುವರು. ಈಗ ತಿಪಟೂರಿನಲ್ಲಿ ನಡೆಯುತ್ತಿರುವ ಹೈಸ್ಕೂಲು ಮೊದಲು ಈ ಆಶ್ರಮದ ಕಟ್ಟಡದಲ್ಲಿಯೇ ಪ್ರಾರಂಭವಾಯಿತು.

ಆಶ್ರಮಕ್ಕೆ ಸಂಭಂದಪಟ್ಟಂತೆ ಒಂದು ಸಂಸ್ಕೃತ ಪಾಠ ಶಾಲೆಯೂ ಸ್ಥಾಪಿಸಲ್ಪಟ್ಟಿದೆ. ಹಾಲಿ ೩೫ ಜನ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದು ಶಾಲೆಗೆ ಮೈಸೂರು ವಿದ್ಯಾಭ್ಯಾಸದ ಇಲಾಖೆಯವರಿಂದ ತಿಂಗಳೊಂದಕ್ಕೆ ೫೫ ರೂಪಾಯಿಗಳೂ, ಮುನ್ಸಿಪಾಲಿಟಿಯವರಿಂದ ೧೫ ರೂಪಾಯಿಗಳೂ ಗ್ರಾಂಟು ಬರುತ್ತದೆ.

ಇದಕ್ಕೆ ಮ|| ರಾ|| ಜಿ. ತಮ್ಮಯ್ಯನವರು ಸೆಕ್ರಿಟೆರಿಯಾಗಿರುವರು. ಮ|| ರಾ||. ಏಜಂಟ್ ಬಸಪ್ಪನವರು ಈ ಬಗ್ಗೆ ತುಂಬಾ ಶ್ರಮ ವಹಿಸುತ್ತಿರುವರು.

---

## ನಿಜಾಂ ವೀರಶೈವರ ಫಂಡು

### ಯಾದಗಿರಿ.

ನಿಜಾಂ ಕರ್ಣಾಟಕದ ವೀರಶೈವರಲ್ಲಿ ವಿದ್ಯಾಪ್ರೋತ್ಸಾಹವನ್ನು ಹೆಚ್ಚಿಸುವ ಸಲವಾಗಿ ಗುಽಮಠಕಲ್ಲಿನ ಶ್ರೀಮನ್ನಿರಂಜನ ಶಾಂತ ವೀರಸ್ವಾಮಿಗಳು ಈ ನಿಧಿಯನ್ನು ಕೆಲವು ವರ್ಷಗಳ ಹಿಂದೆ ಸ್ಥಾಪಿಸಿದರು. ಸದ್ಯಕ್ಕೆ ನಿಧಿಗೆ ೧೭ ಸಾವಿರ ರೂಪಾಯಿಗಳು ಮಾತ್ರ ಶೇಖರವಾಗಿ ಅದರಿಂದುತ್ಪನ್ನವಾಗುವ ವರಮಾನವು ವೇತನರೂಪದಿಂದ ಹೈದರಾಬಾದಿನ ಬಡ ವಿದ್ಯಾರ್ಥಿಗಳಿಗೆ ಹಂಚಲ್ಪಡುತ್ತಿದೆ. ಹೈದರಾಬಾದಿನ ಸುಲೇಪೇಟೆ ಶ್ರೀಗಳವರು ಫಂಡಿನ ಪ್ರೆಸಿಡೆಂಟರಾಗಿರುತ್ತಾರೆ.

---

## ಶಂಕರ ಸಂಸ್ಕೃತ ಕಾಲೇಜ್

### ಯಾದಗಿರಿ (ಹೈದರಾಬಾದ್.)

ಈ ಸಂಸ್ಥೆಯು ಯಾದಗಿರಿ ಧರ್ಮವೀರ ಶಂಕರಣ್ಣನವರಿಂದ ೧೯೫೫ರಲ್ಲಿ ಸ್ಥಾಪಿತವಾಯಿತು. ಆ ಮಹನೀಯರು ಕೈಲಾಸವಾಸಿಗಳಾಗುವ ಮೊದಲು ಕಾಲೇಜಿನ ಸಲುವಾಗಿ ೧ ಲಕ್ಷ ರೂಪಾಯಿಗಳ ನಿಧಿಯನ್ನು ಕಾದಿಟ್ಟು ಹೋದರು. ಈಗ ಕಾಲೇಜಿಗೆ ೧ ಲಕ್ಷ ನಿಧಿಯಿರುವುದಲ್ಲದೆ ಪ್ರತಿವರ್ಷ ೧೨,೦೦೦ ರೂಪಾಯಿಗಳ ಉತ್ಪನ್ನವಿರುವುದು. ಕಾಲೇಜಿನಲ್ಲಿ ಸಂಸ್ಕೃತವು ಮುಖ್ಯ ಭಾಷೆಯಾಗಿಯೂ, ಹಿಂದಿ, ಇಂಗ್ಲಿಷ್ ಮತ್ತು ಕನ್ನಡಗಳು ಎರಡನೇ ಭಾಷೆಯಾಗಿಯೂ ಕಲಿಸಲ್ಪಡುತ್ತವೆ. ಕಾಲೇಜಿಗೆ ಪ್ರತ್ಯೇಕವಾದ ಕಟ್ಟಡವಿದ್ದು, ಸುಮಾರು ೬೦ ಜನ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿರುವರು ಇವರೆಲ್ಲರಿಗೂ ಕಾಲೇಜಿಗೆ ಹೊಂದಿರುವ ಫ್ರೀ ಬೋರ್ಡಿಂಗಿನಲ್ಲಿಯೇ ಊಟದ ಮತ್ತು ವಾಸದ ವ್ಯವಸ್ಥೆಯು ಮಾಡಲ್ಪಟ್ಟಿದೆ.

ಕಾಲೇಜಿನ ವ್ಯವಸ್ಥೆಯ ಸಲವಾಗಿ ಹನ್ನೆರಡು ಜನ ಮೆಂಬರುಗಳುಳ್ಳ ಒಂದು ಕಮಿಟಿಯಿದ್ದು, ಗುರುಮಠಕಲ್ ಶ್ರೀಮನ್ನಿರಂಜನ ಶಾಂತವೀರಸ್ವಾಮಿಗಳು ಅಧ್ಯಕ್ಷರಾಗಿರುತ್ತಾರೆ.

ವೇ|| ಚಂದ್ರಶೇಖರಶಾಸ್ತ್ರಿ ವ್ಯಾಕರಣತೀರ್ಥ ಯವರು ಕಾಲೇಜಿನ ಪ್ರಿನ್ಸಿಪಾಲರಾಗಿ ಕಾಲೇಜಿನ ವೃದ್ಧಿ ವಿಷಯದಲ್ಲಿ ಶ್ರದ್ಧಾಳುಗಳಿರುತ್ತಾರೆ. ವೀರಶೈವರಲ್ಲಿ ಸಂಸ್ಕೃತ ವಿದ್ಯಾಭಿವೃದ್ಧಿಗೋಸ್ಕರ ಸ್ಥಾಪಿತವಾಗಿರುವ ಸಂಸ್ಥೆಗಳಲ್ಲಿ ಇದು ಅತ್ಯಂತ ಮಹತ್ವದ್ದೆಂದೂ ಇದರಿಂದ ನಮ್ಮ ಸಮಾಜದಲ್ಲಿ ಸಂಸ್ಕೃತಾಭ್ಯಾಸಕ್ಕಿರುವ ಅನಾನುಕೂಲಗಳು ಸ್ವಲ್ಪಮಟ್ಟಿಗೆ ಕಡಿಮೆಯಾಗುವದೆಂದೂ ಹೇಳಬಹುದು. ಕಾಲೇಜು ಸ್ಥಾಪಿತವಾಗಿರುವ ಯಾದಗಿರಿಯು ಹೈದರಾಬಾದ್ ಸೀಮೆಯಲ್ಲಿ ವೀರಶೈವರ ಒಂದು ಮುಖ್ಯಕ್ಷೇತ್ರವಾಗಿ ಅಧಿಕಾಂಶ ವೀರಶೈವರಿಂದೊಡಗೂಡಿದೆ.

---

## ಮದ್ರಾಸು ವೀರಶೈವ ವಿದ್ಯಾವರ್ಧಕ ಸಂಘ.

### ಬಳ್ಳಾರಿ.

ಈ ಸಂಘವು ಬಳ್ಳಾರಿಯಲ್ಲಿ ೨೭-೧೨-೧೯೧೯ರಲ್ಲಿ ಸ್ಥಾಪಿಸಲ್ಪಟ್ಟು ೧೯೨೮ರಲ್ಲಿ ರಿಜಿಸ್ಟ್ರಾಯಿತು. ಸದ್ಯದಲ್ಲಿ ಸುಮಾರು ೯೬ ಸಹಸ್ರ ರೂಪಾಯಿಗಳ ನಿಧಿಯು ಶೇಖರಿಸಲ್ಪಟ್ಟು, ಪ್ರತಿವರ್ಷ ಆರು ಸಹಸ್ರ ರೂಪಾಯಿಗಳ ವರಮಾನವಿರುವುದು.

ಸಂಘದ ವತಿಯಿಂದ ಒಂದು ಎ. ವಿ. ಸ್ಕೂಲು ನಡೆಯುತ್ತಿರುವುದಲ್ಲದೆ, ಅನೇಕ ವಿದ್ಯಾರ್ಥಿಗಳಿಗೆ ವೇತನವನ್ನು ಕೊಡುತ್ತಿರುವರು.

ವಿದ್ಯಾಪ್ರವರ್ಧಕ ಮ|| ರಾ|| ತಿಗರೆ ವೀರಪ್ಪನವರು ೧೪ ಸಾವಿರ ರೂಪಾಯಿಗಳನ್ನು ವ್ಯಯಮಾಡಿ ವಿದ್ಯಾರ್ಥಿನಿಲಯ (ಹಾಸ್ಟೆಲ್) ವನ್ನು ಕಟ್ಟಿಸಿ ಸಂಘಕ್ಕೆ ಅರ್ಪಿಸಿರುವುದಲ್ಲದೆ, ಅವಿಶ್ರಾಂತದಿಂದ ಸೇವೆಯನ್ನು ಮಾಡುತ್ತಿರುವರು.

### ಈ ಸಂಘಕ್ಕೆ ಅಧಿಕವಾಗಿ ದಾನಮಾಡಿದ ಮಹನೀಯರು.

ಶ್ರೀಮದುಜ್ಜಯಿನಿ ಸದ್ಧರ್ಮ ಸಿಂಹಾಸನಾಧೀಶ್ವರಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗರಾಜದೇಶಿಕೇಂದ್ರ ಮಹಾಸ್ವಾಮಿಗಳು. ರೂ. ೫೦೦೦.

ಶ್ರೀಮಜ್ಜಗದ್ಗುರು ಹಿಮವತ್ ಕೇದಾರ್ವೈಕೋ ರಾಮ ವೈರಾಗ್ಯ ಸಿಂಹಾಸನಾಧೀಶ್ವರ ಶ್ರೀಗುರು ಪಟ್ಟಾಧ್ಯಕ್ಷ ನೀಲಕಂಠ ಲಿಂಗರಾಜ ದೇಶಿಕೇಂದ್ರ ರಾವಲ್ ಉಪನಾಮಶೋಭಿತ ಮಹಾಸ್ವಾಮಿಗಳು. ರೂ. ೬೦೦೦.

ಅಲ್ಲದೆ ಇವರು ೪೦೦೦ ರೂಪಾಯಿಗಳು ಬೆಲೆಬಾಳುವ ಬಳ್ಳಾರಿ ಬಾಜಾರದಲ್ಲಿರುವ ೨ ಮನೆಗಳನ್ನು ಸಂಘಕ್ಕೆ ಆಶೀರ್ವದಿಸಿ ಅದರಿಂದ ಬರುವ ವರಮಾನವನ್ನು ಸಂಘದ ವಿದ್ಯಾರ್ಥಿಗಳ ವ್ಯಾಯಾಮಕ್ಕೂ, ಬಹುಮಾನಗಳಿಗೂ ಉಪಯೋಗಿಸುವುದಾಗಿ ಆಶೀರ್ವದಿಸಿರುವರು.

ಕುರುಗೋಡು ನಾಡಗೌಡ್ರ ಮರೇಗೌಡ್ರು ರೂ. ೫೦೦೦
ಹೊಳಗುಂದಿ ಪಂಪನಗೌಡ್ರು ರೂ. ೫೦೦೦
ಬಳ್ಳಾರಿ ಪರಡೀ ನೀಲಮ್ಮನವರು ರೂ. ೫೦೦೦

ಈ ವರ್ಷದ ಮ್ಯಾನೇಜಿಂಗ್ ಕಮಿಟಿಯ ಚಾಲಕರು.

೧. ಅಧ್ಯಕ್ಷರು—ತೊಗರಿ ವೀರಪ್ಪನವರು
೨. ಉಪಾಧ್ಯಕ್ಷರು—ಶೆಟ್ರ ಗವೆಪ್ಪನವರು
೩. ಕೋಶಾಧ್ಯಕ್ಷರು—ಕುಪ್ಪಗಲ್ಲು ಅಯ್ಯಪ್ಪನವರು
೪. ಕಾರ್ಯದರ್ಶಿ—ಹೀರದ ಕರಿಬಸಪ್ಪನವರು
೫. ಉಪಕಾರ್ಯದರ್ಶಿ—ಆರಳೇ ಮುದ್ದಪ್ಪನವರು
೬. ಸ್ಕೂಲು ಮ್ಯಾನೇಜರು—ತೊಗ್ರಿವೀರಮಲ್ಲಪ್ಪನವರು
೭. ಹಾಸ್ಟಲ್ ಸೂಪರಿಂಟೆಂಡೆಂಟ್—ಟಿ. ಹೆಚ್. ಎಂ ಷಡಾಕ್ಷರಯ್ಯನರು ಎಂ. ಎ. ಬಿ. ಎಲ್.
೮. ಹಾಸ್ಟಲ್ ಮ್ಯಾನೇಜರು—ಗಟ್ಟಿನಸೂಗಯ್ಯನವರು

ಸಂಘದ ವತಿಯಿಂದ ಆಂಗ್ಲ ಪ್ರೌಢ ವಿದ್ಯಾಭ್ಯಾಸವನ್ನು ಹೊಂದುತ್ತಿರುವ ೧೦ ಜನ ವಿದ್ಯಾರ್ಥಿಗಳೂ ಕಾಶೀ ವಿದ್ಯಾಪೀಠದಲ್ಲಿ ಸಂಸ್ಕೃತವನ್ನು ಕಲಿಯುತ್ತಿರುವ ಮೂರುಜನ ವಿದ್ಯಾರ್ಥಿಗಳೂ ಮಧ್ಯಮ ತರಗತಿಗಳ ಇತರ ೩೦ ಜನ ವಿದ್ಯಾರ್ಥಿಗಳೂ ವೇತನವನ್ನು ಹೊಂದುತ್ತಿರುವರು. ಇದಕ್ಕೋಸ್ಕರ ಸಂಘವು ವರ್ಷಂಪ್ರತಿ ೨೫೦೦ ರೂಪಾಯಿಗಳನ್ನು ಖರ್ಚುಮಾಡುತ್ತಿರುವುದು. ಅಲ್ಲದೆ ಸಂಘದ ಹಾಸ್ಟಲಿನಲ್ಲಿ ಉಚಿತವಾಗಿ ಊಟಮಾಡುವ ವಿದ್ಯಾರ್ಥಿಗಳ ಸಲವಾಗಿ ೧೦೦ ರೂಪಾಯಿಯೂ ಸಂಘದ ಕನ್ನಡ ಇಂಗ್ಲಿಷ್‌ಶಾಲೆಗೆ ೧೫೦೦ ರೂಪಾಯಿಗಳೂ ವೆಚ್ಚವಾಗುತ್ತಿರುವುದು.

---

## ಶ್ರೀ ಜಗದ್ಗುರು ದಾರುಕಾಚಾರ್ಯ ಸಂಸ್ಕೃತ ಪಾಠಶಾಲೆ,

### ಕೊಟ್ಟೂರು.

ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರು ಉಜ್ಜಯಿನಿ ಸಂಸ್ಥಾನ, ಇವರಿಂದ ಈ ಪಾಠಶಾಲೆಯು ಕೊಟ್ಟೂರಿನಲ್ಲಿ ಸ್ಥಾಪಿಸಲ್ಪಟ್ಟಿತು. ಮಹಾಸ್ವಾಮಿಗಳು ಪಾಠಶಾಲೆಗೆ ೫೦ ಸಹಸ್ರ ರೂಪಾಯಿಗಳ ಮೂಲಧನವನ್ನು ಶೇಖರಿಸಿಕೊಟ್ಟಿರುವರು. ಪಾಠಶಾಲೆಯಲ್ಲಿ ಸಂಸ್ಕೃತ ವೈದಿಕ ಮತ್ತು ಲೌಕಿಕ ವಿದ್ಯಾಭ್ಯಾಸಗಳು ಮಾಡಿಸಲ್ಪಡುವವು.

---

## ನೀಲಗಿರಿ ಲಿಂಗಾಯತ ಸ್ಕೂಲ್,

### ಬ್ರಿಗೇಡ್‌ಲೇನ್, ಕಟರಿ P. O. ನೀಲಗಿರಿ.

ಈ ಸಂಸ್ಥೆಯು ಸುಮಾರು ೧|| ವರ್ಷದ ಹಿಂದೆ ನೀಲಗಿರಿಯ ವೀರಶೈವರಿಂದ ಸ್ಥಾಪಿಸಲ್ಪಟ್ಟಿತು. ಸದ್ಯಕ್ಕೆ ಶಾಲೆಗೆ ೫ ಸಹಸ್ರ ರೂಪಾಯಿಗಳ ಮೂಲಧನವಿದ್ದು ಕಟರಿಯ ವೀರಶೈವ ಲಿಂಗಾಯತ ಯೂನಿಯನ್ ಬ್ಯಾಂಕ್ ಲಿಮಿಟೆಡ್‌ನಲ್ಲಿ ಠೇವಣಾತಿಯಾಗಿಡಲ್ಪಟ್ಟಿದೆ. ಶಾಲೆಯನ್ನು ಸರ್ಕಾರದವರು ವಹಿಸಿಕೊಳ್ಳುವ ಮೊದಲು ಶಾಲೆಯ ಮೂಲಧನವು ೧೫ ಸಹಸ್ರ ರೂಪಾಯಿಗಳಾಗಬೇಕಾಗಿರುವದರಿಂದ ವಿದ್ಯಾಪ್ರೋತ್ಸಾಹಕರ ಆರ್ಥಿಕ ಸಹಾಯವು ನಿರೀಕ್ಷಿಸಲ್ಪಟ್ಟಿರುವುದು.

ಈಗ ಶಾಲೆಯಲ್ಲಿ ಸುಮಾರು ೧೦೦ ಜನ ಹುಡುಗರಿರುವರು. ಹುಡುಗರಲ್ಲಿ ಅರ್ಧಕ್ಕಿಂತ ಹೆಚ್ಚು ಜನರು ಲಿಂಗಾಯಿತರಿರುವರು. ಶಾಲೆಯಲ್ಲಿ ೭ ಜನ ಅಧ್ಯಾಪಕರಿದ್ದು ಮಾಹೆಯಾನಾ ೩೦೦ ರೂಪಾಯಿಗಳ ವೆಚ್ಚವಿರುವುದು. ಮುಂದೆ ಅನಾಥ ವೀರಶೈವ ಬಾಲಕರಿಗೆ ಉಚಿತವಾಗಿ ಅಶನ ವಸನಗಳ ಏರ್ಪಾಡು ಮಾಡುವ ಉದ್ದೇಶವಿರುವುದು.

---

## ಶಿವಯೋಗಾಶ್ರಮ

### ಕಪ್ಪನಹಳ್ಳಿ, ಕೂಡಲೀಕ್ಷೇತ್ರ (ಶಿವಮೊಗ್ಗ)

ಕುಮುದ್ವತಿ, ಹೋರೀ ಹೊಳೆ ಇವುಗಳ ಸಂಗಮ ಕ್ಷೇತ್ರದಲ್ಲಿ ಈ ಆಶ್ರಮವು ಸ್ಥಾಪಿಸಲ್ಪಟ್ಟಿದೆ. ಶಿವಯೋಗಮಂದಿರದ ಪೂಜ್ಯ ಚಾಲಕರಾದ ಹಾನಗಲ್ ಶ್ರೀಗಳವರೇ ಈ ಆಶ್ರಮದ ಉದ್ಭವಕ್ಕೂ ಈಗಿನ ಉನ್ನತಸ್ಥಿತಿಗೂ ಕಾರಣರು. ಶಿಕಾರಿಪುರದ ಹಳೇ ಪಟ್ಟಣ ಶೆಟ್ಟರ ಹಾಲಪ್ಪನವರು ತಮ್ಮ ೩೭ ಎಕರೆ ಜಮೀನನ್ನು ದಾನವಾಗಿ ಕೊಟ್ಟು ಮಂದಿರಕ್ಕೆ ಒಂದು ನೆಲೆಯನ್ನು ಕಲ್ಪಿಸಿಕೊಟ್ಟರು. ಹಾಗೆಯೇ ಶಿಕಾರಿಪುರದ ಮ|| ರಾ|| ಹೊನ್ನಪ್ಪಶೆಟ್ಟರ ಚನ್ನಪ್ಪನವರೇ ಮುಂತಾದ ಭಕ್ತರು ವಿಶೇಷವಾಗಿಕೊಟ್ಟ ಸಹಾಯದಿಂದ ಆಶ್ರಮದ ಸುತ್ತಲಿದ್ದ ಇನ್ನೂ ಕೆಲವು ಕಾಡು ಜಮೀನುಗಳನ್ನು ತೆಗೆದುಕೊಂಡದ್ದರಿಂದ ಆಶ್ರಮದ ಉಪಯುಕ್ತತೆಯು ಮತ್ತಷ್ಟು ಹೆಚ್ಚಿದೆ.

ಆಶ್ರಮದಲ್ಲಿ ಶಿವಯೋಗಿಗಳೂ ಸಂಸ್ಕೃತಾಭ್ಯಾಸಮಾಡುತ್ತಿರುವ ಕೆಲವು ವಿದ್ಯಾರ್ಥಿಗಳೂ ಇರುತ್ತಾರೆ. ಯಾತ್ರೆ, ಸಂತೆ ಮುಂತಾದ ಸಮಯಗಳಲ್ಲಿ ಮತ್ತು ಇತರೆ ವಿಶೇಷದಿನಗಳಲ್ಲಿ ಸುತ್ತಮುತ್ತಲಿನ ಜನಗಳನ್ನು ಸೇರಿಸಿ ಅವರಿಗೆ ಧರ್ಮಬೋಧನೆ ಮಾಡುತ್ತಲಿರುವರು. ಆಶ್ರಮ ವಾಸಿಗಳ ಅಶನ ವಸನಗಳಿಗಾಗಿ ಭೂವ್ಯವಸಾಯವೂ ಮಾಡಲ್ಪಡುತ್ತಿರುವುದು ಮತ್ತು ಆಶ್ರಮವನ್ನು ಒಕ್ಕಲತನದ ಮಾದರೀ ಕ್ಷೇತ್ರವನ್ನಾಗಿ ಮಾಡಬೇಕೆಂದು ಸಂಸ್ಥಾಪಕರ ಉದ್ದೇಶವಿದ್ದು ಆ ಬಗ್ಗೆ ಎಲ್ಲ ಪ್ರಯತ್ನಗಳೂ ನಡೆಯುತ್ತಿರುವವು. ನೀರು ಹಾಯಿಸಲು ಆವಿಯಯಂತ್ರಗಳನ್ನು ಉಪಯೋಗಿಸುತ್ತಿರುವುದಲ್ಲದೆ ಗುಂಟಿ ಹೊಡೆಯಲು ಒಂದು ಭಾರಿ ಟ್ರಾಕ್ಟರನ್ನು ಈಚಿಗೆತಂದಿರುವರು. ಇವುಗಳಿಗಾಗಿ ಶ್ರೀ ನಿರಂಜನ ಜಗದ್ಗುರು ಮೂರುಸಾವಿರ ಮಠದ ಸ್ವಾಮಿಗಳು ಐದು ಸಹಸ್ರ ರೂಪಾಯಿಗಳನ್ನೂ, ಶಿಕಾರಿಪುರದ ಶ್ರಿಯುತ ಹೊನ್ನಶೆಟ್ಟರ ಚನ್ನಪ್ಪನವರು ಹತ್ತು ಸಹಸ್ರ ರೂಪಾಯಿಗಳನ್ನು ಕೊಟ್ಟರುತ್ತಾರೆ.

ಆಶ್ರಮದಲ್ಲಿ ಯಂತ್ರ ವಿಧಾನದಲ್ಲಿ ಮಾಹಿತಿಯುಳ್ಳ ಮಿ|| ಪ್ಲೆಚರ್ ಎಂಬ ಯೂರೋಪಿಯನ್‌ರು ವಾಸವಾಗಿದ್ದು ಪ್ರತಿಫಲಾಪೇಕ್ಷೆಯಿಲ್ಲದೆ ಆಶ್ರಮದ ವ್ಯವಸಾಯದ ಕಾರ್ಯಗಳನ್ನು ಶ್ರದ್ಧೆಯಿಂದ ನಡೆಸಿಕೊಂಡು ಹೋಗುತ್ತಿರುವರು. ಆಶ್ರಮಕ್ಕೆ ಸಂಬಂಧಿಸಿದಂತೆ ಒಂದು ಪುಸ್ತಕಾಲಯವೂ ಇರುವುದು.

ಆಶ್ರಮದ ಸ್ಥಾಪನಕ್ಕೆ ಕಾರಣರಾದ ಹಳೇಪಟ್ಟಣ ಶೆಟ್ಟರೇ ಈಗ ವಾನಪ್ರಸ್ಥಾಶ್ರಮದಲ್ಲಿದ್ದು ಅಲ್ಲಿಯೇ ವಾಸಮಾಡುತ್ತಾ ಕೆಲಸಗಳನ್ನು ನಡೆಸುತ್ತಿರುವರು.

---



ಅಣ್ಣಾ ಬಾಬಾಜಿ ಚಂಗಲ ಬಿ.ಎ., ಎಲ್‌ಎಲ್‌ಬಿ.,
ಚೀಫ್ ಜಡ್ಜರು, ಕೊಲ್ಲಾಪುರ



ಯ೯. ಡಿ. ಶ್ರೇಷ್ಠಿ ಬಿ.ಎ., ಎಲ್‌ಎಲ್‌ಬಿ., ಪ್ರೆಸಿಡೆಂಟ್
ಕೊಲ್ಹಾಪುರ ಮುನಿಸಿಪಾಲಿಟಿ.



ಗುರುವರ್ಯ ವೀರಬಸವ ಶಿವಲಿಂಗಪ್ಪಾ
ಶ್ರೇಷ್ಠಿ ಬಿ ಎ., ನಿಪ್ಪಾಣಿ.



ಬಿ. ಪಿ. ಪಾಟೀಲ್ ಫೋಟೋ ಆರ್ಟಿಸ್ಟ
ಕೊಲ್ಲಾಪುರ.



ಎಸ್. ಜಿ. ಹಿರೇಮಠ ಬಿ ಎ.
ಮ್ಯಾಜಿಸ್ಟ್ರೇಟ್, ಕೊಲ್ಲಾಪುರ.



ಕೆ. ವಿ. ವೀರಣ್ಣನವರು, [illegible]ರು



ಎಂ. ವಿ. ಮರುಳಸಿದ್ದಯ್ಯನವರು ವ್ಯಾಪಾರ, ಬೀರೂರು



ಕೆ ವಿ. ಶಾಂತವೀರಪ್ಪನವರು, [illegible]



ಎಂ. ರುದ್ರಯ್ಯ, [illegible]



ಗುರಿಕಾರ
ಬಸವಲಿಂಗಪ್ಪನವರು,
ಮೈಸೂರು



ಎಚ್ ಭದ್ರಪ್ಪನವರು
ಮು|| ಕೌನ್ಸಿಲರ್, ಬೆಂಗಳೂರು



ಜಿ. ಎಂ. ಮಹದೇವಯ್ಯನವರು, [illegible]



ಕೆ. [illegible], ಅರಳೀ[illegible]ದಾರ, ಚಿತ್ರದುರ್ಗ



ಗುರುಲಿಂಗಪ್ಪ ಗುಳೇದಗುಡ್ಡ



ಸಿದ್ದಪ್ಪ ಗಂಗಪ್ಪ ಕಮ್ಮಾರ, ಹುಬ್ಬಳ್ಳಿ.



T. H. M. ಚಂದ್ರಶೇಖರಯ್ಯ, B.A., B.L., ಬಳ್ಳಾರಿ.
T. H. M. ಸಿದ್ದಯ್ಯ B.A., B.L., ಹೊಸಪೇಟೆ.
H. ಉದ್ದಾನಯ್ಯ, B.A., B.L., ಹೊಸಪೇಟೆ.
B . ಜೋಗಯ್ಯ, M. A., ಹೊಸಪೇಟೆ.



ದೊಡ್ಡಪ್ಪ ಶರಣಬಸಪ್ಪ, ಕಲಬುರ್ಗಿ.



ವೇ|| ನಾಯಕಲ್ ಬಸವರಾಜ ಶಾಸ್ತ್ರಿಗಳು.



ವೇ| ಚಂದ್ರಶೇಖರ ಶಾಸ್ತ್ರಿ, ಯಾದಗಿರಿ.



ಗುರುಭಕ್ತಕೇಸರಿ, ಹಮ್ಮಿಗಿ.



ಶಿವಶಂಕರ ರಾವ್ ಅಮರೇಶ್ವರ ರಾವ್, ಬೆಳ್ಳಿಗನೂರ.



ಚಿದರೆಮಠದ ವೀರಭದ್ರಶರ್ಮ.



ಅಮೀನರಡ್ಡಿ ವೆಂಕಟರಡ್ಡಿ ದೇಶಮುಖ, ಕೊಂಡಗಲ್.



ವೇ|| ಪಂಡಿತ ಕಾಶೀನಾಥಶಾಸ್ತ್ರಿಗಳು, ಕಾವ್ಯತೀರ್ಥ
ನಾಗನೂರು ಮಠಾಧ್ಯಕ್ಷರು



ವೇ|| ಪಿ. ಆರ್. ಕರಿಬಸವಶಾಸ್ತ್ರಿಗಳು
ಕರ್ನಾಟಕ ಭಾಷಾರತ್ನ, ಮೈಸೂರು



ವೇ|| ವಿರೂಪಾಕ್ಷಶಾಸ್ತ್ರಿಗಳು, ತಿಪಟೂರು.



ವೇ|| ಉಮಚಿಗಿ ಶಂಕರಶಾಸ್ತ್ರಿಗಳು, [illegible]



ವೇ|| ಸಂಪಿಗೆ ಸಿದ್ಧಲಿಂಗಶಾಸ್ತ್ರಿಗಳು, ತಿಪಟೂರು



ವೇ|| ಶಿವಕಥಾ ಪಂಡಿತ ಶಿವಯ್ಯಶಾಸ್ತ್ರಿಗಳು
ಮೈಸೂರು



ವೇ|| ಶಿವಕೀರ್ತನ ಕವಿಕೇಸರಿ ಶಿವದೇವ
ಶಾಸ್ತ್ರಿಗಳು, ದೊಡ್ಡಬಳ್ಳಾಪುರ



ವೇ|| ಶಿವಕಥಾಭೂಷಣ
ಜಿ. ನಂಜುಂಡಾರಾಧ್ಯರು
ಆರಾಧ್ಯಮಠ, ಹುಣಸೀಘಟ್ಟ



ಮ|| ಯಂ. ವೀರಪ್ಪ, ಆರ್ಟಿಸ್ಟ್, ಮೈಸೂರು



ವೇ|| ಕವಿರತ್ನ ಶಿವಮೂರ್ತಿಶಾಸ್ತ್ರಿಗಳು, ತುಂಕೂರು



ಮ|| ಅರುಣಾಚಲಪ್ಪನವರು
ಹಾರ್ಮೋನಿಸ್ಟ್, ಬೆಂಗಳೂರು ಸಿಟಿ

## ಮದ್ರಾಸು ವೀರಶೈವಾಶ್ರಮ,

### ಸಾಹುಕಾರ್‌ಪೇಟೆ ಮದ್ರಾಸ್.

ಮದ್ರಾಸಿನಲ್ಲಿ ಪ್ರೌಢ ವಿದ್ಯಾಭ್ಯಾಸಮಾಡುವ ವಿದ್ಯಾರ್ಥಿಗಳ ಸೌಲಭ್ಯಕ್ಕಾಗಿ ಈ ಆಶ್ರಮವು ಸುಮಾರು ೧೯೧೫ರಲ್ಲಿ ಸ್ಥಾಪಿಸಲ್ಪಟ್ಟಿತು. ಆಗ್ಗೆ ಮದ್ರಾಸಿನಲ್ಲಿ ಓದುತ್ತಿದ್ದ ವೀರಶೈವ ವಿದ್ಯಾರ್ಥಿಗಳೇ ಇದರ ಸ್ಥಾಪನೆಗೂ ವ್ಯವಸ್ಥೆಗೂ ಕಾರಣಕರ್ತರಾಗಿರುವರು. ದಿವಂಗತರಾದ ಪುಂಗನೂರು ಮಹಾರಾಜರವರೂ, ಮದ್ರಾಸಿನ ಮತ್ತೆ ಕೆಲವು ಗೃಹಸ್ಥರೂ ಈ ಆಶ್ರಮಕ್ಕೆ ಬಹುವಾಗಿ ಸಹಾಯ ಮಾಡಿರುವರು.

ಮದ್ರಾಸಿನ ವೀರಶೈವಾಶ್ರಮದಲ್ಲಿದ್ದುಕೊಂಡು ಅಭ್ಯಾಸಮಾಡಿದ ವಿದ್ಯಾರ್ಥಿಗಳನೇಕರು ಈಗ ಬಳ್ಳಾರಿ, ಹೊಸಪೇಟೆ, ಬೆಂಗಳೂರು, ಮೈಸೂರು, ದಾವಣಗೆರೆ, ಹಾಸನ, ಶಿವಮೊಗ್ಗ, ಕೊಳ್ಳೇಗಾಲ, ಮುಂತಾದ ಸ್ಥಳದಲ್ಲಿ ವಕೀಲರಾಗಿರುವರು. ಇವರಲ್ಲಿ ಶ್ರೀಯುತರುಗಳಾದ ಟಿ. ಎಚ್. ಎಂ. ಸಿದ್ಧಯ್ಯ ಹೊಸಪೇಟೆ, ಡಿ. ಕುಮಾರ ರಡ್ಡಿ ಬಳ್ಳಾರಿ, ಜಿ. ಕೆ. ವಿಶ್ವನಾಥಂ ಗುಂಟೂರು, ಎಂ. ಪಿ. ಭೋಗಯ್ಯ ಮೈಸೂರು, ಎಂ. ಸುಬ್ರಹ್ಮಣ್ಯಂ ಬೆಜವಾಡ. ಡಿ. ಎಚ್. ಚಂದ್ರಶೇಖರಯ್ಯ ದಾವಣಗೆರೆ, ಇವರು ಪ್ರಸಿದ್ಧರಾಗಿರುವರು.

---

## ವೀರಶೈವ ಧರ್ಮಾರ್ಥ ಜ್ಯೋತಿಷ ಪಾಠಶಾಲೆ,

### ಹರಪನಹಳ್ಳಿ.

ವೇ॥ ಹೊಳೆ ಬಸವಶಾಸ್ತ್ರಿಗಳಿಂದ ಸುಮಾರು ೧೫ ವರುಷಗಳಿಂದ ನಡೆಸಲ್ಪಡುತ್ತದೆ. ಸುತ್ತುಮುತ್ತಲಿನ ಪ್ರಾಂತಗಳಲ್ಲಿನ ಜ್ಯೋತಿಷ್ಕರಲ್ಲಿ ಮುಕ್ಕಾಲುಪಾಲು ಜನಗಳು ಈ ಪಾಠಶಾಲೆಯಲ್ಲಿ ಅಭ್ಯಾಸಮಾಡಿದವರು. ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಅನ್ನಾಹಾರಗಳನ್ನು ಕೊಡುವುದಲ್ಲದೆ, ಜ್ಯೋತಿಷ ವಿದ್ಯವೂ ಹೇಳಲ್ಪಡುತ್ತಿದೆ ಈ ಪ್ರಾಂತ್ಯದ ವೀರಶೈವ ದೊಡ್ಡಮನುಷ್ಯರ ಸಹಾಯವೂ ಉತ್ತೇಜನವೂ ಶಾಲೆಗೆ ದೊರಕುತ್ತಿದೆ. ಈ ಶಾಲೆಯ ಮುಖ್ಯಾಧ್ಯಾಪಕರಾದ ವೇ॥ ಹೊಳೇ ಬಸವಶಾಸ್ತ್ರಿಗಳು ಪ್ರಸಿದ್ಧ ಜ್ಯೋತಿಷ್ಕರೂ ಪಂಚಾಂಗ ಕರ್ತರೂ ಆಗಿದ್ದಾರೆ.

---

## ಶ್ರೀ ಕರಿಬಸವ ಸ್ವಾಮಿ ಲಿಂಗಾಯತ ಹೈಸ್ಕೂಲ್, ಉರವಕೊಂಡೆ.

ಶ್ರೀ ಕರಿಬಸವ ಸ್ವಾಮಿಗಳವರು ೧೯೧೮ ರಲ್ಲಿ ಪ್ರಾರಂಭಮಾಡಿದರು. ಶ್ರೀಗಳವರು ಇದಕ್ಕೆ ೧೦,೦೦೦ ರೂಪಾಯಿಗಳನ್ನು ಕೊಟ್ಟಿರುತ್ತಾರೆ ಮತ್ತು ಈ ಸ್ಕೂಲಿಗೆ ಸಂಬಂಧಪಟ್ಟಂತೆ ಒಂದು ವೀರಶೈವ ವಿದ್ಯಾರ್ಥಿ ಭವನವನ್ನು ಸ್ಥಾಪನ ಮಾಡಿರುತ್ತಾರೆ. ಅದರಲ್ಲಿ ಸುಮಾರು ೨೦ ವಿದ್ಯಾರ್ಥಿಗಳಿರುವರು. ಪ್ರಕೃತದಲ್ಲಿ ಶಾಲೆಯು ಅನಂತಪುರದ ಜಿಲ್ಲಾ ಬೋರ್ಡಿನ ವ್ಯವಸ್ಥೆಯಲ್ಲಿದೆ. ಶಾಲೆಯಲ್ಲಿ ವೀರಶೈವರೂ ಮತ್ತು ವೀರಶೈವೇತರರೂ ಸೇರಿ ಸುಮಾರು ೧೫೦ ಹುಡುಗರಿರುತ್ತಾರೆ. ಸ್ವಾಮಿಗಳ ಶಿಷ್ಯರಲ್ಲೊಬ್ಬರಾದ ರಾವ್‌ಸಾಹೇಬ ಹಂಪಯ್ಯನವರು ಬಹಳ ಪ್ರೋತ್ಸಾಹದಿಂದಲೂ ಹುರುಪಿನಿಂದಲೂ ಶಾಲೆಗೆ ಸಹಾಯ ಮಾಡುತ್ತಿದ್ದಾರೆ. ಈ ಶಾಲೆಯನ್ನು ಸ್ಥಾಪಿಸಿರುವ ಶ್ರೀ ವಿರಕ್ತ ಮಠದ ಕರಿಬಸವ ಸ್ವಾಮಿಗಳು ಅನಂತಪುರ ಪ್ರಾಂತದ ವೀರಶೈವರಲ್ಲಿ ಜಾಗ್ರತಿಯನ್ನು ಹುಟ್ಟಿಸುವುದರಲ್ಲಿ ಬಹಳಶ್ರದ್ಧೆಯನ್ನು ವಹಿಸಿರುತ್ತಾರೆ.

---

## ಶ್ರೀ ವೀರಶೈವ ವಿದ್ಯಾವರ್ಧಕ ಸಂಘ,

### ಬೋಡಿಪೇಟ, ಗುಡಿಯಾತಂ;

ಈ ಸಂಸ್ಥೆಯು ಶ್ರೀ ಶ್ರೀ ಶಂಭುಲಿಂಗಸ್ವಾಮಿಗಳ ಮಠಾಲಯದಲ್ಲಿ ೨೫-೧೧-೧೯೨೧ರಲ್ಲಿ ಸ್ಥಾಪಿತವಾಯಿತು. ಉತ್ತರ ಆರ್ಕಾಟು ಜಿಲ್ಲೆಯೊಳಗಿನ ವೀರಶೈವರಲ್ಲಿ ವಿದ್ಯಾ ಪ್ರೋತ್ಸಾಹವನ್ನುಂಟುಮಾಡುವುದೇ ಸಂಘದ ಉದ್ದೇಶವು. ಜಿಲ್ಲೆಯಲ್ಲಿನ ವೀರಶೈವ ಸದ್ಗೃಹಸ್ಥರು ಸಂಘಕ್ಕೆ ಧನ ಸಹಾಯ ಮಾಡಿರುವರು.

**ಸಂಘದ ಅಧಿಕಾರಿ ಮಂಡಲ.**

**ಅಧ್ಯಕ್ಷರು.**

ಶ್ರೀಯುತ ಹೆಚ್. ಎಸ್. ಶಿವಲಿಂಗಪ್ಪನವರು, ಆಂಬೂರು.

**ಕಾರ್ಯದರ್ಶಿಗಳು.**

ಶ್ರೀಯುತರುಗಳಾದ ಸಿ. ಕೆ. ಸಾವಳಪ್ಪನವರು ಮತ್ತು ಹೆಚ್. ಬಿ. ಸಾವಳಪ್ಪನವರು.

---

## ಕಂಪ್ಲಿ ತೆಗ್ಗಿನಮಠದ ಸಂಸ್ಕೃತ ಪಾಠಶಾಲಾ,

### ಕಂಪ್ಲಿ ತಾ॥ ಹಾಸಿನಪ್ಯಾಟಿ, ಡಿ॥ ಬಳ್ಳಾರಿ.

ಕಂಪ್ಲಿ ತೆಲಗಿನ ಮಠದ ಕೈ॥ ಶೆಟ್ರ ಕರಿವೀರಪ್ಪನವರು ಐದು ಸಹಸ್ರ ರೂಪಾಯಿ ಮೂಲ ಧನವನ್ನಿತ್ತು ಈ ಪಾಠಶಾಲೆಯನ್ನು ಸ್ಥಾಪಿಸಿರುತ್ತಾರೆ. ಪ್ರಕೃತದಲ್ಲಿ ಅವರು ನೇಮಕಮಾಡಿ ಹೋದ ಟ್ರಸ್ಟಿಗಳಿಂದ ಪಾಠಶಾಲೆಯ ವ್ಯವಸ್ಥೆಯು ನಡೆಯುತ್ತಿದ್ದು, ಸುಮಾರು ೪೦ ಜನ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವರು. ಕಾಶಿಯ ಪಂಡಿತ ವೇ॥ ಜಗನ್ನಾಥ ಶಾಸ್ತ್ರಿಗಳು ಶಾಲೆಯ ಮುಖ್ಯಾಧ್ಯಾಪಕರಾಗಿರುವರು.

---

## ಶ್ರೀ ಗುರುವರ್ಗ ಧರ್ಮ ಸುಧಾರಕ ಪಾಠಶಾಲಾ,

### ಹಿರಿಹಡಗಲಿ, ಡಿ॥ ಬಳ್ಳಾರಿ.

ಈ ಪಾಠಶಾಲೆಯು ೬-೧೧-೧೯೨೨ರಲ್ಲಿ ಹಿರೇಹಡಗಲಿಯಲ್ಲಿ ಸ್ಥಾಪಿತವಾಗಿರುವುದು. ಸಂಸ್ಕೃತ ವೈದಿಕ ಮತ್ತು ಲೌಕಿಕ ಪಾಠಗಳೂ ಪೌರೋಹಿತ್ಯ ಮತ್ತು ಜ್ಯೋತಿಷ್ಯ ಶಿಕ್ಷಣೆಯೂ ಕೊಡಲ್ಪಡುವವು. ಶ್ರೀ ವಿರೂಪಾಕ್ಷ ಶಾಸ್ತ್ರಿ ಪುರಾಣಿಕಮಠ ಇವರು ಅಧ್ಯಾಪಕರಾಗಿರುವರು.

---

## ಶ್ರೀ ವೀರಶೈವ ಸಂಸ್ಕೃತ ಪಾಠಶಾಲಾ.

### ಹೊಸಪೇಟೆ, ಬಳ್ಳಾರಿ ಡಿಸ್ಟ್ರಿಕ್ಟು.

ಈ ಪಾಠಶಾಲೆಯನ್ನು ಹೊಸಪೇಟೆಯ ಕೆಲವು ವೀರಶೈವ ಪ್ರಮುಖ ಗೃಹಸ್ಥರು ೩೧-೧೦-೩೩ರಲ್ಲಿ ಸ್ಥಾಪಿಸಿದರು. ಈ ಪಾಠ ಶಾಲೆಗೆ ಶ್ರೀ ಜಗದ್ಗುರು ಕೇದಾರಪೀಠದ ಶ್ರೀಗಳವರು ಎರಡು ಸಹಸ್ರ ರೂಪಾಯಿಗಳನ್ನೂ ಶ್ರೀ ಜಗದ್ಗುರು ಉಜ್ಜಯಿನೀ ಪೀಠದ ಶ್ರೀಗಳ ವರು ಎರಡು ಸಹಸ್ರ ರೂಪಾಯಿಗಳನ್ನೂ ಶ್ರೀ ಜಗದ್ಗುರು ರಂಭಾ ಪುರೀ ಮಹಾಸಂಸ್ಥಾನದ ಶ್ರೀಗಳವರು ಎರಡುಸಹಸ್ರ ರೂಪಾಯಿ ಗಳನ್ನೂ ವಾಗ್ದಾನ ಮಾಡಿರುವರು. ಸದ್ಯ ಶಾಲೆಯಲ್ಲಿ ಸುಮಾರು ೧೫ ಜನ ವಿದ್ಯಾರ್ಥಿಗಳಿರುವರು. ಶಾಲೆಯ ಮೂಲಧನವಾಗಿ ೩ ಸಹಸ್ರ ರೂಪಾಯಿಗಳನ್ನು ಶೇಖರಿಸಿರುವರು.

### ಕಾರ್ಯನಿರ್ವಾಹಕ ಕಮಿಟಿಯವರು.

೧. ಮ|| ರಾ|| ನಿಂಬಗಲ್ ಚನ್ನವೀರಯ್ಯನವರು, ಹೊಸಪೇಟೆ.
೨. „ ಕೊಟ್ಟೆ ವಿರೂಪಾಕ್ಷಪ್ಪನವರು ,,
೩. „ ಸಜ್ಜೇದ ಲಿಂಗಪ್ಪನವರು „
೪. „ ಜೂಲಿ ಬಸಪ್ಪನವರು ,,

### ಸೆಕ್ರೆಟರಿ.

ಶೀಲವಂತರ ರೇವಪ್ಪನವರು, ಹೊಸಪೇಟೆ.

---

# ವೀರಶೈವರ ಪತ್ರಿಕೆಗಳು.

## ವಾರ ಪತ್ರಿಕೆಗಳು.

**ಮೈಸೂರು ಸ್ಟಾರ್, ಮೈಸೂರು.**
ಸಂಪಾದಕ—ವೈ. ವಿರೂಪಾಕ್ಷಯ್ಯನವರು.

**ಪಂಚಾಚಾರ್ಯ ಪ್ರಭಾ, ಮೈಸೂರು.**
ಸಂಪಾದಕ—ವೇ|| ಶಿರಸಿ ಗುರುಶಾಂತ ಶಾಸ್ತ್ರಿಗಳು.

**ಲೋಕಮತ, ಹುಬ್ಬಳ್ಳಿ.**
ಸಂಪಾದಕ—ವಿ. ಬಿ. ಪುರಾಣಿಕ, ಬಿ.ಎ.

**ಕರ್ನಾಟಕ ಟೈಂಸ್, ಧಾರವಾಡ.**
ಸಂಪಾದಕ—ಟಿ. ಎಚ್. ಶಿವಲಿಂಗ ಶಾಸ್ತ್ರಿಗಳು.

**ಬಸವರಾಜ, ಹಾವೇರಿ.**
ಸಂಪಾದಕ—ಚನ್ನಬಸಪ್ಪ, ಹಾಲಪ್ಪನವರ.

**ನವ ಕರ್ನಾಟಕ, ಬಿಜಾಪುರ.**
ಸಂಪಾದಕ—ರಾ|| ಸಾ|| ಫ. ಗು. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ.

**ಮುಂದಾಳು, ಬಿಜಾಪುರ.**
ಸಂಪಾದಕ—ವಿ. ಎಸ್. ಗುಡಗುಂಟಿ.

---

## ಮಾಸ ಪತ್ರಿಕೆಗಳು.

**ಧರ್ಮ ಸಂಜೀವಿನೀ, ಯಾದಗಿರಿ.**
ಸಂಪಾದಕರು—ವೇ|| ಬಸವರಾಜ ಶಾಸ್ತ್ರಿಗಳು, ಬಸವಪ್ಪ ಶಾಸ್ತ್ರಿಗಳು.

---

## ತ್ರೈಮಾಸಿಕ ಪತ್ರಿಕೆ.

**ಶಿವಾನುಭವ, ಬಿಜಾಪುರ.**
ಸಂಪಾದಕ—ರಾ|| ಸಾ|| ಫ. ಗು. ಹಳಕಟ್ಟಿ, ಬಿ.ಎ., ಎಲ್‌ಎಲ್.ಬಿ.

